# ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ

ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್ ಡಿ ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
ಸಜಿದ ನಾಜ್

ಮಾರ್ಗದರ್ಶಕರು
ಡಾ. ಕೆ. ಎಂ. ಮೇತ್ರಿ
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ

ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್ ಡಿ ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
**ಸಬಿಹ ನಾಜ್**
ನೋಂದಣಿ ಸಂ. ೧೧೪೪

ಮಾರ್ಗದರ್ಶಕರು
**ಡಾ ಕೆ ಎಂ ಮೇತ್ರಿ**
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸಬಿಹ ನಾಜ್** ಅವರು **"ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ" (Chapparband : A social study of De-notified Tribe)** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಸ್ವತಃ ಕ್ಷೇತ್ರಕಾರ್ಯ ಕೈಗೊಂಡು ಸಂಗ್ರಹಿಸಿದ ಸಂಶೋಧನ ಸಾಮಾಗ್ರಿಯ ಆಧಾರದ ಮೇಲೆ ಈ ಮಹಾಪ್ರಬಂಧ ರಚಿತವಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಕೆ.ಎಂ. ಮೇತ್ರಿ)
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 28-9-2017

# ಪ್ರಮಾಣ ಪತ್ರ

**"ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ" (Chapparband : A social study of De-notified Tribe)** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು **ಡಾ.ಕೆ.ಎಂ.ಮೇತ್ರಿ** ಅವರ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Sabiha

**(ಸಬಿಹ ನಾಜ್)**
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

**ಸ್ಥಳ** : ವಿದ್ಯಾರಣ್ಯ
**ದಿನಾಂಕ:** 28-09-2017

## ಪರಿಶಿಷ್ಟಗಳು

**ಕೋಷ್ಟಕಗಳು**

## ವೃತ್ತಚಿತ್ರಗಳು ಮತ್ತು ಲಂಬಚಿತ್ರಗಳು

### ವೃತ್ತಚಿತ್ರ

**ಲಂಬಚಿತ್ರ**



**ನಕ್ಷೆಗಳು**

# ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಸ್ವರೂಪ–ವ್ಯಾಪ್ತಿ–ಉದ್ದೇಶ–ವಿಧಾನ

ಪ್ರವೇಶ

ಇದುವರೆಗಿನ ಅಧ್ಯಯನಗಳು

ಅಧ್ಯಯನದ ಪ್ರಮೇಯಗಳು

ಅಧ್ಯಯನದ ಉದ್ದೇಶಗಳು

ಅಧ್ಯಯನದ ವ್ಯಾಪ್ತಿ

ಅಧ್ಯಯನದ ಮಹತ್ವ

ಅಧ್ಯಯನದ ವಿನ್ಯಾಸ ಮತ್ತು ವಿಧಾನ

ಅಧ್ಯಯನದ ಅಧ್ಯಾಯಗಳ ಸಂಕ್ಷಿಪ್ತ ಸಾರಾಂಶ

## ಅಧ್ಯಾಯ ಒಂದು

# ಪ್ರಸ್ತಾವನೆ

ಭೂಮಿಯ ಮೇಲೆ ಮಾನವನು ಹುಟ್ಟಿದ ದಿನದಿಂದ ಇಂದಿನವರೆಗೂ ಅವನು ಸಾಗಿ ಬಂದ ದಾರಿಯನ್ನು ನೋಡಿದರೆ ಕಾಲ ಕಾಲಕ್ಕೆ ಬದಲಾವಣೆಯನ್ನು ಹೊಂದಿದ್ದಾನೆ. ಮೊದಲಿಗೆ ಮಾನವನು ಹೊಟ್ಟೆ ಪಾಡಿಗಾಗಿ ಬೇಟೆಯನ್ನು ಅವಲಂಬಿಸಿ ಜೀವನವನ್ನು ನಿರ್ವಹಿಸುತ್ತಿದ್ದ. ನಂತರ ಹಂತದಲ್ಲಿ ಪಶುಪಾಲನೆ ಕೈಗೊಂಡು ಹೊಟ್ಟೆ ಹೊರೆಯಲು ಪ್ರಾರಂಭಿಸಿದ. ನಂತರ ಕೃಷಿಯನ್ನು ಅವಲಂಬಿಸಿಕೊಂಡು ಬದುಕಿನ ರೂಪರೇಷೆಗಳನ್ನು ರೂಢಿಸಿಕೊಂಡು ಸಾಗಿ ಬಂದುದು ಇತಿಹಾಸದಿಂದ ತಿಳಿದುಬರುತ್ತದೆ.

ಭೂಮಿಯ ಮೇಲಿನ ಜೀವ ಸಂಕುಲಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಭೂ ಮಂಡಲದ ಮೇಲೆ ಜೀವ–ಜಂತುಗಳು, ಕ್ರಿಮಿಕೀಟಗಳು, ಪ್ರಾಣಿ–ಪಕ್ಷಿಗಳು ಮೊದಲು ಸೃಷ್ಟಿಗೊಂಡವು. ನಂತರ ಮಾನವನ ವಿಕಾಸವಾಯಿತು. ಆದಿಮಾನವ ಹಣ್ಣು–ಹಂಪಲು ಹಾಗೂ ಪಕ್ಷಿಗಳ ಮೊಟ್ಟೆಗಳನ್ನು, ಗೆಡ್ಡೆ–ಗೆಣಸುಗಳನ್ನು ಗಿಡಗಳ ಹಾಗೂ ಕಲ್ಲು ಬಂಡೆಗಳ ಆಶ್ರಯದಲ್ಲಿ ಸಂಗ್ರಹಿಸುತ್ತಿದ್ದನು. ಪ್ರಾಣಿ ಪಕ್ಷಿಗಳನ್ನು ಮಾರಕಾಸ್ತ್ರಗಳ ಸಹಾಯದಿಂದ ಬೇಟೆ ಯಾಡುತ್ತಿದ್ದನು. ಕಾಲಕ್ಕೆ ತಕ್ಕಂತೆ ಆಹಾರ ಜೀವನ ರೂಢಿಸಿಕೊಂಡನು. ಅವನಿಗೆ ಬೇಟೆಗಾರಿಕೆಯೇ ಜೀವನೋಪಾಯವಾಗಿತ್ತು. ಅದುವೇ ಆತನ ಮೂಲ ಕಸುಬಾಗಿತ್ತು. ಅಲ್ಲದೆ ಪ್ರಾರಂಭದಲ್ಲಿ ಅತಿವೃಷ್ಟಿ, ಅನಾವೃಷ್ಟಿ, ಪ್ರಕೃತಿ ವಿಕೋಪಗಳಿಂದ ತಪ್ಪಿಸಿಕೊಳ್ಳಲು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅಲೆಮಾರಿಯಂತೆ ಜೀವಿಸತೊಡಗಿದನು. ಅಲ್ಲಿನ ಗಿಡ ಮರ, ಹೂವು ಬಳ್ಳಿ, ಪ್ರಾಣಿ ಪಕ್ಷಿಗಳೊಂದಿಗೆ ಅವಿನಾಭಾವ ಸಂಬಂಧವಿಟ್ಟುಕೊಂಡಿದ್ದನು. ಹೀಗೆ ಆಹಾರ ಮತ್ತು ಆಶ್ರಯಕ್ಕಾಗಿ ಅರಣ್ಯವನ್ನು ಅವಲಂಬಿಸಿಕೊಂಡನು. ಇದು ಮಾನವ

ಜೀವನದ ಪ್ರಾಥಮಿಕ ಕಾಲಘಟ್ಟವೆಂದೇ ಕರೆಯಲಾಗುತ್ತದೆ. ಹೀಗೆ ಮಾನವನು ಕಾಡಿನಲ್ಲಿ ತನ್ನ ಬದುಕನ್ನು ರೂಪಿಕೊಂಡು ಜೀವಿಸತೊಡಗಿದನು. ನಂತರ ಕುಟುಂಬ, ಕುಲ, ಸಮುದಾಯಗಳ ಪರಿಕಲ್ಪನೆ ಶುರುವಾಯಿತು. ಒಂದೇ ಕುಲವನ್ನು ಹೊಂದಿರುವ ಅನೇಕ ಕುಟುಂಬಗಳು ಸೇರಿ ಸಮುದಾಯ/ಪಂಗಡಗಳಾದವು. ಇಂತಹ ಅನೇಕ ಪಂಗಡ ಅಥವಾ ಸಮುದಾಯಗಳು ಕಾಡಿನಲ್ಲಿ ಸ್ವಚ್ಛಂದವಾದ ಬದುಕನ್ನು ನಡೆಸುತ್ತಿದ್ದರು. ಅವುಗಳನ್ನು ಆದಿವಾಸಿಗಳು, ಅಲೆಮಾರಿಗಳು, ಬುಡಕಟ್ಟುಗಳು ಎಂಬಿತ್ಯಾದಿ ಹೆಸರುಗಳಿಂದ ಕರೆಯುತ್ತಿದ್ದರು. ಕಾಡಿನಲ್ಲಿ ದೊರೆಯುವ ಅರಣೋತ್ಪನ್ನಗಳನ್ನು ಉಪಯೋಗಿಸಿಕೊಂಡು ಸ್ವಂತಂತ್ರವಾದ ಜೀವನ ನಡೆಸುತ್ತಿದ್ದರು. ಅವುಗಳಲ್ಲಿ ಕೆಲವು ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳು ಸಹ ಇದ್ದವು. ಇಂತಹ ಅನೇಕ ಸಮುದಾಯಗಳು ಸಮಾಜದ ಮುಖ್ಯವಾಹಿನಿಗೆ ಅಪರಿಚಿತವಾಗಿಯೇ ಉಳಿದಿದ್ದವು. ಭಾರತೀಯ ರಾಜರ ಮತ್ತು ಮುಸ್ಲಿಂ ರಾಜರ ಆಡಳಿತದಲ್ಲಿಯೂ ಇಂತಹ ಸಮುದಾಯಗಳಿಗೆ ಯಾವುದೇ ರೀತಿಯ ತೊಂದರೆ ಬರಲೇ ಇಲ್ಲ. ಆದರೆ ಭಾರತದಲ್ಲಿ ಬ್ರಿಟಿಷರ ಆಗಮನದಿಂದಾಗಿ ಇಂತಹ ಸಮುದಾಯಗಳು ತೊಂದರೆಗೆ ಸಿಲುಕಿಕೊಂಡವು. ಬ್ರಿಟಿಷರಿಗೆ ಭಾರತೀಯ ಸಂಸ್ಕೃತಿಯ ಪರಿಚಯವೇ ಇರಲಿಲ್ಲ, ಆದರಲ್ಲೂ ಇಂತಹ ಬುಡಕಟ್ಟುಗಳ ಸಂಸ್ಕೃತಿ, ನಡೆನುಡಿ, ಅವರ ವಲಸೆ ಜೀವನ ಇವರಿಗೆ ಅರ್ಥವಾಗಲೇ ಇಲ್ಲ. ಈ ಪಂಗಡಗಳು ಅರಣ್ಯದಲ್ಲಿ ದೊರೆಯುತ್ತಿದ್ದ ಅರಣ್ಯೋತ್ಪನ್ನಗಳನ್ನು, ದವಸ ಧಾನ್ಯಗಳನ್ನು ಕಾಡಿನ ಸುತ್ತ ಮುತ್ತ ಇರುವ ಹಳ್ಳಿಗೆ ತಂದು ಮಾರುತ್ತಿದ್ದರು ಮತ್ತು ಕೆಲ ಮನೋರಂಜನಾ ಆಟಗಳನ್ನು ಸಹ ಆಡಿ ಜನರನ್ನು ಮನೋರಂಜಿಸುತ್ತಿದ್ದರು. ಹೀಗಾಗಿ ಇವರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಈ ಅಲೆಮಾರಿ ಜೀವನ ಕ್ರಮದಿಂದಾಗಿ ಬ್ರಿಟಿಷರಿಗೆ ಇವರ ಮೇಲೆ ಸಂಶಯ ಮೂಡಿತು. ಅಲೆಮಾರಿ ಪಂಗಡದ ಜೀವನಕ್ರಮವನ್ನು ಅರ್ಥಮಾಡಿಕೊಳ್ಳಲು ಆಗದ ಬ್ರಿಟಿಷರಿಗೆ ಈ ಸಮುದಾಯಗಳು ದರೋಡೆಕೋರರಂತೆ ಕಂಡವು. ಭಾರತದ ಜಾತಿ ಪದ್ಧತಿಯನ್ನು ನೋಡಿ ಬ್ರಿಟಿಷರು ಅಪರಾಧವು ಸಹ ಒಂದು ಜಾತಿ ಆಧಾರಿತ ಲಕ್ಷಣವೆಂದು ತಿಳಿದುಕೊಂಡರು. ಭಾರತದಲ್ಲಿ ಬ್ರಿಟಿಷರು ಅನೇಕ ರೀತಿಯ ಕಾಯ್ದೆ ಕಾನೂನುಗಳನ್ನು, ನಿಯಮಗಳನ್ನು ಜಾರಿಗೆ ತಂದರು. ಇವುಗಳಿಂದ ಹೆಚ್ಚಿನ ತೊಂದರೆಗೆ ಒಳಗಾಗಿದ್ದು ಈ ಬುಡಕಟ್ಟು ಸಮುದಾಯಗಳು. ಕಾಡಿನಿಂದ, ಕಾಡಿನ ಉತ್ಪನ್ನಗಳಿಂದ ಈ ಸಮುದಾಯಗಳನ್ನು ಬ್ರಿಟಿಷರು ದೂರಮಾಡಿದರು. ಇದರಿಂದಾಗಿ ತಮ್ಮ ನೆಲೆಯನ್ನು, ಆರ್ಥಿಕ ಮೂಲವನ್ನು ಕಳೆದುಕೊಂಡು ಅನಾಥವಾದ ಈ ಸಮುದಾಯಗಳು ಬ್ರಿಟಿಷರ ಮೇಲೆ ತಿರುಗಿಬಿದ್ದರು. ಹೀಗೆ ಬ್ರಿಟಿಷ್ ಸರ್ಕಾರ ಉತ್ತರ ಭಾರತದಲ್ಲಿ ೧೮೭೧ರಲ್ಲಿ ಈ ತರಹದ ಪ್ರಕೃತಿ ಅವಲಂಬಿತ ಮತ್ತು ತನ್ನ ಆಡಳಿತದ ಪರಿಧಿಗೆ ಬಾರದೇ ಇರುವ ಸಮುದಾಯಗಳನ್ನು ಗುರುತಿಸಿ ಅವುಗಳನ್ನು ಅಪರಾಧಿ ಬುಡಕಟ್ಟುಗಳೆಂದು ಘೋಷಿಸಿತು. ಮುಂದುವರೆದು ಈ ಅಧಿನಿಯಮವನ್ನು

೧೮೯೭, ೧೯೧೧, ೧೯೨೩, ೧೯೨೪ ಮತ್ತು ೧೯೫೨ ಈ ವರ್ಷಗಳಲ್ಲಿ ತಿದ್ದುಪಡು ಮಾಡಿ ಪರಿಷ್ಕರಿಸಲಾಯಿತು. ಅನೇಕ ಸಮುದಾಯಗಳನ್ನು ಈ ಕಾಯ್ದೆಗಳಡಿಯಲ್ಲಿ ಅಪರಾಧಿ ಬುಡಕಟ್ಟುಗಳು ಎಂದು ಪರಿಗಣಿಸಲಾಯಿತು.

ಅಪರಾಧಿ ಬುಡಕಟ್ಟು ಸಮುದಾಯಗಳನ್ನು ವಸಾಹತುಗಳಲ್ಲಿ ಕಾಯ್ದೆಯ ಮೂಲಕ ನಿರ್ಬಂಧಿಸಲಾಗುತ್ತಿತ್ತು. ಇವರು ಪ್ರತಿದಿನ ಪೋಲಿಸರಿಗೆ ಹಾಜರಿಯನ್ನು ನೀಡುವುದು ಕಡ್ಡಾಯವಾಗಿತ್ತು. ಒಮ್ಮೆ ಅಪರಾಧಿ ಪಂಗಡವೆಂದು ಘೋಷಿಸಲ್ಪಟ್ಟ ಪಂಗಡದ ಪ್ರತಿಯೊಬ್ಬ ಸದಸ್ಯನನ್ನು ಅಪಾರಾಧ ಮಾಡಿದ್ದಾನೋ ಇಲ್ಲವೋ ಎನ್ನುವುದನ್ನು ಲೆಕ್ಕಿಸದೇ ಬಂಧಿಸುತ್ತಿದ್ದರು. ಜೈಲಿಗೆ ಕಳುಹಿಸಲಾದ ಸಾಮಾನ್ಯ ಕೈದಿಯ ಶಿಕ್ಷೆಗೆ ಕಾನೂನಿನನ್ವಯ ಕೊನೆ ಇದೆ ಮತ್ತು ಬಿಡುಗಡೆಯಾಗುವ ಆಸೆ ಇದ್ದೇ ಇರುತ್ತದೆ. ಆದರೆ ಅಪರಾಧಿ ಪಂಗಡಗಳ ಕಾಯ್ದೆಯಡಿಯಲ್ಲಿ ಬಂಧಿತನಾದ ಸದಸ್ಯನಿಗೆ ಈ ಯಾವ ಆಸೆಗಳಿಗೂ ಅವಕಾಶ ಇರಲಿಲ್ಲ. ಅವರು ನೆಲೆಸಿದ್ದ ವಸಾಹತುಗಳೇ ಅವರಿಗೆ ಸೆರೆಮನೆಗಳಾಗಿದ್ದವು. ಒಮ್ಮೆ ಅಪರಾಧಿ ಎಂದು ನಿರ್ಧರಿಸಲ್ಪಟ್ಟರೆ ಅದು ಜೀವನಪರ್ಯಂತ ಅಲ್ಲದೇ ಅವರ ಮುಂದಿನ ಪೀಳಿಗೆಗೂ ಸಹ ಅಪರಾಧಿ ಎಂಬ ಹಣೆಪಟ್ಟಿಯನ್ನು ಕಟ್ಟಲಾಗುತ್ತಿತ್ತು. ಬ್ರಿಟಿಷರು ಇಂತಹ ಸಮುದಾಯದವರನ್ನು ಉಚಿತವಾಗಿ ಆಳುಗಳ ರೀತಿಯಲ್ಲಿ ದುಡಿಸಿಕೊಳ್ಳುತ್ತಿದ್ದರು. ವಸಾಹತುಗಳಲ್ಲಿ ಮಕ್ಕಳಿಗಾಗಿ ಶಾಲೆಗಳನ್ನು, ತರಬೇತಿ ನೀಡಲು ವೃತ್ತಿ ತರಬೇತಿ ಕೇಂದ್ರಗಳನ್ನು, ಆಸ್ಪತ್ರೆಗಳನ್ನು ಆರಂಭಿಸಿದ್ದರು. ಮೇಲ್ವಿಚಾರಣೆಗಾಗಿ ಪ್ರತಿ ವಸಾಹತುವಿಗೆ ಒಬ್ಬ ಅಧಿಕಾರಿಯನ್ನು ನೇಮಿಸಲಾಗಿತ್ತು. ವಸಾಹತುಗಳಿಗೆ ತಂತಿ ಬೇಲಿಯನ್ನು ಹಾಕಲಾಗುತ್ತಿತ್ತು. ಇಂತಹ ವಸಾಹತುಗಳು ದೇಶದ ತುಂಬೆಲ್ಲಾ ನಿರ್ಮಾಣಗೊಂಡಿದ್ದವು. ಇಂತಹ ವಸಾಹತುಗಳು ಕರ್ನಾಟಕದ ಗದಗ, ಹುಬ್ಬಳ್ಳಿ, ವಿಜಯಪುರ, ಬೆಳಗಾವಿ, ಬಾಗಲಕೋಟೆ ಜಿಲ್ಲೆಗಳಲ್ಲಿ ಕಾಣಸಿಗುತ್ತವೆ. ಈ ವಸಾಹತುಗಳಲ್ಲಿ ಅನೇಕ ಬುಡಕಟ್ಟುಗಳು ನೆಲೆಸಿವೆ.

ಭಾರತ ಸ್ವತಂತ್ರಗೊಂಡ ನಂತರ ೧೯೫೨ರಲ್ಲಿ ಎಲ್ಲಾ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು ರದ್ದುಗೊಳಿಸಿದರು. ನಂತರ ಈ ಎಲ್ಲಾ ಅಪರಾಧಿ ಬುಡಕಟ್ಟುಗಳು "ವಿಮುಕ್ತ ಬುಡಕಟ್ಟು" ಎಂದು ಕರೆಯಲ್ಪಟ್ಟವು. ಕರ್ನಾಟಕದಲ್ಲಿ ಸಹ ಇಂತಹ ಅನೇಕ ವಿಮುಕ್ತ ಬುಡಕಟ್ಟುಗಳನ್ನು ಸಹ ಕಾಣಬಹುದು. ಅಂತಹ ವಿಮುಕ್ತ ಬುಡಕಟ್ಟುಗಳಲ್ಲಿ ಚಪ್ಪರ್‌ಬಂದ್ ಸಮುದಾಯವೂ ಸಹ ಒಂದಾಗಿದೆ.

ಭಾರತೀಯ ಸಮಾಜವು ವೈವಿಧ್ಯಮಯವಾಗಿದೆ. ಬಹುರೂಪತೆಯನ್ನು ಹೊಂದಿದೆ. ಸಾವಿರಾರು ಜಾತಿಗಳು, ನೂರಾರು ಬುಡಕಟ್ಟುಗಳು, ವಿವಿಧ ಭಾಷೆಗಳು ಮತ್ತು ಸಂಸ್ಕೃತಿಯನ್ನು ಹೊಂದಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಗುಜರಾತ್‌ನಿಂದ ಈಶಾನ್ಯ ರಾಜ್ಯಗಳವರೆಗೆ

ಬಹುರೂಪತೆಯು ಅನೇಕ ರೀತಿಯಲ್ಲಿ ವ್ಯಕ್ತವಾಗುತ್ತದೆ. ವೈವಿಧ್ಯತೆಯಿದ್ದರೂ ಸಹ ಎಲ್ಲಾ ಸಮುದಾಯಗಳು ಒಂದಕ್ಕೊಂದು ಪೂರಕವಾಗಿ ಜೀವನ ನಡೆಸುತ್ತಾ ಬರುತ್ತಿವೆ. ಒಂದು ಸಮುದಾಯದ ಸಂಸ್ಕೃತಿಯು ಇನ್ನೊಂದು ಸಮುದಾಯದ ಮೇಲೆ ಪ್ರಭಾವ ಬೀರುತ್ತದೆ ಮತ್ತು ಬೇರೊಂದು ಸಮುದಾಯದ ಸಂಸ್ಕೃತಿಯನ್ನು ಅಳವಡಿಸಿಕೊಳ್ಳುತ್ತದೆ. ಅನೇಕ ಬುಡಕಟ್ಟು ಸಮುದಾಯಗಳು ಸ್ವಾಂಗೀಕರಣ ಪ್ರಭಾವಕ್ಕೆ ಒಳಗಾಗಿವೆ. ಜೊತೆಗೆ ತಮ್ಮ ಮೂಲ ಸಂಸ್ಕೃತಿಯನ್ನು ಈಗಲೂ ಉಳಿಸಿಕೊಂಡು ಬಂದಿವೆ. ಮೇಲ್ನೋಟದಲ್ಲಿ ಅನೇಕ ಸಮುದಾಯಗಳ ಸಾಂಸ್ಕೃತಿಕ ಆಚರಣೆಗಳು ಒಂದೇ ತರಹ ಎನಿಸಿದರೂ ಆಂತರ್ಯದಲ್ಲಿ ವ್ಯತ್ಯಾಸಗಳಿವೆ. ಸ್ವಾಂಗೀಕರಣವು ಒಂದು ಸಾಮಾಜಿಕ ಪ್ರಕ್ರಿಯೆಯಾಗಿದೆ.

ವ್ಯಕ್ತಿಗಳು, ಸಮೂಹಗಳು ತಾವು ವಾಸಿಸಬೇಕಾಗಿ ಬಂದ ಸಮೂಹ ಇಲ್ಲವೇ ಸಮಾಜದ ಮನೋಭಾವಗಳು, ಮೌಲ್ಯಗಳು, ಧ್ಯೇಯ ಧೋರಣೆಗಳು, ರೀತಿನೀತಿಗಳು ಹಾಗೂ ಜೀವನ ವಿಧಾನವನ್ನು ತಮ್ಮದಾಗಿಸಿಕೊಳ್ಳುವ ಸಾಮಾಜಿಕ ಪ್ರಕ್ರಿಯೆಗೆ ಸ್ವಾಂಗೀಕರಣ ಎನ್ನುತ್ತೇವೆ. ಸ್ವಾಂಗೀಕರಣ ಎಂಬ ಪರಿಕಲ್ಪನೆಯನ್ನು ರಾಬರ್ಟ್ ಇ ಪಾರ್ಕ್‌ರವರು ಪ್ರತಿಪಾದಿಸಿದ್ದಾರೆ. ಪಾರ್ಕ್ ಮತ್ತು ಬರ್ಗೆಸ್ ಅವರ ಪ್ರಕಾರ, "ವ್ಯಕ್ತಿಗಳು ಮತ್ತು ಸಮೂಹಗಳು ಬೇರೆ ಬೇರೆ ವ್ಯಕ್ತಿಗಳ ಇಲ್ಲವೇ ಸಮೂಹಗಳ ನೆನಪುಗಳು, ಆವೇಗಗಳು ಮತ್ತು ಮನೋಭಾವಗಳನ್ನು ತಮ್ಮದನ್ನಾಗಿಸಿಕೊಳ್ಳುವ ಮತ್ತು ಅವರ ಅನುಭವ ಹಾಗೂ ಇತಿಹಾಸವನ್ನು ತಮ್ಮೊಡನೆ ಒಂದು ಸಾಮಾನ್ಯ ಸಾಂಸ್ಕೃತಿಕ ಜೀವನದಲ್ಲಿ ಸಂಯೋಜಿಸಿಕೊಳ್ಳುವ ಪ್ರಕ್ರಿಯೆಯನ್ನು ಸ್ವಾಂಗೀಕರಣ" ಎನ್ನುತ್ತೇವೆ.

ಸ್ವಾಂಗೀಕರಣವು ಸಾಮಾಜಿಕ ಜೀವನದಲ್ಲಿ ವ್ಯಕ್ತಿಗಳು ಮತ್ತು ಸಮೂಹಗಳು ಪರಸ್ಪರ ಸಮನ್ವಯದಿಂದ ಬಾಳಲು ಅನುಕೂಲವಾಗುವ ವಿಧಾನವನ್ನು ಸೂಚಿಸುವುದು. ಅದು ವಿಭಿನ್ನ ಸಾಮಾಜಿಕವಾದ ಹಾಗೂ ಮಾನಸಿಕವಾದ ಪ್ರಕ್ರಿಯೆಯಾಗಿದೆ. ಅದು ವಿಭಿನ್ನ ಸಂಸ್ಕೃತಿಗಳು ಏಕತೆಗೊಳ್ಳುವುದನ್ನು ಪ್ರತಿನಿಧಿಸುತ್ತದೆ. ಸ್ವಾಂಗೀಕರಣವು ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಿಗಳು ಹಾಗೂ ಸಮೂಹಗಳು ಪರಸ್ಪರ ಕಲೆತು, ವರ್ತಿಸಿ, ಸಂಬಂಧಗಳನ್ನು ಉಂಟು ಮಾಡಿಕೊಂಡು ಜೀವಿಸಲು ಸಹಾಯಕವಾಗಿದೆ. ಸ್ವಾಂಗೀಕರಣಕ್ಕೆ ಒಳಗಾದ ಸಮುದಾಯವು ತನ್ನ ಮೂಲ ಸಂಸ್ಕೃತಿಯ ಜೊತೆಗೆಯೇ ಅನ್ಯ ಸಂಸ್ಕೃತಿಯನ್ನು ಅನುಸರಿಸುತ್ತಿರುತ್ತದೆ. ಕೆಲವು ವೇಳೆ ಎರಡೂ ಸಂಸ್ಕೃತಿಗಳ ಆಚರಣೆಯಲ್ಲಿ ಗೊಂದಲ ಸಹ ಕಂಡುಬರಬಹುದು. ಕೆಲವು ವೇಳೆ ತಮ್ಮ ಮೂಲ ಸಂಸ್ಕೃತಿಯನ್ನು ಸಂಪೂರ್ಣವಾಗಿ ಕೈ ಬಿಡಲು ಆಗದೆ, ಅನುಕರಣೆ ಮಾಡುತ್ತಿರುವ ಸಂಸ್ಕೃತಿಯನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಲೇ ಆಗದೆ ಸಮುದಾಯಗಳು ಗೊಂದಲದ ಪರಿಸ್ಥಿತಿಯಲ್ಲಿ ಬದುಕುತ್ತಿರುತ್ತವೆ.

ಚಪರ್‌ಬಂದ್ ಸಮುದಾಯವೂ ಸಹ ಸ್ವಾಂಗೀಕರಣಕ್ಕೆ ಒಳಗಾದ ವಿಮುಕ್ತ ಬುಡಕಟ್ಟು ಸಮುದಾಯವಾಗಿದೆ. ಇದೊಂದು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡ ಬುಡಕಟ್ಟು ಮೂಲದ ಸಮುದಾಯವಾಗಿದೆ. ಇದು ತನ್ನ ಮೂಲ ಬುಡಕಟ್ಟು ಸಂಸ್ಕೃತಿಯೊಂದಿಗೆ, ಇಸ್ಲಾಂ ಧರ್ಮದ ಸಂಸ್ಕೃತಿಯನ್ನು ತನ್ನದಾಗಿಸಿಕೊಂಡು ಬದುಕುತ್ತಿದೆ. ಪ್ರಸ್ತುತದಲ್ಲೂ ಸಹ ಈ ಸಮುದಾಯ ಈ ಎರಡೂ ಸಂಸ್ಕೃತಿಯನ್ನು ಅನುಸರಿಸುತ್ತಿರುವುದನ್ನು ಕಾಣಬಹುದಾಗಿದೆ.

**ಇದುವರೆಗಿನ ಅಧ್ಯಯನಗಳು**

ಪ್ರಸ್ತುತ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ, ಇಲ್ಲಿಯವರೆಗೂ ಆಳವಾದ ಅಧ್ಯಯನಗಳು ನಡೆದಿರುವುದಿಲ್ಲ. ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಕೆಲವು ಆಂಗ್ಲ ಅಧ್ಯಯನಕಾರರು, ನಂತರ ಸ್ವತಂತ್ರ ಭಾರತದಲ್ಲಿ ಇತ್ತೀಚಿನ ದಿನಗಳಲ್ಲಿ ಕೆಲವು ಅಧ್ಯಯನ ಅಧ್ಯಯನಕಾರರು ನಡೆಸಿದ ಅಧ್ಯಯನಗಳನ್ನು, ಇಲ್ಲಿ ಸಮೀಕ್ಷಿಸಲಾಗಿದೆ. ಅದರಲ್ಲೂ ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ ಬಗ್ಗೆ ಅತಿ ವಿರಳವಾದ ಅಧ್ಯಯನಗಳು ನಡೆದಿವೆ, ಅವುಗಳನ್ನು ಈ ಕೆಳಕಂಡಂತೆ ಸಮೀಕ್ಷಿಸಲಾಗಿದೆ.

ಗೇಯರ್ ಜಿ ಡಬ್ಲ್ಯೂ ಅವರು *Some criminals tribes of India* ಎಂಬೀ ಪುಸ್ತಕದಲ್ಲಿ ಕೆಲವು ಅಪರಾಧಿ ಬುಡಕಟ್ಟುಗಳ ಬಗ್ಗೆ ತಿಳಿಸಿದ್ದಾರೆ. ಯಾವ ಕಾರಣಕ್ಕಾಗಿ ಅವರನ್ನು ಅಪರಾದಿ ಗುಂಪಿಗೆ ಸೇರಿಸಲಾಯಿತು ಎಂಬುದನ್ನು ಹೇಳಿದ್ದಾರೆ. ಚಪ್ಪರ್‌ಬಂದ್ ಸಮುದಾಯದ ಬಗ್ಗೆ ಸಹ ತಿಳಿಸಿದ್ದಾರೆ. ಈ ಸಮುದಾಯ ಯಾವ ರೀತಿಯಲ್ಲಿ ಅಪರಾಧಗಳಲ್ಲಿ ತೊಡಗುತ್ತಿತ್ತು ಎಂಬುದನ್ನು ತಿಳಿಸಿದ್ದಾರೆ.

ಕೆನಡಿ ಎಂ ಅವರು *Criminal classes in the Bombay Presidency* ಎಂಬೀ ಪುಸ್ತಕದಲ್ಲಿ ಬಾಂಬೆ ಸಂಸ್ಥಾನದಲ್ಲಿನ ಅಪರಾಧಿ ಸಮುದಾಯಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಅನೇಕ ಅಪರಾಧಿ ಸಮುದಾಯಗಳ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ 'ಚಪ್ಪರ್‌ಬಂದ್' ಸಹ ಒಂದು. ಇವರು ತಿಳಿಸಿರುವಂತೆ ಈ ಸಮುದಾಯ ನಕಲಿ ನಾಣ್ಯಗಳನ್ನು ತಯಾರಿಸಿ ಚಲಾವಣೆ ಮಾಡುತ್ತಿತ್ತು. ಈ ಅಧ್ಯಯನದಲ್ಲಿ ಕೇವಲ ಈ ಸಮುದಾಯದವರು ಹೇಗೆ ನಕಲಿ ನಾಣ್ಯಗಳನ್ನು ತಯಾರಿಸುತ್ತಿದ್ದರು, ಹೇಗೆ ಚಲಾವಣೆ ಮಾಡುತ್ತಿದ್ದರು ಎಂಬುದನ್ನು ಮಾತ್ರ ತಿಳಿಸಲಾಗಿದೆ. ಇವರು ಈ ಸಮುದಾಯವನ್ನು ಬ್ರಿಟಿಷ್ ಅಧಿಕಾರಿಗಳ ಹಾಗೆಯೇ ಸಂಪೂರ್ಣ ಅಪರಾಧಿಗಳ ಹಾಗೆ ಬಿಂಬಿಸಿದ್ದಾರೆ.

Annual Reports on the working of the Criminal Tribes Act in the Bombay ಈ ವರದಿಯಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಗಳ ವಾರ್ಷಿಕ ವರದಿಯಲ್ಲಿ ಸೆಟ್ಲ್‌ಮೆಂಟ್‌ಗಳಲ್ಲಿ ವ್ಯವಸ್ಥೆಯನ್ನು ಕುರಿತು ತಿಳಿಸಲಾಗಿದೆ. ಅಲ್ಲಿ ಅಪರಾಧಿ ಬುಡಕಟ್ಟುಗಳಿಗೆ ಯಾವ ಯಾವ

ಸೌಲಭ್ಯಗಳನ್ನು ನೀಡುತ್ತಿದ್ದರು. ಅವರನ್ನು ಹೇಗೆ ನಡೆಸಿಕೊಳ್ಳುತ್ತಿದ್ದರು? ಯಾವ ರೀತಿಯ ನಿರ್ಬಂಧನೆಗಳನ್ನು ಹಾಕಲಾಗಿತ್ತು? ಅವರ ಪುನರ್ ವಸತಿಗೆ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು? ಜೊತೆಗೆ ಮಕ್ಕಳಿಗಾಗಿ ಯಾವ ರೀತಿಯ ವಿಶೇಷ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದರು ಎಂಬುದರ ಬಗ್ಗೆ ತಿಳಿಸಲಾಗಿದೆ. ಭಾರತ ಸ್ವತಂತ್ರಗೊಂಡ ನಂತರ ಈ ಎಲ್ಲಾ ನಿಯಮಗಳು ರದ್ದುಗೊಂಡವು ಮತ್ತು ಆ ಎಲ್ಲಾ ಸಮುದಾಯಗಳು ತೊಂದರೆಗೊಳಗಾದವು.

ಎಂಥೋವೆನ್ ಆರ್ ಈ ಅವರು *The Tribes and Castes of Bombay* ಎಂಬೀ ಪುಸ್ತಕದಲ್ಲಿ ಬಾಂಬೆಯಲ್ಲಿನ ಅನೇಕ ಬುಡಕಟ್ಟುಗಳ ಮತ್ತು ಜಾತಿಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇಲ್ಲಿ 'ಚಪ್ಪರ್‌ಬಂದ್' ಸಹ ಒಂದು. ಇವರು ಚಪ್ಪರ್‌ಬಂದ್ ಸಮುದಾಯದ ದೈವ ಆರಾಧನೆಯ ಬಗ್ಗೆ, ಅವರ ಮೂಲದ ಬಗ್ಗೆ, ಅವರ ಆಹಾರ ಅಭ್ಯಾಸದ ಬಗ್ಗೆ ಮತ್ತು ಆರ್ಥಿಕತೆಯ ಬಗ್ಗೆ ತಿಳಿಸಿದ್ದಾರೆ.

ಹುದ್ದಾರ್‌ರವರು ಎಂ ಜಿ Anthropo-Criminological study of Chapparband of Bijapur and Dharwad Districts of Karnataka ಎಂಬ ತಮ್ಮ ಪಿಎಚ್ ಡಿ ಮಹಾ ಪ್ರಬಂಧದಲ್ಲಿ ಮಾನವಶಾಸ್ತ್ರ ಮತ್ತು ಅಪರಾಧಶಾಸ್ತ್ರದಡಿಯಲ್ಲಿ ಚಪ್ಪರ್‌ಬಂದ್ ಸಮುದಾಯವನ್ನು ಅಧ್ಯಯನ ಮಾಡಿದ್ದಾರೆ, ಇಲ್ಲಿ ಇವರು ವಿಶೇಷವಾಗಿ ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳನ್ನು ತಮ್ಮ ಅಧ್ಯಯನದ ವ್ಯಾಪ್ತಿಯಾಗಿ ತೆಗೆದುಕೊಂಡು, ಅಪರಾಧಶಾಸ್ತ್ರದ ಹಿನ್ನೆಲೆಯಲ್ಲಿ ಈ ಸಮುದಾಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ.

ಮಾನವಶಾಸ್ತ್ರದ ಮೂಲಕ ಈ ಸಮುದಾಯದ ಸಂಪ್ರದಾಯಗಳನ್ನು, ಆಚಾರ-ವಿಚಾರ ಗಳನ್ನು, ಸಂಸ್ಕೃತಿಯನ್ನು, ನಂಬಿಕೆಗಳನ್ನು ಅಧ್ಯಯನ ಮಾಡಿದ್ದಾರೆ. ಅಪರಾಧಶಾಸ್ತ್ರದ ಮೂಲಕ ಅವರ ಅಪರಾಧ ಮನೋಭಾವನೆಯನ್ನು ಅದರ ಹಿನ್ನೆಲೆ, ಸ್ವರೂಪ, ಕಾರಣಗಳು, ರೀತಿಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದ್ದಾರೆ. ಇಲ್ಲಿ ಇವರು ಚಪ್ಪರ್‌ಬಂದ್ ಸಮುದಾಯದ ಗುಂಪುಗಳಾದ 'ಬಾರ ಗಂಡ' ಮತ್ತು 'ಭೇ ಗಂಡ' ಇವರ ಮಧ್ಯ ಇರುವ ಜೈವಿಕ ವ್ಯತ್ಯಾಸಗಳನ್ನು ತಿಳಿದು ಕೊಳ್ಳಲು ಪ್ರಯತ್ನಿಸಿದ್ದಾರೆ. ಇವರ ಅಧ್ಯಯನದಲ್ಲಿ ತಿಳಿಸಿರುವಂತೆ 'ಚಪ್ಪರ್‌ಬಂದ್' ಸಮುದಾಯದವರು ಗುಜರಾತ್ ರಾಜ್ಯದಿಂದ ಕೆಲಸವನ್ನು ಹುಡುಕಿಕೊಂಡು ಆದಿಲ್‌ಶಾಹಿ ಕಾಲದಲ್ಲಿ ಬಿಜಾಪುರ ಜಿಲ್ಲೆಗೆ ವಲಸೆ ಬಂದರು. ಇವರು ಸೈನ್ಯದಲ್ಲಿ ಡೇರೆ ಹಾಕುವ ಕೆಲಸ ಮಾಡುತ್ತಿದ್ದರು. ನಂತರ ನಕಲಿ ನಾಣ್ಯ ತಯಾರಿಸಿ ಜನರಿಗೆ ವಂಚಿಸಿ ಚಲಾವಣೆ ಮಾಡುತ್ತಿದ್ದರು.

ಚಪ್ಪರ್‌ಬಂದ್ ಸಮುದಾಯದ ಕುಟುಂಬ, ರಕ್ತಸಂಬಂಧ, ಜೀವನ ಕ್ರಮ, ಸಂಪ್ರದಾಯಗಳು, ಮದುವೆ, ಜನನ, ಸುನ್ನಿಶಾಸ್ತ್ರ, ಋತುಮತಿ ಆಚರಣೆ, ಸಾವು, ಹಬ್ಬಗಳು ಇತ್ಯಾದಿ ಆಚರಣೆಗಳ ಬಗ್ಗೆ ಅಧ್ಯಯನ ಮಾಡಿ ವಿವರವಾಗಿ ಮಾಹಿತಿ ನೀಡಿದ್ದಾರೆ. ಅವರ ಅರ್ಥಿಕತೆಯ ಬಗ್ಗೆ

ಧಾರ್ಮಿಕ ಜೀವನದ ಬಗ್ಗೆ ಸಹ ತಿಳಿಸಿದ್ದಾರೆ. ಮುಂದುವರೆದ ಅವರ ಜನಸಂಖ್ಯೆಯ ಬಗ್ಗೆ, ಜನನ-ಮರಣ, ಸಾಕ್ಷರತೆ ಪ್ರಮಾಣಗಳ ಬಗ್ಗೆ ಹಾಗೂ ಈ ಅಂಕಿ ಅಂಶಗಳಲ್ಲಿ ಬಾರ ಗಂಡ ಮತ್ತು ಛೇ ಗಂಡ ಇವರ ನಡುವಿರುವ ವ್ಯತ್ಯಾಸಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇವರು ಚಪ್ಪರ್‌ಬಂದ್ ಸಮುದಾಯದವರ Blood Group, Finger print, DNA ಸಂಗ್ರಹಿಸಿ ಅದನ್ನು ಪರೀಕ್ಷಿಸಿ ಬಾರ ಗಂಡ ಮತ್ತು ಛೇ ಗಂಡ ನಡುವಿರುವ ಜೈವಿಕ ವ್ಯತ್ಯಾಸಗಳನ್ನು ಮತ್ತು ಅಪರಾಧ ಮನೋವೃತ್ತಿಯನ್ನು ತಿಳಿದುಕೊಳ್ಳಲು ಪ್ರಯತ್ನಿಸಿದ್ದಾರೆ.

ಭಾರತ ಸ್ವತಂತ್ರಗೊಂಡ ಮೇಲೆ ಇವರ ಪುನರ್ ವಸತಿಗೆ ಯಾವ ರೀತಿಯ ಕಾರ್ಯಕ್ರಮಗಳನ್ನು ಕೈಗೊಂಡಿದೆ ಮತ್ತು ಇನ್ನೂ ಯಾವ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ಜೊತೆಗೆ ಇವರು ಪ್ರಸ್ತುತ ಯಾವ ಯಾವ ವೃತ್ತಿಗಳಲ್ಲಿ ತೊಡಗಿದ್ದಾರೆ ಎಂಬುದನ್ನು ಅಧ್ಯಯನ ಮಾಡಿದ್ದಾರೆ. ಆದರೆ ಇವರು ಈ ಸಮುದಾಯವನ್ನು ಅಪರಾಧಿ ಸಮುದಾಯವಾಗಿ ನೋಡಿದರೇ ವಿನಃ ಬುಡಕಟ್ಟು ಸಮುದಾಯವಾಗಿ ಎಲ್ಲಿಯೂ ಕಂಡಿಲ್ಲ. ಅಪರಾಧ ಈ ಸಮುದಾಯದ ಹುಟ್ಟು ಗುಣವೇನೋ ಎಂಬಂತೆ ಇವರು ಬಿಂಬಿಸಿದ್ದಾರೆ. ಇದರ ಹೊರತಾಗಿ ಮುಂದಿನ ಅಧ್ಯಯನ ಮಾಡಲು ಪ್ರಯತ್ನಿಸಲಾಗುವುದು.

ಮೈತ್ರಿ ಕೆ ಎಂ ಅವರು ತಮ್ಮ *ಬುಡಕಟ್ಟು ಕುಲಕಸುಬುಗಳು*, ಪುಸ್ತಕದಲ್ಲಿ ಬುಡಕಟ್ಟು ಸಮುದಾಯಗಳ ರಚನೆಯ ಬಗ್ಗೆ ವಿಶ್ವ ಜನಾಂಗಗಳ ಬಗ್ಗೆ, ಭಾರತದ ಬುಡಕಟ್ಟು ವಿಧಗಳ ಬಗ್ಗೆ ಬುಡಕಟ್ಟು ಪದದ ಅರ್ಥದ ಬಗ್ಗೆ, ಬುಡಕಟ್ಟುಗಳ ಸಂಸ್ಕೃತಿಯ ಬಗ್ಗೆ, ಆಚಾರ-ವಿಚಾರಗಳ ಬಗ್ಗೆ, ಕರ್ನಾಟಕದಲ್ಲಿ ಕಂಡುಬರುವ ಬುಡಕಟ್ಟುಗಳ ಬಗ್ಗೆ, ಅವರ ಕುಲಕಸುಬುಗಳ ಬಗ್ಗೆ ಸವಿವರವಾಗಿ ತಿಳಿಸಿದ್ದಾರೆ.

ಸಿಂಗ್ ಕೆ ಎಸ್ ಅವರು *People of India-Karnataka series* ಎಂಬ ತಮ್ಮ ಸಂಪಾದಕೀಯ ಕೃತಿಯಲ್ಲಿ ಚಪ್ಪರ್‌ಬಂದ್ ಸಮುದಾಯದ ಬಗ್ಗೆ ತಿಳಿಸುತ್ತಾ, ಅವರಲ್ಲಿ ನಾವು ಬೆಡಗುಗಳನ್ನು ಕಾಣುವುದಿಲ್ಲ ಎಂದು ಹೇಳಿದ್ದಾರೆ. ಆದರೆ ಈ ಸಮುದಾಯದಲ್ಲಿ ನಾವು ಪ್ರಸ್ತುತ ಕಾಲಕ್ಕೂ ಸಹ ೨೩ ಬೆಡಗುಗಳು ಉಳಿದಿರುವುದು ಕಾಣುತ್ತೇವೆ.

ಚನ್ನ ಎಸ್ ಎಂ ಅವರು Encyclopedia of Indian Tribes and Castes ಎಂಬ ತಮ್ಮ ಸಂಪಾದಕೀಯ ಕೃತಿಯಲ್ಲಿ ಭಾರತದ ಅನೇಕ ಬುಡಕಟ್ಟು ಮತ್ತು ಜಾತಿಗಳ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ ಚಪ್ಪರ್‌ಬಂದ್ ಸಮುದಾಯ ಸಹ ಒಂದು. ಇದರಲ್ಲಿ ತಿಳಿಸಿರುವಂತೆ 'ಚಪ್ಪರ್‌ಬಂದ್' ಸಮುದಾಯವು ಬಾಂಬೆ ಪ್ರೆಸಿಡೆನ್ಸಿಯಲ್ಲಿ ನಕಲಿ ನಾಣ್ಯಗಳನ್ನು ತಯಾರಿಸಿ, ಚಲಾವಣೆ ಮಾಡಲು ಪ್ರತ್ಯಕವಾದ ಗುಂಪುಗಳಿರುತ್ತಿದ್ದವು ಎಂದು ತಿಳಿಸಿದ್ದಾರೆ. ಇದರಲ್ಲಿ ಸಂಪಾದಕರು ಇವರು ಏಕೆ ನಕಲಿ ನಾಣ್ಯ ತಯಾರಿಸಲು ಪ್ರಾರಂಭಿಸಿದರು? ಮತ್ತು ಹೇಗೆ ನಕಲಿ ನಾಣ್ಯಗಳನ್ನು

ತಯಾರಿಸುತ್ತಿದ್ದರು? ಹೇಗೆ ಅದನ್ನು ಚಲಾವಣೆ ಮಾಡುತ್ತಿದ್ದರು? ಎಂಬುದನ್ನು ತಿಳಿಸಿದ್ದಾರೆ. ಆದರೆ ಇಲ್ಲಿ ಸಾಮಾಜಿಕ ಜೀವನದ ಬಗ್ಗೆ ತಿಳಿಸಲಿಲ್ಲ.

ಮಲ್ಲಿ ಗಾಂಧಿಯರವರು *Development of Denotified Tribes: Policy and Practices* ಎಂಬೀ ಕೃತಿಯಲ್ಲಿ ಆಂಧ್ರಪ್ರದೇಶದ ವಿಮುಕ್ತ ಬುಡಕಟ್ಟುಗಳ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಮತ್ತು ಬ್ರಿಟಿಷರ ವಸಾಹತು ನೆಲೆಯಲ್ಲಿ ಯಾವ ಯಾವ ಸಮುದಾಯದ ಜನರು ವಾಸಿಸುತ್ತಿದ್ದರು ಎಂಬುದನ್ನು ತಿಳಿಸಿದ್ದಾರೆ.

ಮಲ್ಲಿ ಗಾಂಧಿಯವರು *Denotified Tribes: Dimensions of change* ಎಂಬೀ ಕೃತಿಯಲ್ಲಿ ವಸಾಹತು ಕಾಲದ ಅಪರಾಧಿ ಬುಡಕಟ್ಟು ಕಾಯ್ದೆಗಳ ಸ್ವರೂಪ ತಿಳಿಸುವುದರೊಂದಿಗೆ ಆಂಧ್ರದ ವಿಮುಕ್ತ ಬುಡಕಟ್ಟು ಸಮುದಾಯಗಳು ಎದುರಿಸುತ್ತಿರುವ ಪುನರ್ವಸತಿ ಸಮಸ್ಯೆಗಳು, ಭೂಹಂಚಿಕೆ, ಸ್ವರೂಪಗಳನ್ನು ಮತ್ತು ಅವುಗಳ ಇತಿಹಾಸವನ್ನು ಕುರಿತು ತಿಳಿಸಿದ್ದಾರೆ. ಇದರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಗಳ ಬಗ್ಗೆ, ಅವುಗಳು ಜಾರಿಯಾಗಲು ಅದರ ಹಿಂದಿದ್ದ ಕಾರಣಗಳ ಬಗ್ಗೆ, ಅವುಗಳ ಸ್ವರೂಪದ ಬಗ್ಗೆ, ನಂತರ ಆ ಕಾಯ್ದೆಗಳು ಹೇಗೆ ರದ್ದುಗೊಂಡವು ಎಂಬುದರ ಬಗ್ಗೆ ವಿವರವಾಗಿ ತಿಳಿಸಿದ್ದಾರೆ.

ಸುಬ್ಬರಾವ್ ಎಂ ಅವರು *Understanding Denotified and Nomadic Tribes* ಎಂಬ ಪುಸ್ತಕದಲ್ಲಿ ಭಾರತದಲ್ಲಿನ ಅಪರಾಧಿ ಬುಡಕಟ್ಟು ಕಾಯ್ದೆಗಳ ಬಗ್ಗೆ, ವಿವಿಧ ಅಪರಾಧಿ ಕಾಯ್ದೆಯ ವಿಚಾರಣಾ ಸಮಿತಿಗಳ ವರದಿಗಳ ಬಗ್ಗೆ ಹಿಂದುಳಿದ ವರ್ಗಗಳ ಆಯೋಗಗಳ ವರದಿಗಳ ಬಗ್ಗೆ ಪಂಚವಾರ್ಷಿಕ ಯೋಜನೆಗಳ ಬಗ್ಗೆ, ವಿಮುಕ್ತ ಬುಡಕಟ್ಟುಗಳ ಕಮೀಷನ್ ವರದಿಗಳ ಬಗ್ಗೆ ಪ.ಜಾ. ಪ.ಪಂ.ಗಳ ಕಮಿಷನ್ ವರದಿಗಳ ಬಗ್ಗೆ, ಅವುಗಳ ಸಲಹೆ ಸೂಚನೆಗಳ ಬಗ್ಗೆ ಇತ್ಯಾದಿ ವಿಷಯಗಳ ಬಗ್ಗೆ ತಿಳಿಸಿದ್ದಾರೆ.

ಎಡ್ಗರ್ ಥರ್ಸ್ಟನ್ ಅವರು *Castes and Tribes of Southern India* ಎಂಬ ಸಂಪುಟದಲ್ಲಿ ದಕ್ಷಿಣ ಭಾರತದ ಅನೇಕ ಜಾತಿ ಮತ್ತು ಬುಡಕಟ್ಟುಗಳ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ 'ಚಪ್ಪರಬಂದ್' ಸಮುದಾಯವೂ ಒಂದು. ಈ ಸಂಪುಟದಲ್ಲಿ ಈ ಸಮುದಾಯದ ಹಿನ್ನೆಲೆಯ ಬಗ್ಗೆ ಮಾತ್ರ ತಿಳಿಸಿದ್ದಾರೆ.

ಮಲ್ಲಿಕಾರ್ಜುನ ಬಿ. ಮಾನ್ಪಡೆ ಅವರು ತಮ್ಮ *'ತಂತಿಬೇಲಿಯೊಳಗಿನ ಜಗತ್ತು'* ಪುಸ್ತಕದಲ್ಲಿ ಪ್ರಮುಖವಾಗಿ ಸೆಟ್ಲ್‌ಮೆಂಟ್‌ಗಳಲ್ಲಿ ವಾಸಿಸುತ್ತಿರುವ ೫ ವಿಮುಕ್ತ ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇವರು ಅಧ್ಯಯನ ಮಾಡಿರುವ ಸಮುದಾಯಗಳಲ್ಲಿ 'ಚಪ್ಪರ್‌ಬಂದ್' ಸಹ ಒಂದು. ಇಲ್ಲಿ ಇವರು ಅಪರಾಧಿ ಬುಡಕಟ್ಟು ಕಾಯ್ದೆಗಳ ಬಗ್ಗೆ, ಅವುಗಳ ರೂಪುಗೊಳ್ಳಲು

ಕಾರಣಗಳ ಬಗ್ಗೆ ಹಾಗೂ ಬ್ರಿಟಿಷರು ಬುಡಕಟ್ಟುಗಳನ್ನು ಅಪರಾಧಿ ಎಂದು ಹಣೆಪಟ್ಟಿ ನೀಡಿದರು ಎಂಬುದರ ಬಗ್ಗೆ ಸೆಟ್ಲ್‌ಮೆಂಟ್‌ಗಳ ಬಗ್ಗೆ, ಅಲ್ಲಿ ಅವರನ್ನು ಹೇಗೆ ನಿಯಂತ್ರಿಸುತ್ತಿದ್ದರು ಎಂಬುದರ ಬಗ್ಗೆ ತಿಳಿಸಿದ್ದಾರೆ. ಜೊತೆಗೆ ಭಾರತ ಸ್ವತಂತ್ರಗೊಂಡ ನಂತರ ಆ ಎಲ್ಲಾ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು ರದ್ದುಗೊಳಿಸಿ ಅವರನ್ನು ಅಂದಿನಿಂದ ವಿಮುಕ್ತ ಬುಡಕಟ್ಟುಗಳ ಎಂದು ಕರೆಯಲಾಯಿತು.

ಮಾನ್ಪಡೆಯವರು ಈ ಅಧ್ಯಯನದಲ್ಲಿ 'ಚಪ್ಪರ್‌ಬಂದ್' ಸಮುದಾಯದ ಬಗ್ಗೆ ಸಹ ಅಧ್ಯಯನ ಮಾಡಿದ್ದಾರೆ. ಇವರು ತಿಳಿಸಿರುವಂತೆ ಈ ಸಮುದಾಯ ಗದಗ, ಹುಬ್ಬಳ್ಳಿ, ಧಾರವಾಡ, ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಕಂಡಬರುತ್ತದೆ. ಮೂಲತಃ ಇದೊಂದು ಅಲೆಮಾರಿ ಸಮುದಾಯ ಇವರು ಚಪ್ಪರ್‌ಬಂದ್ ಸಮುದಾಯದ ಬೆಡಗುಗಳ ಬಗ್ಗೆ ಸಾಮಾಜಿಕ ಜೀವನದ ಬಗ್ಗೆ, ಅವರ ಪ್ರಸ್ತುತ ಸ್ಥಿತಿಗಳ ಬಗ್ಗೆ ತಿಳಿಸಿದ್ದಾರೆ. ಆದರೆ ಇವರು ಎಲ್ಲಿಯೂ ಅವರ ಧರ್ಮದ ಬಗ್ಗೆ, ಅವರ ಧಾರ್ಮಿಕ ಆಚರಣೆಗಳ ಬಗ್ಗೆ ತಿಳಿಸಿಲ್ಲ. ಈ ಕೊರತೆಯನ್ನು ಈ ಅಧ್ಯಯನದ ಮೂಲಕ ತುಂಬಲು ಯತ್ನಿಸಲಾಗುವುದು.

Educational status of DNTs in Karnataka: Attainments and challenges ಈ ವರದಿಯಲ್ಲಿ ಕರ್ನಾಟಕದಲ್ಲಿನ ವಿಮುಕ್ತ ಬುಡಕಟ್ಟು ಸಮುದಾಯಗಳ ಸಮುದಾಯದ ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಅಂತಹ ಸಮುದಾಯಗಳಲ್ಲಿ ಚಪ್ಪರ್‌ಬಂದ್ ಸಹ ಒಂದು.

ಗೇಯರ್ ಡಬ್ಲ್ಯೂ ಅವರು *lectures on some criminal Tribes of India and religious mendicants* ಎಂಬೀ ಪುಸ್ತಕದಲ್ಲಿ ಭಾರತದಲ್ಲಿ ಕೆಲ ಅಪರಾಧಿ ಬುಡಕಟ್ಟುಗಳ ಮತ್ತು ಧಾರ್ಮಿಕ ಭಿಕ್ಷುಕ ಸಮುದಾಯಗಳ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ ಚಪ್ಪರ್‌ಬಂದ್ ಸಮುದಾಯ ಸಹ ಒಂದು. ಚಪ್ಪರ್‌ಬಂದ್ ಸಮುದಾಯದವರು ಯಾವ ರೀತಿಯಲ್ಲಿ ಫಕೀರರ ವೇಷ ಹಾಕಿಕೊಂಡು ಹಳ್ಳಿ-ಹಳ್ಳಿ ಸುತ್ತುತ್ತಾ ನಾಣ್ಯಗಳನ್ನು ಚಲಾವಣೆ ಮಾಡುತ್ತಿದ್ದರು ಎಂಬುದನ್ನು ತಿಳಿಸಿದ್ದಾರೆ.

ಗುನ್‌ಥೋರ್ಪೆ ಈ ಜೆ ಅವರು *Notes on criminal Tribes* ಎಂಬೀ ಪುಸ್ತಕದಲ್ಲಿ ಮಧ್ಯ ಪ್ರಾಂತ್ಯ ಮತ್ತು ಬಾಂಬೆ ಪ್ರಾಂತ್ಯದಲ್ಲಿದ್ದ ಅಪರಾಧಿ ಬುಡಕಟ್ಟುಗಳ ಬಗ್ಗೆ ಟಿಪ್ಪಣಿ ಬರೆದಿದ್ದಾರೆ. ಲೇಖಕರು ಇಲ್ಲಿ ಚಪ್ಪರ್‌ಬಂದ್ ಸಮುದಾಯದವರನ್ನು Fakir Coiner ಎಂದು ಕರೆದಿದ್ದಾರೆ.

ಮೇಲಿನ ಎಲ್ಲಾ ಅಧ್ಯಯನಗಳನ್ನು ಅವಲೋಕಿಸಿ ಅವುಗಳಲ್ಲಿ ಇರುವ ಕೊರತೆಗಳ ನೀಗಿಸುವ ಪ್ರಯತ್ನವನ್ನು ಈ ಅಧ್ಯಯನದ ಮಾಲಕ ಮಾಡಲಾಗಿದೆ.

**ಅಧ್ಯಯನದ ಪ್ರಮೇಯಗಳು**

೧. ಚಪ್ಪರ್‌ಬಂದ್ ಬುಡಕಟ್ಟು ತನ್ನ ಆಂತರ್ಯದಲ್ಲಿ ಬುಡಕಟ್ಟು ಲಕ್ಷಣಗಳನ್ನು ಹೊಂದಿದೆ.

೨. ಚಪ್ಪರ್‌ಬಂದ್ ಬುಡಕಟ್ಟು ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾಗಿದೆ.

೩. ಚಪ್ಪರ್‌ಬಂದ್ ಬುಡಕಟ್ಟು ಸರ್ಕಾರಿ ಸೌಲಭ್ಯಗಳನ್ನು ಪಡೆಯುವ ಮತ್ತು ಆ ಮೂಲಕ ಅಭಿವೃದ್ಧಿ ಹೊಂದುವ ಕಾತುರದಲ್ಲಿದೆ.

**ಅಧ್ಯಯನದ ಉದ್ದೇಶಗಳು**

೧. ವಿಮುಕ್ತ ಬುಡಕಟ್ಟುಗಳ ಚಾರಿತ್ರಿಕ ಹಿನ್ನಲೆಯನ್ನು ತಿಳಿದುಕೊಳ್ಳುವುದು.

೨. ಚಪ್ಪರ್‌ಬಂದ್ ಸಮುದಾಯದ ಭೌಗೋಳಿಕ ಸ್ವರೂಪ ಹಾಗೂ ಸಮುದಾಯದ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವುದು.

೩. ಚಪ್ಪರ್‌ಬಂದ್ ಸಮುದಾಯದ ಬುಡಕಟ್ಟು ಲಕ್ಷಣಗಳನ್ನು ಅವಲೋಕಿಸುವುದು.

೪. ಚಪ್ಪರ್‌ಬಂದ್ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ವಿಶ್ಲೇಷಿಸುವುದು

**ಅಧ್ಯಯನದ ವ್ಯಾಪ್ತಿ**

"ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ" ಎಂಬ ಸಂಶೋಧನೆಗೆ ಕರ್ನಾಟಕದಲ್ಲಿರುವ ಗದಗ, ಹುಬ್ಬಳ್ಳಿ, ವಿಜಯಪುರ, ಬಾಗಲಕೋಟೆ ಸೆಟ್ಲ್‌ಮೆಂಟ್‌ಗಳನ್ನು ಹಾಗೂ ಧಾರವಾಡ, ದಾವಣಗೆರೆ ಸೆಟ್ಲ್‌ಮೆಂಟ್‌ಗಳಲ್ಲದ ಪ್ರದೇಶಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ, ಅಲ್ಲಿ ನೆಲೆಸಿರುವ ಚಪ್ಪರ್‌ಬಂದ್ ಸಮುದಾಯವನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಮಹತ್ವ**

ನಮ್ಮ ಭಾರತೀಯ ಸಂಸ್ಕೃತಿ ಹಲವಾರು ಸಮುದಾಯಗಳ ಕೊಡುಗೆಯಾಗಿದೆ. ಇಂತಹ ಸಮುದಾಯಗಳಲ್ಲಿ ಚಪ್ಪರ್‌ಬಂದ್ ಸಮುದಾಯದ ಕೊಡುಗೆ ಸಹ ಮಹತ್ವ ಪೂರ್ಣವಾದುದು. ಇಂದಿನ ಸಮಾಜ ಸಂಕ್ರಮಣ ಸ್ಥಿತಿಯಲ್ಲಿದೆ. ಜಾತಿ, ವರ್ಗ, ಸಮುದಾಯಗಳು ಹೊಸ ರೂಪ ಪಡೆದುಕೊಳ್ಳುತ್ತಿವೆ, ರೂಪಾಂತರಗೊಳ್ಳುತ್ತಿದೆ. ಕೆಲವು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೆಣಗುತ್ತಿವೆ. ಈ ರೂಪಾಂತರದ ಜೊತೆಗೆ ಪ್ರತಿ ಸಮುದಾಯದ ಕುಲಕಸುಬು, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕು ಕೂಡ ಅನೇಕ ಆಧುನಿಕ ಅಂಶಗಳಿಂದ ರೂಪುಗೊಳ್ಳುತ್ತಿದೆ. ಹೀಗೆ ಮರುರೂಪ ಪಡೆದುಕೊಳ್ಳುತ್ತಿರುವ ಸಂಕ್ರಮಣ ಸ್ಥಿತಿಯಲ್ಲಿರುವ ಸಮುದಾಯಗಳಲ್ಲಿ ಚಪ್ಪರ್‌ಬಂದ್ ಸಮುದಾಯವು ಒಂದು. ಈ ಸಮುದಾಯದ ಬಗ್ಗೆ ಸಮಗ್ರ ಸಂಶೋಧನಾಧ್ಯಯನ

ನಡೆದಿರುವುದಿಲ್ಲ. ಇಂದು ಸಮಾಜದಲ್ಲಿರುವ ಅನೇಕ ಸಮುದಾಯಗಳು ಸಮಸ್ಯೆಗಳ ಸುಳಿಯೊಳಗಿವೆ. ಅದರಲ್ಲಿ ಚಪ್ಪರ್‌ಬಂದ್ ಸಮುದಾಯ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದೆ ಎನ್ನಬಹುದು. ಚಪ್ಪರ್‌ಬಂದ್ ಸಮುದಾಯದ ಕುರಿತು ಸಮಾಜಶಾಸ್ತ್ರದಲ್ಲಿ ಆಗಿರುವ ಗಂಭೀರ ಅಧ್ಯಯನಗಳ ಸಂಖ್ಯೆ ಇಲ್ಲವೆನ್ನುವಷ್ಟು ಕಡಿಮೆ. ಇಂತಹ ಸಂದರ್ಭದಲ್ಲಿ ಈ ಅಧ್ಯಯನವು ತನ್ನದೇ ಆದ ಶೈಕ್ಷಣಿಕ ಮಹತ್ವ ಪಡೆಯುತ್ತದೆ.

ಪ್ರಸ್ತುತ ಅಧ್ಯಯನವು ಸಮಕಾಲೀನ ಸಮಸ್ಯೆಗಳ ಜೊತೆ ನೇರ ಹಾಗೂ ಪರೋಕ್ಷ ಸಂಬಂಧ ಹೊಂದಿರುತ್ತದೆ. ಸೂಕ್ಷ್ಮಾರ್ಥದಲ್ಲಿ ವಿಮುಕ್ತ ಬುಡಕಟ್ಟು ಸಮುದಾಯಗಳು ಎದುರಿಸುತ್ತಿರುವ ವಿವಿಧ ಕ್ಷೇತ್ರಗಳಲ್ಲಿನ ಸಮಸ್ಯೆಗಳು ಈ ಸಮುದಾಯಗಳಿಗೆ ಮಾತ್ರ ಸೀಮಿತವಾದಂತೆ ಕಂಡುಬಂದರೂ, ವಿಶಾಲಾರ್ಥದಲ್ಲಿ ಭಾರತದಲ್ಲಿನ ಹಲವಾರು ಅಲೆಮಾರಿ ಸಮುದಾಯಗಳು ಅದರಲ್ಲೂ ನಿರ್ಲಕ್ಷಿತ ಸಮುದಾಯಗಳು ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆಗಳ ಒಂದು ಭಾಗವಾಗಿ ಗೋಚರವಾಗುವುವು.

ವಿಮುಕ್ತ ಬುಡಕಟ್ಟುಗಳು ಬ್ರಿಟಿಷರ ವಸಾಹತು ನೀತಿಗೆ ಮತ್ತು ತಕ್ಕಭದ್ರ ಹಿತಾಸಕ್ತಿಗಳಿಗೆ ಹಾಗೂ ಮೇಲ್ವರ್ಗಗಳ ತುಳಿತಕ್ಕೆ ಬಲಿಯಾಗಿರುವುದು ವಾಸ್ತವ ಸಂಗತಿ. ೧೮೭೧ರಲ್ಲಿ ಬ್ರಿಟಿಷ್ ಸರ್ಕಾರ ಹಲವು ಬುಡಕಟ್ಟು ಸಮುದಾಯಗಳಿಗೆ ಅಪರಾಧಿ ಬುಡಕಟ್ಟು ಎಂದು ಹಣೆಪಟ್ಟಿ ಕೊಟ್ಟಿದ್ದರು. ಆದರೆ ಭಾರತ ಸ್ವತಂತ್ರವಾಗಿ ದಶಕಗಳೇ ಕಳೆದರೂ ಈ ಸಮುದಾಯಗಳು ಅಪರಾಧಿ ಎಂಬ ಹಣೆಪಟ್ಟಿಯಿಂದ ಮಾತ್ರ ಬಿಡುಗಡೆ ದೊರೆಯಲಿಲ್ಲ. ಕಾಯ್ದೆ-ಕಾನೂನುಗಳಿಂದ ಅವುಗಳು ಬಿಡುಗಡೆಯಾದರೂ ಪಟ್ಟಭದ್ರ ಹಿತಾಸಕ್ತಿಗಳು ಮತ್ತು ಪೋಲಿಸರು ಅವರನ್ನು ಆ ಜನ್ಮ ಅಪರಾಧಿಗಳಂತೆ ನೋಡುತ್ತಿದ್ದಾರೆ. ಅದರಲ್ಲೂ ಕರ್ನಾಟಕದಲ್ಲಿನ ವಸಾಹತು ನೆಲೆಗಳಲ್ಲಿ ಮತ್ತು ಇತರೆ ಕಡೆ ನೆಲೆಸಿರುವ ಚಪ್ಪರ್‌ಬಂದ್ ಸಮುದಾಯ ಹಲವು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳ ಬಿಕ್ಕಟ್ಟಿನಲ್ಲಿದೆ ಎಂದರೆ ತಪ್ಪಾಗಲಾರದು. ಪ್ರಸ್ತುತ ಅಧ್ಯಯನದಿಂದ ನಮಗೆ ದೊರೆತಿರುವ ಫಲಿತಗಳಲ್ಲಿ ಈ ಸಮುದಾಯ ಎದುರಿಸುತ್ತಿರುವ ಹಲವಾರು ಸಮಸ್ಯೆಗಳಿಗೆ ನಿವಾರಣೋಪಾಯಗಳ ಹೊಳಪು ದೊರಕಬಲ್ಲದು.

ಪ್ರಸ್ತುತ ಅಧ್ಯಯನದಿಂದ ಭಾರತೀಯ ಸಮಾಜದಿಂದ ನೇತೃತ್ವಕ್ಕೆ ಸರಿಯುತ್ತಿರುವ ಸಮುದಾಯದ ಸಾಮಾಜಿಕ ಬದುಕಿನ ವಾಸ್ತವ ಚಿತ್ರಣವನ್ನು ಕಟ್ಟಿಕೊಟ್ಟಂತಾಗುತ್ತದೆ. ಇಂತಹ ಅಧ್ಯಯನಗಳನ್ನು ಕೈಗೊಳ್ಳದಿದ್ದರೆ ಕೆಲವು ಸಮುದಾಯಗಳು ಸಮಾಜದ ಮುಖ್ಯವಾಹಿನಿಯಿಂದ ಹೊರಗೆ ಉಳಿಯುವ ಅಪಾಯವುಂಟಾಗಬಹುದಾದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹಾಗೆ ಅಂತಹ ಸಮುದಾಯಗಳು ಅಪರಾಧಿ ಎಂಬ ಹಣೆಪಟ್ಟಿಯಿಂದ ಹೊರಬರಲು ಎಷ್ಟೆಲ್ಲಾ ಒಳ್ಳೆಯ ಕೆಲಸ, ಸಮಾಜ ಮುಖಿಯಾಗಿರಲು ಪ್ರಯತ್ನಿಸಿದರೂ ಪಟ್ಟಭದ್ರ ಹಿತಾಸಕ್ತಿಗಳು

ಅವುಗಳಿಗೆ ಅವಕಾಶ ಮಾಡಿಕೊಡದೆ ಇರುವುದು. ಇದೆಲ್ಲವನ್ನೂ ನೋಡಿದಾಗ ಭಾರತೀಯ ಸಮಾಜ, ಸಂಸ್ಕೃತಿಯು ಎಷ್ಟೇ ದೊಡ್ಡದೆನಿಸಿದರೂ ಅದು ಯಾವುದೋ ದೌರ್ಬಲ್ಯದಿಂದ ಕೂಡಿದೆ ಎಂದು ತಿಳಿದುಬರುತ್ತದೆ. ಅಪರಾಧಿ ಬುಡಕಟ್ಟು ಎನ್ನುವ ಹಣೆಪಟ್ಟಿಯನ್ನು ಕಿತ್ತೆಸೆಯಲು ಆ ಸಮುದಾಯದ ಅಭಿವೃದ್ದಿಗಾಗಿ ಅದರ ಅಧ್ಯಯನದ ಅವಶ್ಯಕತೆ ಇಂದು ಹೆಚ್ಚಾಗಿದೆ. ಆ ನಿಟ್ಟಿನಲ್ಲಿ ಈ ಅಧ್ಯಯನವು ಒಂದು ಸಣ್ಣ ಪ್ರಯತ್ನವೆಂದು ಭಾವಿಸಲಾಗಿದೆ. ಸ್ಪರ್ಧೆ ಮಾಡಲು ಆಗದಿರುವ ಅವಮಾನಿತ ಸ್ಥಿತಿಗಳನ್ನು ಅನುಭವಿಸುತ್ತಿವೆ. ಇಂತಹ ಅಧ್ಯಯನಗಳಿಂದ ಆ ಸಮುದಾಯ ಎದುರಿಸುತಿರುವ ಹಲವು ಸಮಸ್ಯೆಗಳಿಗೆ ಸಾಂತ್ವಾನಗಳು, ಪರಿಹಾರಗಳನ್ನು ಕಂಡುಕೊಳ್ಳುವ ಮೂಲಕ ಜ್ಞಾನವನ್ನು ದೊರಕಿಸಿಕೊಳ್ಳಬಹುದು. ಅಂತೆಯೇ ಭಾರತೀಯ ಸಾಮಾಜಿಕ ಜ್ಞಾನ ಪರಂಪರೆಗೆ ಈ ಅಧ್ಯಯನದಿಂದ ಮತ್ತೊಂದಿಷ್ಟು ಅಳಿಲು ಗಾತ್ರದ ಜ್ಞಾನ ಸಂಪತ್ತು ಸೇರ್ಪಡೆಗೊಳ್ಳಬಹುದು. ಇಂತಹ ಅಲಕ್ಷಿತ ಸಮುದಾಯದ ಅಧ್ಯಯನಗಳು ಅಧಿಕವಾಗಿ ನಡೆಯುವುದರ ಮೂಲಕ ಅಸ್ತಿತ್ವದಲ್ಲಿರುವ ಜ್ಞಾನ ಶಾಖೆ ಹೆಚ್ಚು-ಹೆಚ್ಚು ಬೆಳೆಯುತ್ತಾ ಬಲಿಷ್ಟವಾಗುತ್ತಾ ಹೋಗುತ್ತದೆ ಎಂಬ ನಂಬುಗೆಯಿಂದ ಈ ಅಧ್ಯಯನ ಮಾಡಲಾಗಿದೆ. ಆ ನಿಟ್ಟಿನಲ್ಲಿ ಈ ಅಧ್ಯಯನ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ.

### ಅಧ್ಯಯನದ ವಿನ್ಯಾಸ ಮತ್ತು ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ವಿಮುಕ್ತ ಬುಡಕಟ್ಟುಗಳ ಮತ್ತು ಚಪ್ಪರ್‌ಬಂದ್ ಸಮುದಾಯದ ಕುರಿತಾಗಿ ಬಂದಿರುವ ಕೃತಿಗಳು, ಗೆಜೆಟಿಯರ್‌ಗಳು, ಪತ್ರಿಕಾ ವರದಿಗಳು, ಲೇಖನಗಳು, ಜನಗಣತಿ ವರದಿಗಳು ಹಾಗೂ ಇತರೆ ವರದಿಗಳಿಂದ ಮಾಹಿತಿಗಳನ್ನು ಪಡೆಯಲಾಗಿದೆ. ಹಾಗೇ ಪ್ರತಿ ಸೆಟ್ಲ್‌ಮೆಂಟ್ ಮತ್ತು ಚಪ್ಪರ್‌ಬಂದರು ಇರುವ ಇತರೆ ನೆಲೆಗಳಿಗೆ ಹೋಗಿ ಸಮೀಕ್ಷೆ ಹಾಗೂ ಸಂದರ್ಶನ ಮಾಡುವುದರ ಮೂಲಕವೂ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಮಾಹಿತಿಯನ್ನು ಪಡೆಯಲು ಕ್ಷೇತ್ರಕಾರ್ಯದಲ್ಲಿ ಎರಡು ವಿಧಾನಗಳನ್ನು ಅನುಸರಿಸಲಾಗಿದೆ. ಮೊದಲನೆಯದಾಗಿ ಚಪ್ಪರ್‌ಬಂದ್ ಸಮುದಾಯದ ಕುಟುಂಬವಾರು ಸಮೀಕ್ಷೆಯನ್ನು ನಡೆಸಲಾಗಿದೆ. ಎರಡನೆಯದಾಗಿ ಮಾಹಿತಿಯನ್ನು ಪಡೆಯುವ ಉದ್ದೇಶದಿಂದ ವ್ಯಕ್ತಿಗಳ ಸಂದರ್ಶನವನ್ನು ಮಾಡಲಾಗಿದೆ. ಈ ಸಮುದಾಯದ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ಅರಿಯಲು ಈ ಸಮುದಾಯದವರು ನೆಲೆಸಿರುವ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳ ಕಾರ್ಯಕಾರ್ತೆಯರು, ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳ ಮುಖ್ಯೋಪಾಧ್ಯಯರನ್ನು ಹಾಗೂ ಶಿಕ್ಷಣಾಧಿಕಾರಿಗಳನ್ನು ಸಂದರ್ಶನ ಮಾಡಲಾಗಿದೆ. ಅದೇ ರೀತಿಯಾಗಿ ಸಂಬಂಧಿಸಿದ ಇತರೆ ಇಲಾಖೆಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ರೀತಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಕ್ರೋಢೀಕರಸಿ ಅವುಗಳಿಂದ ಬಂದ ಅಂಶಗಳನ್ನು

ತುಲನಾತ್ಮಕವಾಗಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಈ ಅಧ್ಯಯನ ಪೂರ್ಣಗೊಳಿಸಲು ಚಾರಿತ್ರಿಕ ವಿಧಾನ, ಸಂಖ್ಯಾಶಾಸ್ತ್ರೀಯ ವಿಧಾನ, ತುಲನಾತ್ಮಕ ವಿಧಾನ, ಸಂದರ್ಶನ ಸಮೀಕ್ಷೆ ಹಾಗೂ ಸಹಭಾಗಿತ್ವ ವಿಧಾನ ಮತ್ತು ಪ್ರಶ್ನಾವಳಿಯ ವಿಧಾನಗಳನ್ನು ಅನುಸರಿಸಲಾಗಿದೆ. ಹಾಗೆಯೇ ಛಾಯಾಚಿತ್ರಗಳು, ರೇಖಾಚಿತ್ರಗಳು, ಕೋಷ್ಟಕಗಳು ಮುಂತಾದವುಗಳನ್ನು ಅಧ್ಯಯನಕ್ಕೆ, ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನಕ್ಕೆ ಸಮೀಕ್ಷೆ ಕೈಗೊಂಡ ಕುಟುಂಬಗಳ ಸಂಖ್ಯೆ**

ಒಟ್ಟು ಕುಟುಂಬಗಳು ೬೪೪

೧. ಗದಗ ಸೆಟ್ಲ್‌ಮೆಂಟ್ ೨೧೫ ಕುಟುಂಬಗಳು

೨. ಹುಬ್ಬಳ್ಳಿ ಸೆಟ್ಲ್‌ಮೆಂಟ್ ೪೧ ಕುಟುಂಬಗಳು

೩. ವಿಜಯಪುರ ಸೆಟ್ಲ್‌ಮೆಂಟ್ ೨೦೧ ಕುಟುಂಬಗಳು

➢ ಮುದ್ದೇಬಿಹಾಳ್ ತಾಲೂಕು ೩೫ ಕುಟುಂಬಗಳು

➢ ಬಸವನ ಬಾಗೇವಾಡಿ ತಾಲೂಕು ೩೧ ಕುಟುಂಬಗಳು

೪. ಬಾಗಲಕೋಟೆ ಸೆಟ್ಲ್‌ಮೆಂಟ್ ೫೩ ಕುಟುಂಬಗಳು

➢ ಬಾದಾಮಿ ತಾಲೂಕು ೩ ಕುಟುಂಬಗಳು

➢ ಹುನಗುಂದ ತಾಲೂಕು ೭ ಕುಟುಂಬಗಳು

೫. ಧಾರವಾಡ– ಚಪ್ಪರ್‌ಬಂದ್ ಕಾಲೋನಿ ೪೮ ಕುಟುಂಬಗಳು

೬. ದಾವಣಗೆರೆ– ಸರ್ ಮಿರ್ಜಾ ಇಸ್ಮಾಯಿಲ್ ನಗರ ೧೦ ಕುಟುಂಬಗಳು

ಇದರ ಜೊತೆಗೆ ಮೂರು ತಲೆಮಾರಿನ ೨೦ ಜನರನ್ನು ವ್ಯಕ್ತಿ ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

**ಅಧ್ಯಯನದ ಅಧ್ಯಾಯಗಳ ಸಂಕ್ಷಿಪ್ತ ಸಾರಾಂಶ**

ಕರ್ನಾಟಕದಲ್ಲಿರುವ ವಿಮುಕ್ತ ಬುಡಕಟ್ಟುಗಳ ಬಗ್ಗೆ ಹಲವು ಅಧ್ಯಯನಗಳು ನಡೆದಿವೆ. ಆದರೆ ಕರ್ನಾಟಕದಲ್ಲಿರುವ ಚಪ್ಪರ್‌ಬಂದ್ ಸಮುದಾಯದ ಕುರಿತು ಅಂತಹ ಮಹತ್ವದ ಅಧ್ಯಯನಗಳು ನಡೆದಿಲ್ಲವೆನ್ನಬಹುದು. ಈ ಅಧ್ಯಯನದಲ್ಲಿ ಚಪ್ಪರ್‌ಬಂದ್ ಸಮುದಾಯದ ಚಾರಿತ್ರಿಕ ಹಿನ್ನೆಲೆಯ ಬಗ್ಗೆ, ಜೊತೆಗೆ ಈ ಸಮುದಾಯದ ಯಾವ ಕಾರಣಗಳಿಂದಾಗಿ ಬ್ರಿಟಿಷ ಕಾಲದಲ್ಲಿ ಅಪರಾಧಿ ಪಟ್ಟಿಗೆ ಸೇರಿತು ಜೊತೆಗೆ ಪ್ರಸ್ತುತದಲ್ಲಿ ಈ ಸಮುದಾಯ ಯಾವ

ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದೆ ಎಂಬುದರ ಬಗ್ಗೆ ತಿಳಿಸಲಾಗಿದೆ. ಈ ಸಮುದಾಯ ಸೆಟ್ಲಿಮೆಂಟ್‌ಗಳಲ್ಲಿ ಹಾಗೂ ಹೊರಗೆ ಯಾವ ರೀತಿಯ ಜೀವನವನ್ನು ನಡೆಸುತ್ತಿದೆ ಎಂಬುವುದರ ಬಗ್ಗೆ ತಿಳಿಸಲಾಗಿದೆ. ಈ ಅಧ್ಯಯನವು ಆರು ಅಧ್ಯಾಯನಗಳನ್ನು ಒಳಗೊಂಡಿದೆ.

ಮೊದಲನೇ ಅಧ್ಯಾಯನದಲ್ಲಿ ಸಂಶೋಧನಾ ವಿಷಯದ ಪ್ರಸ್ತಾವನೆ, ಇದುವರೆಗಿನ ಅಧ್ಯಯನಗಳ ಬಗ್ಗೆ ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಮಹತ್ವದ ಬಗ್ಗೆ ಹಾಗೂ ಅಧ್ಯಯನದ ವಿನ್ಯಾಸ ಮತ್ತು ವಿಧಾನಗಳ ಬಗ್ಗೆ, ಜೊತೆಗೆ ಅಧ್ಯಯನದ ಸ್ವರೂಪದ ಬಗ್ಗೆ ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ವಿಮುಕ್ತ ಬುಡಕಟ್ಟುಗಳ ಚಾರಿತ್ರಿಕ ಹಿನ್ನೆಲೆಯ ಬಗ್ಗೆ ತಿಳಿಸಲಾಗಿದೆ. ಇಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಗಳು ಜಾರಿಯಾಗಲು ಯಾವ ಕಾರಣಗಳು ಕೆಲಸ ಮಾಡಿದವು, ನಂತರ ಯಾವ ರೀತಿಯಲ್ಲಿ ಈ ಕಾಯ್ದೆಗಳಡಿಯಲ್ಲಿ ಸಮುದಾಯಗಳನ್ನು ಬಂಧಿಸಿ ನಿಯಂತ್ರಿಸುತ್ತಿದ್ದರು-ಎಂಬುದರ ಬಗ್ಗೆ ಭಾರತ ಸ್ವತಂತ್ರಗೊಂಡ ನಂತರ ಹೇಗೆ ಈ ಕಾಯ್ದೆಗಳು ರದ್ದುಗೊಂಡವು ಮತ್ತು ಹೇಗೆ ಅದರಡಿಯಲ್ಲಿದ್ದ ಎಲ್ಲಾ ಸಮುದಾಯಗಳು ಬಂಧನದಿಂದ ಮುಕ್ತಗೊಂಡು ವಿಮುಕ್ತ ಬುಡಕಟ್ಟುಗಳಾದವು ಎಂಬುದನ್ನು ತಿಳಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಚಪ್ಪರ್‌ಬಂದ್ ಸಮುದಾಯದ ಚಾರಿತ್ರಿಕ ಹಿನ್ನೆಲೆ ಹಾಗೂ ಭೌಗೋಳಿಕ ಸ್ವರೂಪ ಮತ್ತು ಜನಸಂಖ್ಯೆಯ ಬಗ್ಗೆ ತಿಳಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಈ ಸಮುದಾಯದ ಹಿನ್ನೆಲೆ ಮತ್ತು ಈ ಸಮುದಾಯದ ಯಾವ ಯಾವ ಪ್ರದೇಶದಲ್ಲಿ ಎಷ್ಟೆಷ್ಟು ಜನಸಂಖ್ಯೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ ಎಂಬುದನ್ನು ತಿಳಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಹಾಗೂ ಸಾಮಾಜಿಕ ಜೀವನದ ಬಗ್ಗೆ ತಿಳಿಸಲಾಗಿದೆ. ~~ಪ್ರಸ್ತುತ ಅಧ್ಯಾಯದಲ್ಲಿ~~ ಜೊತೆಗೆ ಕುಟುಂಬ, ಬೆಡಗು, ವಿವಾಹ, ಆಹಾರ ಪದ್ಧತಿ, ಉಡುಗೆ ತೊಡುಗೆ, ಹಬ್ಬಗಳು, ಭಾಷೆಯ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ ಐದರಲ್ಲಿ ಚಪ್ಪರ್‌ಬಂದ್ ಸಮುದಾಯದ ಶೈಕ್ಷಣಿಕ ಮತ್ತು ಆರ್ಥಿಕ ಜೀವನದ ಬಗ್ಗೆ ತಿಳಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಅವರ ಶೈಕ್ಷಣಿಕತೆಯ ಬಗ್ಗೆ ಮತ್ತು ಅವರ ಪಾರಂಪರಿಕ ಮತ್ತು ಆಧುನಿಕ ವೃತ್ತಿಗಳ ಬಗ್ಗೆ ತಿಳಿಸಲಾಗಿದೆ.

ಸಮಾರೋಪ ಅಧ್ಯಾಯದಲ್ಲಿ ಈ ಸಮುದಾಯ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ, ಅಧ್ಯಯನದಿಂದ ಬಂದ ಫಲಿತಗಳ ಬಗ್ಗೆ ಹಾಗೂ ಪರಿಹಾರೋಪಾಯಗಳ ಬಗ್ಗೆ ತಿಳಿಸಲಾಗಿದೆ.

ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ಮಾಹಿತಿದಾರರ ಪಟ್ಟಿ, ನಕ್ಷೆಗಳು, ಅಂಕಿ-ಅಂಶಗಳು, ಪ್ರಶ್ನಾವಳಿ, ಪತ್ರಿಕಾ ವರದಿಗಳು ಹಾಗೂ ಛಾಯ ಚಿತ್ರಗಳನ್ನು ನೀಡಲಾಗಿದೆ.

## ಆಧಾರ ಗ್ರಂಥಗಳು

ಅಮಚವಾಡಿ ಅರಸು, *ಆಫ್ರಿಕದ ಧರ್ಮ ಮತ್ತು ಸಂಸ್ಕೃತಿ* (ಬೆಂಗಳೂರು: ಕನ್ನಡ ಅಲೆಮಾರಿಗಳ ಸ್ಥಿತಿಗತಿ (ಹಂಪಿ: ಕನ್ನಡ ವಿಶ್ವವಿದ್ಯಾಲಯ: ೨೦೦೫)

ಭೈರಪ್ಪ ಕೆ, *ಪಾಶ್ಚಿಮಾತ್ಯ ಹಾಗೂ ಭಾರತೀಯ ಸಾಮಾಜಿಕ ಚಿಂತನೆ* (ಬೆಂಗಳೂರು: ಸಪ್ನ ಬುಕ್‌ಹೌಸ್: ೨೦೦೬)

ಬೋರಲಿಂಗಯ್ಯ ಹಿ ಚಿ, *ವಿಸ್ಮೃತಿ* ಮತ್ತು *ಸಂಸ್ಕೃತಿ* (ಬೆಂಗಳೂರು: ಸಿವಿಜಿ ಪಬ್ಲಿಕೇಷನ್ಸ್: ೨೦೦೧)

ಚಂದ್ರಪೂಜಾರಿ ಎಂ, *ಸಮಾಜ ಸಂಶೋಧನೆ* (ಹಂಪಿ: ಪ್ರಸಾರಂಗ: ಕನ್ನಡವಿಶ್ವವಿದ್ಯಾಲಯ: ೨೦೧೧)

ಚಂದ್ರಪೂಜಾರಿ ಎಂ, *ಸಮಾಜ ಏಕೆ? ಹೇಗೆ?* (ಹಂಪಿ: ಪ್ರಸಾರಂಗ: ಕನ್ನಡವಿಶ್ವವಿದ್ಯಾಲಯ: ೨೦೧೧)

John Scott, Gordon Marshall (Ed), *Oxford Dictionary of Sociology* (New York: Oxford University Press: 2009)

Kothari C R, Gaurav Garg, *Research Methodology* (New Delhi: New Age International Publishers: 2014)

Krishnarwami O R, Ranganatham M, *Methodology of Research in Social Sciences* (Mumbai: Himalaya Publishing House: 2005)

Ram Ahuja, *Research Methods* (Jaipur: Rawat Publications: 2014).

William J Goode, Paul K Hatt, *Methods in Social Research* (Delhi: Surjeet Publications: 2006)

# ಅಧ್ಯಾಯ ಎರಡು

# ವಿಮುಕ್ತ ಬುಡಕಟ್ಟುಗಳ ಚಾರಿತ್ರಿಕ ಹಿನ್ನೆಲೆ

**ಪೀಠಿಕೆ**

ಮಾನವನು ಮೂಲತಃ ಸಮಾಜ ಜೀವಿ ಎಂಬ ಮಾತನ್ನು ಎರಡು ಸಾವಿರ ವರ್ಷಗಳ ಹಿಂದೆಯೇ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದ. ಮಾನವ ಸಮಾಜ ಜೀವಿ ಮತ್ತು ಸಮೂಹ ಜೀವಿಯಾಗಿ ಸಾಮಾಜಿಕ ನಿಯಮಗಳ ಚೌಕಟ್ಟಿನಲ್ಲೇ ಬದುಕುವುದು ಆತನಿಗೆ ಅನಿವಾರ್ಯವಾಗಿತ್ತು. ಹೀಗೆ ಸಮೂಹಗಳ ಸಹವಾಸದಿಂದ ಮಾತ್ರ ಮಾನವನು ಮಾನವನಾಗಿ ಜೀವಿಸಬಲ್ಲ. ಆತನ ಸಾಮಾಜಿಕ ನಡತೆ ಮತ್ತು ವ್ಯಕ್ತಿತ್ವವೆಂಬುದು ಸಮೂಹಗಳ ಕೊಡುಗೆ. ಇತಿಹಾಸದ ಆರಂಭದಿಂದಲೂ ಮಾನವನು ಸಮೂಹಗಳಲ್ಲಿ ಜೀವಿಸುತ್ತಾ ಬಂದವನು. ತನ್ನ ಒಡನಾಡಿಗಳ ಸಹವಾಸ ಮತ್ತು ಸಹಯೋಗದಿಂದ ಹೊಸ ಸಮೂಹಗಳನ್ನು ಸ್ಥಾಪಿಸುತ್ತಾ ಬಂದಿದ್ದಾನೆ. ಮಾನವನು ಸೃಷ್ಟಿಸುತ್ತಾ ಬಂದಿರುವ ಹಲವು ಬಗೆಯ ಭಾಷೆ, ಸಂಸ್ಕೃತಿ, ಆಚಾರ-ವಿಚಾರಗಳಿಂದಾಗಿ ಸಮೂಹಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ವ್ಯಕ್ತಿಗಳಿಗೆ ಸಾಧ್ಯವಾಗಿದೆ. ಮಾನವರ ದೈನಂದಿನ ವ್ಯವಹಾರಗಳಲ್ಲಿ ಕಂಡುಬರುವ ಅಸಂಖ್ಯಾತ ಸಮೂಹಗಳೇ 'ಸಮಾಜ' ಎಂಬ ಬೃಹತ್ ವ್ಯವಸ್ಥೆಯನ್ನು ನಿರ್ಮಿಸಿವೆ. ಆದುದರಿಂದಲೇ ಸಮಾಜವೆಂದರೆ ಸಮೂಹಗಳ ಸಮೂಹ ಎಂದು ಕರೆಯಲಾಗುತ್ತದೆ.

ಭೂಮಿಯ ಮೇಲಿನ ಜೀವ ಸಂಕುಲಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಭೂ ಮಂಡಲದ ಮೇಲೆ ಜೀವಜಂತುಗಳು, ಕ್ರಿಮಿಕೀಟಗಳು, ಪ್ರಾಣಿ ಪಕ್ಷಿಗಳು ಮೊದಲು ಸೃಷ್ಟಿಗೊಂಡವು. ನಂತರ ಮಾನವನ ವಿಕಾಸವಾಯಿತು. ಆದಿಮಾನವ ಹಣ್ಣು-ಹಂಪಲು ಹಾಗೂ ಪಕ್ಷಿಗಳ ಮೊಟ್ಟೆಗಳನ್ನು, ಗೆಡ್ಡೆ-ಗೆಣಸುಗಳನ್ನು ಗಿಡಗಳ ಹಾಗೂ ಕಲ್ಲು ಬಂಡೆಗಳ ಆಶ್ರಯದಲ್ಲಿ

ಸಂಗ್ರಹಿಸುತ್ತಿದ್ದನು. ಕಾಲಕ್ಕೆ ತಕ್ಕಂತೆ ಆಹಾರ ಜೀವನ ರೂಢಿಸಿಕೊಂಡನು. ಅವನಿಗೆ ಬೇಟೆಗಾರಿಕೆಯೇ ಜೀವನೋಪಾಯವಾಗಿತ್ತು. ಅದುವೇ ಆತನ ಮೂಲ ಕಸುಬಾಗಿತ್ತು. ಅಲ್ಲದೆ ಪ್ರಾರಂಭದಲ್ಲಿ ಆಹಾರ ಹುಡುಕುತ್ತಾ ಮತ್ತು ಅನೇಕ ರೀತಿಯ ಪ್ರಕೃತಿ ವಿಕೋಪಗಳಿಂದ ತಪ್ಪಿಸಿಕೊಳ್ಳಲು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅಲೆಮಾರಿಯಂತೆ ಜೀವಿಸತೊಡಗಿದನು. ಅಲ್ಲಿನ ಗಿಡ–ಮರ, ಹೂ–ಬಳ್ಳಿ, ಪ್ರಾಣಿ–ಪಕ್ಷಿಗಳೊಂದಿಗೆ ಅವಿನಾಭಾವ ಸಂಬಂಧವಿಟ್ಟುಕೊಂಡಿದ್ದನು. ಹೀಗೆ ಆಹಾರ ಮತ್ತು ಆಶ್ರಯಕ್ಕಾಗಿ ಅರಣ್ಯವನ್ನು ಅವಲಂಬಿಸಿಕೊಂಡಿದ್ದನು. ಹೀಗೆ ಅನೇಕ ಬುಡಕಟ್ಟುಗಳು ಭಾರತದಲ್ಲಿ ಸ್ವತಂತ್ರವಾಗಿ ಕಾಡಿನಲ್ಲಿ ನೆಮ್ಮದಿಯ ಜೀವನ ನಡೆಸುತ್ತಾ ಬಂದಿದ್ದವು.

**ಬುಡಕಟ್ಟು ಸಮುದಾಯಗಳ ರಚನೆ**

ಸುಮಾರು ೩೦ಸಾವಿರ ವರ್ಷಗಳ ಹಿಂದೆಯೇ ಮಾನವ ಗುಂಪಾಗಿ ಬದುಕಿ, ಗುಂಪಿನ ಹಿತಾಸಕ್ತಿಗಾಗಿ ಹೋರಾಡಿದ. ಇದರ ಫಲವಾಗಿ ಬುಡಕಟ್ಟುಗಳು ಉಗಮಗೊಂಡವು. ಪ್ರತಿಯೊಂದು ಬುಡಕಟ್ಟು ಒಬ್ಬ ಪೂರ್ವಜನ ರಕ್ತ ಸಂಬಂಧಿಗಳಾಗಿದ್ದು ನೂರಾರು ಸಂಖ್ಯೆಯಲ್ಲಿರುತ್ತಿದ್ದರು. ಅವರೆಲ್ಲರು ಒಂದೇ ಗುಹೆಯಲ್ಲಿ ಇಲ್ಲವೆ ಗುಡಿಸಲಲ್ಲಿ ವಾಸವಾಗುತ್ತಿದ್ದರು. ಭಾರತದ ಮೂಲನಿವಾಸಿಗಳು ಆದಿವಾಸಿಗಳೇ ಎಂದು ಹೇಳಬಹುದು. ಇವರು ಪ್ರಧಾನವಾಗಿ ಅಲೆಮಾರಿಗಳು. ತಮಗೂ ತಮ್ಮ ಪರಿವಾರದವರಿಗೂ, ದನಕರುಗಳಿಗೂ ಆಹಾರ ನೀರನ್ನು ಅರಸುತ್ತಾ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವವರು. ಗುಂಪು ಅಥವಾ ಪಂಗಡಗಳಲ್ಲಿ ವಾಸ ಮಾಡುವವರು. ಹೊಟ್ಟೆಪಾಡಿಗಾಗಿ ಬೇಟೆಯನ್ನು ಗೆಡ್ಡೆ ಗೆಣಸುಗಳನ್ನು ನಂಬಿರುವವರು. ಅನಂತರ ಬೇಸಾಯವನ್ನು, ಪಶುಪಾಲನೆಯನ್ನು, ಇತರ ಗೃಹಕೈಗಾರಿಕೆಗಳನ್ನು ಕಲಿತು ತಮಗೆ ಸರಿದೋರುವ ಸ್ಥಳಗಳಲ್ಲಿ ನೆಲೆಸುತ್ತಿದ್ದರು. ಪುರುಷರು ಬೇಟೆಯಾಡುತ್ತಿದ್ದರು. ಸ್ತ್ರೀಯರು ತಿನ್ನುವ ಸಸ್ಯಗಳನ್ನು ಸಂಗ್ರಹಿಸುವುದರೊಂದಿಗೆ ಮಕ್ಕಳ ಲಾಲನೆ ಪಾಲನೆ ಮಾಡುತ್ತಿದ್ದರು. ಮಕ್ಕಳು ಹಿರಿಯರಿಗೆ ಮನೆಗೆಲಸಗಳಲ್ಲಿ ಸಹಾಯ ಹಸ್ತ ನೀಡುತ್ತಿದ್ದರು. ಪುರುಷರು ತಂದ ಆಹಾರವನ್ನು ಸ್ತ್ರೀಯರು ಬಂಧು ಬಳಗಕ್ಕೆಲ್ಲಾ ಹಂಚುತ್ತಿದ್ದರು. ಆಸ್ತಿ ಎಲ್ಲರಿಗೂ ಸೇರುತ್ತಿತ್ತು. ಕುಲದ ಹಿರಿಯರು ಎಲ್ಲರಿಗೂ ಮಾರ್ಗದರ್ಶನ ಮಾಡುತ್ತಿದ್ದರು. ಹೀಗೆ ಎಲ್ಲ ರಕ್ತ ಸಂಬಂಧಿಗಳು ಜೊತೆಗೂಡಿ, ಗುಂಪಿನಲ್ಲಿದ್ದು ಕೂಡಿ ಕೆಲಸ ಮಾಡುವುದರೊಂದಿಗೆ ಎಲ್ಲರು ಜಂಟಿಯಾಗಿ ಆಸ್ತಿಯನ್ನು ಹೊಂದಿ ಅನುಭವಿಸುವವರಿಗೆ ಕುಲದವರು ಅಥವಾ ಕುಲ ಸಮುದಾಯದವರೆಂದು ಕರೆದರು. ರಕ್ತ ಸಂಬಂಧಿಗಳ ಕೂಟಕ್ಕೆ ಬುಡಕಟ್ಟು ಎನ್ನುವರು. ಇಡೀ ಬುಡಕಟ್ಟು ಒಂದೇ ಭಾಷೆ ಮತ್ತು ಸಂಪ್ರದಾಯಯುಳ್ಳವರಾಗಿದ್ದರು. ಬುಡಕಟ್ಟಿನ ವ್ಯವಹಾರ ಅಲ್ಲಿನ ಹಿರಿಯರಿಂದ ನಿರ್ದೇಶನಗೊಳ್ಳುತ್ತಿತ್ತು. ಕುಲದ ಹಿರಿಯರಿಗೆ ಕುಲ ಪಂಚರು ಎಂದು ಕರೆಯುವರು. ಕುಲದ

ಪಂಚರು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದ ಪ್ರಮುಖರಾಗಿರುತ್ತಾರೆ. ಹೀಗೆ ಆದಿಮಾನವರಾಗಿದ್ದ ಮೂಲನಿವಾಸಿಗಳು ಬುಡಕಟ್ಟುಗಳಾಗಿ ಮಾರ್ಪಟ್ಟು ನೆಲೆ ನಿಂತರು. ಬಹುತೇಕ ಬುಡಕಟ್ಟುಗಳು ಅಲೆಮಾರಿ ಸಮುದಾಯಗಳಾಗಿವೆ. ಕೆಲವು ಅರೆ-ಅಲೆಮಾರಿಗಳಾಗಿವೆ. ಬುಡಕಟ್ಟುಗಳ ಬಹುಪಾಲು ಜನ ತಮ್ಮ ಸಮಗ್ರವಾದ ಸಾಂಪ್ರದಾಯಿಕ ಜೀವನ ಪದ್ಧತಿಗಳ ಸ್ವಾರಸ್ಯವಾದ ಲಕ್ಷಣಗಳನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಅವರ ಸಮಾಜದಲ್ಲಿ ಸರ್ವಸಮತಾ ಭಾವನೆಗಳಿವೆ. ಸ್ತ್ರೀಯರನ್ನು ಇತರ ಸಮಾಜಗಳಲ್ಲಿರುವಂತೆ ದಾಸ್ಯದಲ್ಲಿಡುವ ಪದ್ಧತಿ ಇವರಲ್ಲಿ ಇಲ್ಲ. ಜೀವನದಲ್ಲಿ ನೃತ್ಯ, ಗಾನಗಳ ಬಗೆಗೆ ಒಲವನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಇವರು ಪ್ರಕೃತಿ ಆರಾಧಕರಾಗಿದ್ದಾರೆ. ಈ ಮೂಲನಿವಾಸಿಗಳನ್ನು ಅಲೆಮಾರಿಗಳು, ಆದಿವಾಸಿಗಳು, ಗಿರಿಜನರು, ವನ್ಯಜಾತಿಯರು, ಬುಡಕಟ್ಟುಗಳು ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ

**ಬುಡಕಟ್ಟು ಪದದ ಅರ್ಥ ಮತ್ತು ವ್ಯಾಖ್ಯೆ**

'ಬುಡಕಟ್ಟು' ಎಂಬ ಪದಕ್ಕೆ ಅರ್ಥವಿವರಣೆ ಕೊಡುವುದು ಸುಲಭವಲ್ಲ. ಈ ಪದವನ್ನು ಜೀವ ವಿಜ್ಞಾನಿಗಳು, ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಹಾಗೂ ಇತಿಹಾಸಕಾರರು ನಾನಾ ಅರ್ಥದಲ್ಲಿ ಬಳಸಿದ್ದಾರೆ.

'ಯಾವ ಸಮುದಾಯ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸುಖವಾಗಿ ಬದುಕಲು ಬಯಸುವುದೋ, ಪ್ರಕೃತಿ ಜನ್ಯ ಉತ್ಪನ್ನಗಳನ್ನೇ ಭಕ್ಷಿಸಲು ಯತ್ನಿಸುವುದೋ, ತನ್ನದೇಯಾದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೋ ಆ ಸಮುದಾಯಗಳಿಗೆ ಆದಿವಾಸಿ ಅಥವಾ ಬುಡಕಟ್ಟು ಎಂದು ಕರೆಯಬಹುದು. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯ 'ಟ್ರೈಬ್ಸ್' ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇದು ಲ್ಯಾಟೀನ್ ಭಾಷೆಯ 'ಟ್ರೈಬಸ್' ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ್ ಲೇಖಕರು ಲ್ಯಾಟಿಯಂ ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟಿನವರಿಗೆ ಪ್ರಪ್ರಥಮವಾಗಿ 'ಟ್ರೈಬ್' ಎಂಬ ಪದ ಬಳಸಿರುವುದು ವೇದ್ಯವಾಗುತ್ತದೆ. ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತ ಸಂಬಂಧಿಯ ಕುಲಗಳು ಆಧಾರಸ್ಥಂಭಗಳಾಗಿರುವುದರಿಂದ ಕುಟುಂಬ ಹಾಗೂ ರಕ್ತ ಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಿರುವುದು ಸಮಂಜಸವಾಗಿದೆ' (ಮೇತ್ರಿ ಕೆ ಎಂ: ೨೦೦೨:೨೦).

ಕಿಟ್ಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ' ಹಾಗೂ 'ಕುಲ' ಎಂಬ ಅರ್ಥವನ್ನು ನೀಡಿದ್ದಾರೆ.

ಪಡ್ಡಿಂಗ್‌ಟನ್ ಹೇಳುವಂತೆ, 'ಸಾಮಾನ್ಯ ಭಾಷೆಯನ್ನು ಮಾತನಾಡುವ, ಸಾಮಾನ್ಯ ವಾಸಸ್ಥಳದಲ್ಲಿ ನೆಲೆಸಿರುವ, ಏಕರೂಪದ ಸಂಸ್ಕೃತಿಯನ್ನು ಹೊಂದಿರುವ ಜನಗಳ ಗುಂಪಿಗೆ ಬುಡಕಟ್ಟು' ಎನ್ನುವರು (ವಿನಾಯಕ ಶ್ರೀರಾಮ್:೨೦೧೪:೧೦).

ಡಿಕ್ಷನರಿ ಆಫ್ ಆಂಥ್ರೋಪಾಲಜಿ ಪ್ರಕಾರ, 'ಬುಡಕಟ್ಟು ಒಂದು ಸಾಮಾಜಿಕ ಗುಂಪಾಗಿದ್ದು, ಅದು ನಿರ್ಧಿಷ್ಟ ವಾಸಸ್ಥಳದಲ್ಲಿ ನೆಲೆಸುತ್ತಾ, ನಿರ್ಧಿಷ್ಟ ಭಾಷೆಯನ್ನಾಡುತ್ತಾ, ಏಕ ರೂಪದ ಸಂಸ್ಕೃತಿಯನ್ನು ಹಾಗೂ ಏಕೀಕೃತ ಸಾಮಾಜಿಕ ಸಂಘಟನೆಯನ್ನು ಹೊಂದಿರುತ್ತದೆ'.

ಇಂಪೆರಿಕಲ್ ಗೆಝೇಟಿಯರ್ ಆಫ್ ಇಂಡಿಯಾದ ಪ್ರಕಾರ, 'ಬುಡಕಟ್ಟು ಎಂಬುದು ಹಲವು ಕುಟುಂಬಗಳನ್ನು ಒಳಗೊಂಡಿದ್ದು, ಅವೆಲ್ಲವೂ ಸಾಮಾನ್ಯ ಹೆಸರನ್ನು, ಸಾಮಾನ್ಯ ಭಾಷೆಯನ್ನು, ಸಾಮಾನ್ಯ ವೃತ್ತಿಯನ್ನು ಹೊಂದಿದ್ದು, ಒಂದು ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುತ್ತಿರುತ್ತಾರೆ' (ನದೀಮ್ ಹಸ್ನೈನ್:೨೦೧೧:೩೨).

'ಒಂದು ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳು ವಂತಹ, ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು' ಎಂದು ಲಂಡನ್ನಿನ ರಾಯಲ್ ಆಂಥ್ರೋಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ವ್ಯಾಖ್ಯಾನಿಸಿದೆ.

ಒಟ್ಟಾರೆಯಾಗಿ, ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ ಎಂಬ ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗಿದೆ.

**ಬುಡಕಟ್ಟು ಸಮುದಾಯದ ಲಕ್ಷಣಗಳು**

ಯಾವುದೇ ಒಂದು ಸಮದಾಯವನ್ನು ಬುಡಕಟ್ಟು ಎಂದು ಗುರುತಿಸಬೇಕಾದರೆ ಈ ಕೆಳಕಂಡ ಲಕ್ಷಣಗಳನ್ನು ಆ ಸಮುದಾಯ ಹೊಂದಿರಬೇಕು.

೧. ನಿರ್ಧಿಷ್ಟ ವಾಸಸ್ಥಾನ/ಭೂ ಪ್ರದೇಶ ಅಥವಾ ಭೌಗೋಳಿಕ ಪ್ರತ್ಯೇಕತೆ

೨. ನಿರ್ಧಿಷ್ಟ ಹೆಸರು

೩. ನಿರ್ಧಿಷ್ಟ ಭಾಷೆ

೪. ನಿರ್ಧಿಷ್ಟ ಸಂಸ್ಕೃತಿ

೫. ಪೂರ್ವಜರಲ್ಲಿ ನಂಬಿಕೆ

೬. ಪ್ರತ್ಯೇಕವಾದ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆ

## ವಿಮುಕ್ತ ಬುಡಕಟ್ಟುಗಳ ಹಿನ್ನೆಲೆ

ಅಪರಾಧಿ ಬುಡಕಟ್ಟು ಎನ್ನುವ ಪದ ಬಳಕೆಗೊಳ್ಳುವುದರ ಹಿಂದೆ ಬ್ರಿಟಿಷ್ ಆಳ್ವಿಕೆಯ ಭಾರತದ ಚರಿತ್ರೆ ಅಡಗಿದೆ. ಭಾರತದ ಸಂಸ್ಕೃತಿಯನ್ನು ಅರಿಯದ ಬ್ರಿಟಿಷರಿಗೆ ಭಾರತವನ್ನು ಅರ್ಥ ಮಾಡಿಕೊಳ್ಳುವುದು ಅಷ್ಟು ಸುಲಭವಾಗಿರಲಿಲ್ಲ. ಭಾರತದ ಸಾಮಾನ್ಯನನ್ನು ಅರ್ಥ ಮಾಡಿಕೊಳ್ಳದೇ ಅವರಿಗೆ ಇಲ್ಲಿ ಯಾವುದೇ ವಹಿವಾಟು ಮತ್ತು ರಾಜ್ಯಭಾರ ಮಾಡುವುದು ಕಷ್ಟದ ವಿಚಾರವೇ ಆಗಿತ್ತು. ಹೀಗಾಗಿ ಇಲ್ಲಿನ ಜನರ ಆಚಾರ-ವಿಚಾರಗಳನ್ನು ಅರಿಯುವ ಉದ್ದೇಶವನ್ನು ಇರಿಸಿಕೊಂಡೇ ಪಾಶ್ಚಿಮಾತ್ಯರು ಇಲ್ಲಿಯ ಸಮುದಾಯಗಳ ಅಧ್ಯಯನಗಳನ್ನು ೧೮-೧೯ನೇ ಶತಮಾನದಲ್ಲಿ ಕೈಗೊಂಡರು. ಪಾಶ್ಚಿಮಾತ್ಯರು ಮುಖ್ಯವಾಹಿನಿಯಲ್ಲಿರುವ ಜಾತಿಗಳಿಗಿಂತ ಭಾರತದ ಕುಶಲಕರ್ಮಿ, ಆದಿವಾಸಿ, ಅಲೆಮಾರಿ ಸಮುದಾಯಗಳ ಮೇಲೆ ಹೆಚ್ಚು ಒತ್ತು ಕೊಟ್ಟು ಅಧ್ಯಯನ ನಡೆಸಿದರು. ಕಂಪನಿ ಆಡಳಿತ ಪೂರ್ವದಲ್ಲಿ ಭಾರತದ ಪ್ರತಿಯೊಂದು ಹಳ್ಳಿಯೂ ಹಲವು ಸಮುದಾಯಗಳನ್ನು ಒಳಗೊಂಡಿದ್ದು, ಆ ಸಮುದಾಯಗಳು ಒಂದಕ್ಕೊಂದು ಪೂರಕವಾಗಿದ್ದು ಇಡೀ ಹಳ್ಳಿಯನ್ನೇ ಸ್ವಾವಲಂಬಿಯಾಗುವ ರೀತಿಯ ಸಂರಚನೆ ಮಾಡಿಕೊಂಡಿದ್ದರು. ಇಲ್ಲಿಯ ಪ್ರತಿ ಸಮುದಾಯವೂ ಒಂದಕ್ಕೊಂದು ಪೂರಕವಾಗಿ ಗೌರವ ಕೊಟ್ಟುಕೊಳ್ಳುತ್ತಲೇ ಕಾರ್ಯ ನಿರ್ವಹಿಸುತ್ತಾ ಸ್ವಯಂ ಪರಿಪೂರ್ಣ ಎನ್ನುವಂತಹ ಜೀವನ ನಡೆಸುತ್ತಿದ್ದವು. ಇದು ಕೇವಲ ಒಂದು ಹಳ್ಳಿಯ ಕಥೆಯಲ್ಲ, ಇಡೀ ಭಾರತದ ಕಥೆಯೇ ಆಗಿತ್ತು. ಆದರೆ ಕಂಪನಿ ಸರ್ಕಾರ ಭಾರತದ ಆಳ್ವಿಕೆಗೆ ತೊಡಗಿದ ತರುವಾಯ ಭಾರತದ ಸ್ಥಿತಿಯೇ ನಿಧಾನಕ್ಕೆ ಬದಲಾಗತೊಡಗಿತು.

ಆದಿವಾಸಿಗಳು, ಅಲೆಮಾರಿಗಳು, ಅರೆ-ಅಲೆಮಾರಿ ಬುಡಕಟ್ಟು ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ಪ್ರದೇಶದಿಂದ ಪ್ರದೇಶಕ್ಕೆ, ರಾಜ್ಯದಿಂದ ರಾಜ್ಯಕ್ಕೆ ವಲಸೆ ಹೋಗುತ್ತಿದ್ದರು. ಅವರು ಕರಕುಶಲ ಕಲೆ ಮತ್ತು ಸಣ್ಣ-ಪುಟ್ಟ ವ್ಯಾಪಾರಗಳಲ್ಲಿ ನಿಪುಣರಾಗಿದ್ದರು. ಇದರಲ್ಲಿಯೇ ಅವರು ಸಂತೋಷವನ್ನು ಕಂಡುಕೊಂಡಿದ್ದರು.

ಭಾರತದಲ್ಲಿ ಬ್ರಿಟಿಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲಿಯೂ ಧಕ್ಕೆ ಬಂದಿರಲಿಲ್ಲ. ಮುಸಲ್ಮಾನರ ಹಲವಾರು ಶತಮಾನಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟುಗಳು ಸ್ವತಂತ್ರವಾಗಿದ್ದವು. ಬ್ರಿಟಿಷರು ಬಂದ ನಂತರ ಭಾರತದಾದ್ಯಂತ ಏಕ ರೀತಿಯ ಆಳ್ವಿಕೆಯ ಕ್ರಮ ಜಾರಿಗೆ ಬಂತು. ಕಾಲ ಕ್ರಮೇಣ ಕೈಗಾರಿಕಾ ಕ್ರಾಂತಿಯಿಂದಾಗಿ ಬ್ರಿಟಿಷರು ಭಾರತದಾದ್ಯಂತ ರೈಲ್ವೇ ಸಂಪರ್ಕ ಏರ್ಪಡಿಸಲು, ರಸ್ತೆಗಳನ್ನು ಮಾಡಿಸಲು ಆರಂಭಿಸಿದರು. ಇದರಿಂದಾಗಿ ಕಾಡುಗಳನ್ನು ಕಡಿಯಬೇಕಾಯಿತು. ಸಂಪರ್ಕ ಸಾಧನಗಳು ಹೆಚ್ಚಾದಂತೆಲ್ಲಾ ಪರ್ವತಾರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟು ಜನ ಅನಿವಾರ್ಯವಾಗಿ

ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಈ ಮಧ್ಯೆ ಕ್ರಿಶ್ಚಿಯನ್ ಪಾದ್ರಿಗಳು ಬುಡಕಟ್ಟು ಜನರಿಗೆ ಕ್ರೈಸ್ತ ಧರ್ಮದ ಭೋಧನೆಯನ್ನು ಮಾಡುವುದರ ಮೂಲಕ ಅವರನ್ನು ತಮ್ಮ ಧರ್ಮಕ್ಕೆ ಪರಿವರ್ತಿಸಲು ಯತ್ನಿಸಿದರು. 'ಆದರೆ ಭಾರತದ ಬುಡಕಟ್ಟುಗಳ ಮೇಲೆ ತೀವ್ರ ಪರಿಣಾಮ ಉಂಟಾಗಲು ಬ್ರಿಟಿಷರು ಈ ಬುಡಕಟ್ಟು ಜನರಿಗೆ ಸೇರಿದ ಪರ್ವತಾರಣ್ಯ ಪ್ರದೇಶಗಳನ್ನು ಅವರಿಂದ ಕಿತ್ತುಕೊಂಡದ್ದು ಕಾರಣವಾಯಿತು. ಇದರಿಂದಾಗಿ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಹಲವಾರು ಬುಡಕಟ್ಟುಗಳ ಜನಕ್ಕೆ ತಮ್ಮ ಭೂಮಿ ಇಲ್ಲದಂತಾಯಿತು. ಈ ಸಂದರ್ಭದಲ್ಲಿಯೇ ಬ್ರಿಟಿಷ್ ಜನ ಟೀ ತೋಟಗಳ ಒಡೆಯರಾದರು, ಗಣಿಗಳ ಮಾಲೀಕರಾದರು. ಇವುಗಳಲ್ಲಿ ಕೆಲಸ ಮಾಡಲು ಕೆಲಸಗಾರರು ಬೇಕಾದರು. ಆ ವೇಳೆಗಾಗಲೇ ಭೂಮಿಯನ್ನು ಕಳೆದುಕೊಂಡಿದ್ದ ಬುಡಕಟ್ಟು ಜನ ಟೀ ತೋಟಗಳಲ್ಲಿ, ಗಣಿಗಳಲ್ಲಿ ಕೆಲಸಗಾರರಾಗಿ ಸೇರಿದರು. ಇದರಿಂದ ದಿನನಿತ್ಯ ಇತರ ಜನರ ಸಂಪರ್ಕಕ್ಕೆ ಬಂದು, ಬುಡಕಟ್ಟು ಜನ ತಮ್ಮ ಸಂಸ್ಕೃತಿಯ ಸ್ವರೂಪವನ್ನು ಕಳೆದುಕೊಳ್ಳುತ್ತಾ ಇತರ ಧರ್ಮಗಳ, ಜಾತಿಗಳ ಸಂಪ್ರದಾಯಗಳನ್ನು ಅನುಸರಿಸತೊಡಗಿದರು' (ಪ್ರಭಾಕರ ಎ ಎಸ್:೨೦೦೮:೪೬).

ಭೂಮಿಯನ್ನು ಕಳೆದುಕೊಂಡ ಬಹುಪಾಲು ಬುಡಕಟ್ಟು ಜನ ಕೂಲಿಗಳಾಗಿ ದುಡಿಯತೊಡಗಿ ತೀವ್ರವಾದ ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿದರು. ೧೯ನೇ ಶತಮಾನದ ವಸಾಹತುಶಾಯಿಯ ಆರ್ಥಿಕ ಕಾಯ್ದೆಗಳು ಅನೇಕ ಸಮುದಾಯಗಳ ಪಾರಂಪರಿಕ ವೃತ್ತಿಗಳನ್ನು ನಾಶ ಮಾಡಿದವು. ಕೆಲವು ಕಾಯ್ದೆಗಳು ವ್ಯಾಪಾರದಲ್ಲಿ ತೊಡಗಿದ್ದ ಸಮುದಾಯಗಳ ಮೇಲೆ ಕೆಟ್ಟ ಪರಿಣಾಮ ಬೀರಿದವು. ಸರ್ಕಾರದ ಅರಣ್ಯ ಕಾಯ್ದೆಗಳು, ಈ ಸಮುದಾಯಗಳು ಅರಣ್ಯದ ಮೇಲೆ ಮತ್ತು ಅರಣ್ಯ ಉತ್ಪನ್ನಗಳ ಮೇಲೆ ಹೊಂದಿದ್ದ ಹಕ್ಕನ್ನು ತಡೆಹಿಡಿದವು. ಇದರಿಂದ ಅನೇಕ ಸಮುದಾಯಗಳ ಆರ್ಥಿಕತೆಗೆ, ಜೀವನ ನಿರ್ವಹಣೆಗೆ ಪೆಟ್ಟು ಬಿದ್ದು, ಅವರು ಚಿಕ್ಕ-ಪುಟ್ಟ ಅಪರಾಧಗಳಲ್ಲಿ ತೊಡಗುವಂತಾಯಿತು. ಕೆಲವು ಬುಡಕಟ್ಟಿನ ಜನರಂತೂ ತಮ್ಮ ಪ್ರದೇಶ ಪರಕೀಯರ ವಶವಾಶಯಿತೆಂಬ ಪರಕೀಯ ಪ್ರಜ್ಞೆ ಜಾಗೃತವಾಗಿ ತಮ್ಮ ಹಕ್ಕುಗಳನ್ನುಳಿಸಿಕೊಳ್ಳಲು ದರೋಡೆಗೆ ತೊಡಗಿದರು. ೧೮೬೬, ೧೮೭೬-೭೮ ಮತ್ತು ೧೮೯೮ರಲ್ಲಿ ಇಂತಹ ಅಪರಾಧಗಳು ಮತ್ತು ಬರಗಾಲ ವ್ಯಾಪಕವಾಗಿ ಹರಡಿತ್ತು. ಇದಕ್ಕೆ ಸಾಕ್ಷಿಯೆಂಬಂತೆ ದರೋಡೆ, ಆಹಾರ ದಂಗೆ, ಮಾರುಕಟ್ಟೆ ಲೂಟಿ, ಆಸ್ತಿ ನಾಶ, ದನಕರು ಕಳ್ಳತನ ಇತ್ಯಾದಿ ಕಲಹಗಳು ನಡೆದವು. ೧೮೭೭ರಲ್ಲಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲಿಸ್ ಉಲ್ಲೇಖಿಸಿದಂತೆ, 'ಬರಗಾಲದಲ್ಲಿ ನಡೆದ ದರೋಡೆಗಳು ನಡೆಸಿದ್ದು ಹಸಿದ ಜನರೇ ಹೊರತು, ಸಾಮಾನ್ಯ ಅಪರಾಧಿಗಳಲ್ಲ' (ಮಲ್ಲಿಗಾಂಧಿ:೨೦೦೮:೨). ಇದರಿಂದ ತಿಳಿದುಬರುವುದೇನೆಂದರೆ, ಬುಡಕಟ್ಟುಗಳು ಅಪರಾಧ ವೆಸಗಿದ್ದು ಕೇವಲ ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಮಾತ್ರ. ಇಂತಹ ಅನೇಕ ಸಮುದಾಯಗಳನ್ನು

ಅಪರಾಧಿ ಬುಡಕಟ್ಟುಗಳೆಂದು ಪರಿಗಣಿಸಿ, ಬ್ರಿಟಿಷ್ ಸರ್ಕಾರ ಇವುಗಳ ಮೇಲೆ ವಿಶೇಷ ರಕ್ಷಣಾ ಕ್ರಮಗಳನ್ನು ಕೈಗೊಂಡಿತು. ಕಂಪನಿ ಆಡಳಿತದ ಅವಧಿಯಲ್ಲಿ ಕೃಷಿ ಹೆಚ್ಚು ವಾಣಿಜ್ಯೀಕರಣ ಗೊಂಡ ಮೇಲೆ ಚಿಕ್ಕ ರೈತರೆಲ್ಲ ಭೂಮಿಯನ್ನು ಕಳೆದುಕೊಂಡರು. ಈ ಹಂತದಲ್ಲಿಯೇ ಭಾರತದಲ್ಲಿ ಆದಿವಾಸಿ ಹೋರಾಟಗಳು ಆರಂಭವಾದವು. ಭೂಮಿಯನ್ನು ಕಳೆದುಕೊಂಡ ಅನೇಕ ಆದಿವಾಸಿಗಳು ಮತ್ತು ಕೆಳಜಾತಿಗಳು ಕಂಪನಿ ಆಡಳಿತದ ವಿರುದ್ಧ ತಿರುಗಿಬಿದ್ದರು. ಇದೇ ಹೊತ್ತಿಗೆ ಉತ್ತರ ಭಾರತದಲ್ಲಿ ಮೊದಲ ಬಾರಿಗೆ ಒಂದು ಅಮಾನುಷ ಕಾಯ್ದೆಯನ್ನು ಜಾರಿಗೆ ತರಲಾಯಿತು. ಅದೇ ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆ. ಈ ಅಪರಾಧಿ ಬುಡಕಟ್ಟುಗಳ ಕಾಯ್ದೆಯಡಿ ಬಂದ ಸಮುದಾಯಗಳನ್ನು ಜಿ ಎನ್ ದೇವಿ ಹೀಗೆ ಪಟ್ಟಿ ಮಾಡಿದ್ದಾರೆ, 'ಅಲೆಮಾರಿ ಗಾಯಕ ಪರಂಪರೆಯ ಸಮುದಾಯಗಳು, ಫಕೀರರು, ಚಿಕ್ಕ ವರ್ತಕರು, ಪ್ರದರ್ಶನ ಕಲೆಗಳನ್ನು ಅವಲಂಬಿಸಿದ್ದ ಸಮುದಾಯಗಳು, ಸಾಮಾನು ಸರಂಜಾಮು ಗಳನ್ನು ಸಾಗಿಸುತ್ತಿದ್ದವರನ್ನು ಈ ಅಪರಾಧಿ ಬುಡಕಟ್ಟುಗಳ ಕಾಯ್ದೆಯಡಿ ತರಲಾಯಿತು. ಈ ಕಾಯ್ದೆ ಮೊದಲ ಬಾರಿಗೆ ಜಾರಿಗೆ ಬಂದದ್ದು ಉತ್ತರ ಭಾರತ, ಮಧ್ಯ ಭಾರತ ಮತ್ತು ವಾಯುವ್ಯ ಭಾರತದ ರಾಜ್ಯಗಳಲ್ಲಿ' (ಪ್ರಭಾಕರ ಎ ಎಸ್:೨೦೦೮:೪೨೫). ಈ ಹಂತದಲ್ಲಿ ಇಂತಹ ಸಮುದಾಯಗಳು ಅನಿವಾರ್ಯವಾಗಿ ಅಲೆಮಾರಿಗಳಾಗಿ ಪರಿವರ್ತನೆಗೊಂಡರು. ಅಲ್ಲದೆ ತಮ್ಮ ಪಾರಂಪರಿಕ ಅವಲಂಬನೆಯನ್ನು ನಾಶ ಮಾಡಿದ ಆಧುನಿಕ ವ್ಯವಸ್ಥೆಯ ಮೇಲೆ ಇವರು ಸಹಜವಾಗಿಯೇ ಕೋಪಗೊಂಡಿದ್ದರು, ಸಮಯ ಸಿಕ್ಕಾಗಲೆಲ್ಲಾ ಈ ದಿಕೆಟ್ಟ ಸಮುದಾಯ ಗಳು ವ್ಯವಸ್ಥೆಯನ್ನು ಉಗ್ರವಾಗಿ ಪ್ರತಿಭಟಿಸಲಾರಂಭಿಸಿದರು. 'ಉತ್ತರ ಭಾರತದಲ್ಲಿ ರಜಪೂತರ ಅವನತಿಯ ನಂತರ 'ಅಪರಾಧಿ ಗುಂಪುಗಳು' ಎಂದು ಹೆಸರಿಸಲ್ಪಡುವ ಸಮುದಾಯಗಳು ಅಸ್ತಿತ್ವಕ್ಕೆ ಬಂದವು. ಈ ಗುಂಪುಗಳು ತಮ್ಮ ಮೂಲವನ್ನು ರಜಪೂತರೊಂದಿಗೆ ಗುರುತಿಸಿ ಕೊಳ್ಳುತ್ತವೆ. ರಜಪೂತರ ಆಳ್ವಿಕೆ ಕೊನೆಗೊಂಡು, ಮುಸ್ಲಿಂ ಮತ್ತು ಕಂಪನಿ ಆಡಳಿತದ ಸಂದರ್ಭದಲ್ಲಿ ಇಲ್ಲಿನ ಕೃಷಿಕ ಸಮುದಾಯಗಳೂ ಸಹ ತಮ್ಮ ಕೃಷಿ ಭೂಮಿಯನ್ನು ಕಳೆದುಕೊಂಡವು. ಈ ನೆಲೆ ಕಳೆದುಕೊಂಡ ಸಮುದಾಯಗಳೇ ನಂತರ ಅಪರಾಧಿ ಚಟುವಟಿಕೆಗಳಲ್ಲಿ ತೊಡಗಿದವು' (ಅದೇ: ೪೨೫). ಹೀಗೆ ಉತ್ತರ ಭಾರತದಲ್ಲಿ ತಮ್ಮ ಆರ್ಥಿಕ ನೆಲೆಗಳನ್ನು ಕಳೆದುಕೊಂಡ ಅನೇಕ ಸಮುದಾಯಗಳು ಕಂಪನಿ ಆಡಳಿತದ ವಿರುದ್ಧ ಸಹಜವಾಗಿಯೇ ತಿರುಗಿಬಿದ್ದವು.

ಇದಕ್ಕೂ ಪೂರ್ವದಲ್ಲಿ ೧೭೬೧ರಲ್ಲಿ ಮರಾಠ ಹಾಗೂ ಮೊಘಲರ ನಡುವೆ ಪಾಣೀಪತ್ ಯುದ್ಧ ಜರುಗಿತು. ಪ್ರತಿಯೊಬ್ಬ ಹೋರಾಟಗಾರ ಸೈನಿಕನಿಗೆ ಪೂರಕವಾಗಿ ಅಸಂಖ್ಯಾ ಕೆಲಸಗಾರರು ಕಾರ್ಯ ನಿರ್ವಹಿಸುತ್ತಿದ್ದರು. ಅವರಲ್ಲಿ ಆಯುಧ ತಯಾರಿಸುವವರು, ಪ್ರಾಣಿಗಳನ್ನು

ನೋಡಿಕೊಳ್ಳುವವರು, ನೀರು ಸರಬರಾಜು ಮಾಡುವವರು, ಔಷಧಿ ನೀಡುವಂತಹ ವೈದ್ಯರು, ಜೊತೆಗೆ ವಿರೋಧಿಗಳನ್ನು ದೋಚುವವರು, ಇತ್ಯಾದಿ ಎಲ್ಲರೂ ಕಾರ್ಯನಿರ್ವಹಿಸುತ್ತಿದ್ದರು. ಹೋರಾಟದಲ್ಲಿ ಸೈನಿಕ ಕೊನೆಗೊಂಡರೆ ಅವನೊಂದಿಗೆ ವ್ಯಾವಹಾರಿಕವಾಗಿ ಸಂಬಂಧವಿರಿಸಿ ಕೊಂಡವರು ಇನ್ನೊಬ್ಬರನ್ನು ಅವಲಂಬಿಸಬೇಕಾಗಿತ್ತು. ಇಲ್ಲವೇ ಜೀವನೋಪಾಯಕ್ಕಾಗಿ ಅನ್ಯ ಮಾರ್ಗಗಳನ್ನು ಅನುಸರಿಸಬೇಕಾದ ಅನಿವಾರ್ಯತೆ ಇದ್ದಿತು. ಜೊತೆಗೆ ಸೈನ್ಯದೊಂದಿಗೆ ಸಂಪರ್ಕ ಕಳೆದುಕೊಂಡ ಇಂತಹ ಕೆಲಸಗಾರ ಪಂಗಡಗಳೆಲ್ಲಾ ಬೇರೆ ಬೇರೆ ಕಡೆ ಚೆದುರಿಹೋದವು. ಇದೇ ರೀತಿಯ ಪರಿಸ್ಥಿತಿ ಉತ್ತರ ಭಾರತದಲ್ಲಿಯೂ ಉಂಟಾದುದನ್ನು ಕಾಣಬಹುದು. ರಾಣಾಪ್ರತಾಪನ ಆಳ್ವಿಕೆ ಕೊನೆಗೊಂಡ ತರುವಾಯ ರಾಜಾಶ್ರಯವನ್ನೇ ನಂಬಿ ಬದುಕುತ್ತಿದ್ದ ಎಷ್ಟೋ ಸಮುದಾಯಗಳು ದಕ್ಷಿಣ ಭಾರತದತ್ತ ವಲಸೆ ಬಂದಿರುವುದು ಕಂಡುಬರುತ್ತದೆ. '೧೭೪೪ ಮತ್ತು ೧೮೭೧ರ ನಡುವಿನ ಭಾರತದ ಇತಿಹಾಸ ಅತ್ಯಂತ ರಕ್ತಪಾತದಿಂದ ಕೂಡಿದ ಇತಿಹಾಸವಾಗಿದೆ. ಭಾರತದ ಸ್ಥಳೀಯ ರಾಜ್ಯಗಳ ವಿರುದ್ಧ ಈ ಅವಧಿಯಲ್ಲಿ ಕಂಪನಿ ಆಡಳಿತವು ಅತ್ಯಂತ ಕ್ರೂರ ಯುದ್ಧಗಳನ್ನು ಮಾಡಿತು. ಆಂಗ್ಲೋ ಮರಾಠ ಯುದ್ಧ, ಮೈಸೂರು ಯುದ್ಧ, ಹೋಳ್ಕರ ಶರಣಾಗತಿ, ಪೇಶ್ವೆಗಳ ಸೋಲು, ವೆಲ್ಲೂರಿನ ಸಿಪಾಯಿ ದಂಗೆ, ಮೈಸೂರು ಮತ್ತು ಕೂರ್ಗ್‌ಗಳನ್ನು ವಶಪಡಿಸಿಕೊಂಡಿದ್ದು, ಸಿಂಧ್, ಸಿಖ್, ಔಧ್ ಪ್ರದೇಶಗಳನ್ನು ಯುದ್ಧಗಳ ಮೂಲಕ ವಶಪಡಿಸಿಕೊಂಡಿದ್ದು, ಮತ್ತು ೧೮೫೭ರಲ್ಲಿ ನಡೆದ ಸಿಪಾಯಿ ದಂಗೆಗಳು, ಹಲವು ಸ್ಥಳೀಯ ಸಮುದಾಯಗಳನ್ನು ನೆಲೆ ಇಲ್ಲದಂತೆ ಮಾಡಿದವು. ಈ ಸಮುದಾಯಗಳೇ ಮುಂದೆ ಅಲೆಮಾರಿಗಳಾಗಿ ಪರಿವರ್ತಿತವಾದವು' (ಅದೇ:೪೨೫-೬).

ಒಂದು ಕಡೆ ಉತ್ತರ ಭಾರತದಿಂದ ವಲಸೆ ಬಂದ ಅಲೆಮಾರಿ ಸಮುದಾಯಗಳು, ಮತ್ತೊಂದು ಕಡೆ ಸ್ಥಳೀಯ ಅರಸರ ಅವನತಿಯ ನಂತರ ಚೆದುರಿಹೋದ ಕುಶಲ ಕರ್ಮಿ ಮತ್ತು ಮೂಲನಿವಾಸಿ ಸಮುದಾಯಗಳು ತಾವು ನೆಲೆನಿಂತ ಪ್ರದೇಶಗಳಲ್ಲಿಯೇ ಪರ್ಯಾಯ ಜೀವನ ಮಾರ್ಗಗಳನ್ನು ಕಂಡುಕೊಂಡವು. ಆದರೆ ಕಂಪನಿ ಆಡಳಿತ ವ್ಯವಸ್ಥೆ ಪ್ರವೇಶವಾದ ನಂತರ ಅವರ ಹೊಸ ನೀತಿ-ಕಾಯ್ದೆಗಳು ಇವರನ್ನು ಮತ್ತಷ್ಟು ಅಧೋಗತಿಗೆ ತಳ್ಳಿದವು. ಕಂಪನಿ ಅಧಿಕಾರಿಗಳು ಈ ಸಮುದಾಯಗಳನ್ನು ತುಂಬಾ ಅನುಮಾನದ ದೃಷ್ಟಿಯಿಂದ ನೋಡುತ್ತಿದ್ದರು. ಅಕಸ್ಮಾತ್ ಕಂಪನಿ ಆಡಳಿತದ ವಿರುದ್ಧ ತಿರುಗಿಬಿದ್ದು ಕಾದಿದರೆ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವ ಅಪಾಯದಲ್ಲಿ ಭಾರತದ ಎಲ್ಲಾ ಸ್ಥಳೀಯ ಸಂಸ್ಥಾನಗಳು ಸಿಲುಕಿಕೊಂಡವು. ಆದರೆ ಬಹುತೇಕ ಎಲ್ಲಾ ಸಂಸ್ಥಾನಗಳನ್ನು ಬ್ರಿಟಿಷ್ ಆಡಳಿತ ತನ್ನ ತಂತ್ರಗಳ ಮೂಲಕ ವಶಪಡಿಸಿಕೊಳ್ಳುತ್ತಲೇ ಹೋಯಿತು. ತನ್ನ ವಿರುದ್ಧ ತಿರುಗಿ ಬಿದ್ದ ಸಮುದಾಯಗಳನ್ನು ಕಾನೂನುಗಳ ಮೂಲಕ ಹತ್ತಿಕ್ಕಲು ಕೆಲವು ನಿಯಮಗಳನ್ನು ರೂಪಿಸಿತು. ಈ ಹಂತದಲ್ಲಿಯೇ ಅಪರಾಧಿ ಬುಡಕಟ್ಟು ಕಾಯ್ದೆ ಜಾರಿಗೆ ಬಂದಿತು.

ಕಂಪನಿ ಆಡಳಿತ ಪ್ರಬಲವಾಗುತ್ತಿದ್ದಂತೆ ಈ ದೇಶದ ಸ್ಥಳೀಯ ರಾಜರು ನಿವೃತ್ತರಾಗಿ ಪಿಂಚಣಿ ಪಡೆಯಲಾರಂಭಿಸಿದರು. ಭೂ ಮಾಲೀಕರು ರಾಜಿ ಮಾಡಿಕೊಂಡು ತಮ್ಮ ಆಸ್ತಿಗಳನ್ನು ರಕ್ಷಿಸಿಕೊಂಡರು. ಆದರೆ ಎಲ್ಲವನ್ನೂ ಕಳೆದುಕೊಂಡದ್ದು ಶ್ರಮಜೀವಿ ವರ್ಗ ಮಾತ್ರ. ಕಂಪನಿ ಆಡಳಿತದ ವಿರುದ್ಧ ಇವರು ಹೋರಾಡಲೇಬೇಕಾದ ಅನಿವಾರ್ಯತೆ ಏರ್ಪಟ್ಟಿತು. ಮನುಷ್ಯನ ಸಹಜ ಹಕ್ಕುಗಳಾದ ಮಾತನಾಡುವ, ಪ್ರಶ್ನಿಸುವ, ಸ್ವತಃ ತಮ್ಮನ್ನು ಆಳಿಕೊಳ್ಳುವ, ತಮ್ಮ ಆಸ್ತಿ ರಕ್ಷಣೆ ಮಾಡಿಕೊಳ್ಳುವ ಮತ್ತು ತಮ್ಮ ಅನನ್ಯತೆಗಳನ್ನು ಉಳಿಸಿಕೊಳ್ಳುವ ಜನತಾಂತ್ರಿಕ ಅಂಶಗಳಿಂದಲೇ ಈ ಹೋರಾಟಗಳು ರೂಪಗೊಂಡಿದ್ದವು. 'ಯಾವ ಸಮುದಾಯಗಳು ಸ್ಥಳೀಯ ರಾಜನ ಸೈನ್ಯದಲ್ಲಿದ್ದು ಕಂಪನಿ ಆಡಳಿತದ ವಿರುದ್ಧ ಹೋರಾಡುತ್ತಿದ್ದವೋ ಆ ಎಲ್ಲಾ ಸಮುದಾಯಗಳನ್ನು ಕಂಪನಿ ಸರ್ಕಾರ ಯುದ್ಧ ನಂತರ ಅನೇಕ ಬಗೆಯಲ್ಲಿ ಹಿಂಸಿಸುತ್ತಿತ್ತು. ಅವರಿಗೆ ಭಾರತ ಸಮಾಜದ ಕುರಿತು ಸರಿಯಾದ ಕಲ್ಪನಯೇ ಇರಲಿಲ್ಲ. ಅಲೆಮಾರಿ, ಪಶುಪಾಲಕರು, ವೃತ್ತಿ ಸಂಗೀತಗಾರರು, ಆದಿವಾಸಿಗಳು, ದೊಂಬರಾಟದವರು, ಜಿಪ್ಸಿಗಳು, ಹಾವಾಡಿಸುವವರು, ಅಲೆಮಾರಿ ವೈದ್ಯರು, ಈ ಅನೇಕ ಸಮುದಾಯಗಳನ್ನು ಬ್ರಿಟಿಷರು ಅರ್ಥಮಾಡಿಕೊಳ್ಳಲಿಲ್ಲ. ಈ ಸಮುದಾಯಗಳನ್ನು ಅವರು ಸದಾ ಅನುಮಾನಿಸುತ್ತಲೇ ಬಂದರು. ಸಹಜವಾಗಿಯೇ ಈ ಸಮುದಾಯಗಳು ಅಪರಾಧಿ ಸಮುದಾಯಗಳ ಪಟ್ಟಿಗೆ ಸೇರಿಸಲ್ಪಟ್ಟವು' (ಪ್ರಭಾಕರ ಎ ಎಸ್:೨೦೦೮:೪೨೬-೪೨೭).

೧೮೭೧ರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆ ಜಾರಿಗೆ ಬಂದಿತು. ಇದೇ ಕಾಯ್ದೆ ೧೯೧೧ ಮತ್ತು ೧೯೨೦ರಲ್ಲಿ ಹಲವು ತಿದ್ದುಪಡಿಗೆ ಒಳಗಾಗಿ ಜಾರಿಗೊಂಡಿತು. 'ಈ ಕಾಯ್ದೆಯಡಿಯಲ್ಲಿ ಯಾವ ಯಾವ ಸಮುದಾಯಗಳು ಬರಬೇಕು, ಯಾವ ಸಮುದಾಯವನ್ನು ಈ ಕಾಯ್ದೆಯಡಿ ನಿರ್ಧರಿಸಬೇಕೆಂಬುದನ್ನು ತೀರ್ಮಾನ ಮಾಡಲೆಂದೇ ಅಲೆಮಾರಿಗಳನ್ನು, ಕುಶಲಕರ್ಮಿ ಮತ್ತು ಆದಿವಾಸಿ ಸಮುದಾಯಗಳನ್ನು ಅಧ್ಯಯನ ಮಾಡಲು ಬ್ರಿಟಿಷ್ ಅಧಿಕಾರಿಗಳು ತೊಡಗಿದ್ದರು. ಅದರ ಫಲವಾಗಿಯೇ 'ಎಥ್ನೋಗ್ರಾಫಿಕ್ ಸರ್ವೆ ಆಫ್ ಇಂಡಿಯ' ಸಂಸ್ಥೆಯನ್ನು ಪ್ರಾರಂಭಿಸಲಾಯಿತು. ಈ ಸಂಸ್ಥೆಯ ಮೂಲಕ ಸ್ಥಳೀಯ ಜನರ ಮೂಲನಿವಾಸಿಗಳ ವಿವರಗಳನ್ನು ಬ್ರಿಟಿಷ್ ಕಂಪನಿ ಅಧಿಕಾರಿಗಳು ಪಡೆದುಕೊಂಡರು' (ಮಲ್ಲಿಕಾರ್ಜುನ ಬಿ ಮಾನ್ಪಡೆ:೨೦೧೪:೧೫). ದುರಂತವೆಂದರೆ ಅಪರಾಧಿ ಬುಡಕಟ್ಟು ಪಟ್ಟಿಯಲ್ಲಿದ್ದ ಸಮುದಾಯಗಳನ್ನು ಕಂಪನಿ ಸರ್ಕಾರವು ಜನ್ಮತಃ ಅಪರಾಧಿಗಳು ಎಂದು ಪರಿಗಣಿಸಿ ಬಿಟ್ಟಿತು. ಪೋಲಿಸರಿಗೆ ತರಬೇತಿ ಕೊಡುತ್ತಿದ್ದ ಸಂದರ್ಭದಲ್ಲಿ ಅಲ್ಲಿನ ಪಠ್ಯಕ್ರಮದಲ್ಲಿ ಅಪರಾಧಿ ಬುಡಕಟ್ಟುಗಳನ್ನು ಗುರುತಿಸುವುದು ಮತ್ತು ಕಾನೂನಿನ ಮೂಲಕ ಅವರನ್ನು ಹೇಗೆ ನಿಯಂತ್ರಿಸುವುದು ಎಂಬ ಕುರಿತು ಪಾಠಗಳನ್ನು ಸೇರಿಸಿತು.

ಕೇವಲ ಆರ್ಥಿಕ ಮೂಲಗಳನ್ನು ಮಾತ್ರ ಈ ಸಮುದಾಯಗಳು ಕಳೆದುಕೊಳ್ಳಲಿಲ್ಲ, ಬದುಕಲು ನೆಲ ಮತ್ತು ಬದುಕುವ ಅವಕಾಶ ಎರಡನ್ನೂ ಕಳೆದುಕೊಂಡು ಸುರಕ್ಷಿತ ನೆಲೆಗಳನ್ನು ಹುಡುಕಿಕೊಂಡು, ಅಲೆಯಲಾರಂಭಿಸಿದರು. ಅಲೆಮಾರಿ ಸಮುದಾಯಗಳನ್ನು 'ಕ್ರಿಮಿನಲ್ ಜಾತಿಗಳು' ಎಂದು ಪರಿಗಣಿಸಿ ಅವರ ಮಾನವ ಹಕ್ಕುಗಳನ್ನು ಕಸಿದುಕೊಳ್ಳಲಾಯ್ತು. ಈ ವಿಪರೀತ ಕಾನೂನಿನ ಅಮಾನವೀಯ ನಿಯಮಗಳ ಮೂಲಕ ಸದರಿ ಸಮುದಾಯಗಳನ್ನು ನಡೆಸಿಕೊಳ್ಳಲಾಯ್ತು. ಒಂದು ಕಾಲದಲ್ಲಿ ಇದ್ದುದರಲ್ಲಿ ಸ್ವಾವಲಂಬಿಗಳಾಗಿ, ಶ್ರಮಜೀವಿಗಳಾಗಿ ಬದುಕುತ್ತಿದ್ದ ಸಮುದಾಯಗಳು ತಾವು ಕಳೆದುಕೊಂಡಿದ್ದ ಆರ್ಥಿಕ ಮೂಲಗಳನ್ನು ಮರಳಿ ಪಡೆಯಲು ಪ್ರತಿಭಟಿಸಿದ್ದಕ್ಕಾಗಿ ಅಪರಾಧಿಗಳಾಗಿ ಬಿಟ್ಟವು. ಇಂತಹ ಅಮಾನವೀಯವಾದ ಕಾನೂನು ಬೇರೆಲ್ಲಿಯೂ ನಾವು ಕಾಣಲಾಗಲಿಲ್ಲ. ತಮ್ಮ ಹಕ್ಕುಗಳಿಗಾಗಿ ಹೋರಾಡಿದವರನ್ನು ಕಾನೂನಿನ ದೃಷ್ಟಿಯಲ್ಲಿ ಅಪರಾಧಿಗಳನ್ನಾಗಿಸಿ ಅವರ ಆತ್ಮ ಪ್ರತ್ಯಯವನ್ನು ನಾಶಪಡಿಸಲಾಯ್ತು. ಅಪರಾಧಿ ಬುಡಕಟ್ಟು ಕಾಯ್ದೆ ಎಂಬುದು ಮಾನವ ಹಕ್ಕುಗಳ ಮೇಲೆ ನಡೆದ ಭೀಕರವಾದ ಧಾಳಿಯಾಗಿದೆ. ಹೀಗೆ ಅಮಾಯಕ ಜನರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಅವರಿಗೆ ಸೌಲಭ್ಯಗಳು ನೀಡುವ ನೆಪದಲ್ಲಿ ಅವರ ಮೇಲೆ ದೌರ್ಜನ್ಯ ನಡೆಸುತ್ತಿದ್ದರು. ಅಪರಾಧಿ ಬುಡಕಟ್ಟು ಕಾಯ್ದೆಗಳು ಯಾವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು ಎಂಬುದನ್ನು ತಿಳಿದುಕೊಳ್ಳಲು ನಾವು ಅಪರಾಧಿ ಬುಡಕಟ್ಟು ಕಾಯ್ದೆಗಳ ಬಗ್ಗೆ ತಿಳಿದುಕೊಳ್ಳಲೇಬೇಕು.

**ಅಪರಾಧಿ ಬುಡಕಟ್ಟು ಕಾಯ್ದೆಗಳು** (ಮಲ್ಲಿಗಾಂಧಿ: ೨೦೦೮:೪-೧೨).

**A. The criminal Tribes Act 1871**

➢ **Origin of the criminal Tribes Act 1871**

Prior to the enactment of the Act XXVII of 1871, there was no special legislation to deal with the 'criminal' tribes. They were governed by the ordinary law of the land as everybody else was governed. It was reported that the magisterial and police authorities had found it impossible to deal with criminal bands in India. Therefore, the Government of India decided to enact a special legislation and the Act XXVII of 1871 was passed. The Act received the assent of the Governor General of India on 12th October 1871. It is an act for the registration of CTs Eunuchs.

➢ **Main Provisions of the Act**

According to Sections 2, 3, 4, 5, 17 and 19 of the 1871 Act, the local Governments were required to report to the Governor General of India the tribes they wished to declare as criminals, reasons for declaration their fixed places of

residence and the areas intended to be restricted under the Act together with a note regarding the arrangements for their means of livelihood. If the Government of India was satisfied, the tribe could be declared criminal under Section 5 of the Act, The District Magistrate had the authority to order the CT members to appear for registration and restriction. The authority was also vested in the local Government to transfer the tribe from one place to another place under certain conditions or place them in reformatory settlements. Village headmen and watchmen had the duty imposed on them to watch the movements of the members of 'criminal' tribes and also to report the offences committed by them. The local police were given authority to inspect their residence and villages. The Act, in brief provided for registration, restriction, control and surveillance of the CTs. The Act was restricted in its application except Section 1 and 20. These sections applied to the whole of British India, the rest of this Act extended to the territories and province of Bengal, the North West Frontier province, (NWEP) the Punjab and Avadh. In 1876 by Amending the Act of 1871 it was extended to Lower Bengal as well. As a result of the experience gained by the British Government, the 1871 Act was amended in 1897 (Act II of 1897). The power was delegated to the provincial Governments of notifying tribes. Any action could be taken against a part of the class, gang or tribes also. Under Section 17 (A) of the Act, the local Government was vested with the authority to establish and maintain reformatory settlements and to separate, remove children from their parents. The Government established reformatories and institutions for the CTs. The children of the CTs under the age of 18 and above the age of 4 years were kept in such reformatories Superintendents were appointed to guard the children. Penalties were enhanced for the repetition of offences as well as breach of rules.

The main aim of the 1871 Act was to keep an eye on the activities of the CTs. The Act also aimed to control the crime and help the members of CTs to reform and rehabilitate themselves. The provincial governments were authorized to declare any group of people whom they suspect as 'incorrigibles' as CTs. In this Act the phrase CT was first coined. The system of registration had begun. This Act provided for the maintenance of a register in which the names and other particulars of the tribe were written. Some of them were required to report at regular intervals to the police station.

It was discovered that the families of these men were usually involved in petty criminal activities. If the men were thrown into prison, the families either had to continue their depredations or suffer great financial and emotional stress. The authorities found that criminals who were released from prison were worse than before. As a result of the experience gained, the Act was amended in 1897.

**ಎ. ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆ**

**➢ ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆಯ ಮೂಲ**

ಅಪರಾಧಿ ಬುಡಕಟ್ಟುಗಳನ್ನು ನಿಯಂತ್ರಿಸಲು ೧೮೭೧ರ ಕಾಯ್ದೆ XXVII ಗಿಂತ ಮುಂಚೆ ಯಾವುದೇ ವಿಶೇಷ ಕಾಯ್ದೆ/ಕಾನೂನುಗಳು ಇರಲಿಲ್ಲ. ಅಪರಾಧಿ ಬುಡಕಟ್ಟುಗಳಿಗೂ ಸಹ ಇತರೆ ಸಾಮಾನ್ಯ ನಾಗರಿಕರಿಗೆ ಅನ್ವಯಿಸುವ ಕಾನೂನುಗಳೇ ಅನ್ವಯವಾಗುತ್ತಿದ್ದವು. ಭಾರತದಲ್ಲಿನ ಅಪರಾಧಿ ಬುಡಕಟ್ಟುಗಳನ್ನು ನಿಯಂತ್ರಿಸುವುದು, ಅವರ ಜೊತೆ ವ್ಯವಹರಿಸುವುದು ಅಸಾಧ್ಯ ವಾಗುತ್ತಿದೆ ಎಂದು ಪೋಲಿಸ್ ಅಧಿಕಾರಿಗಳು ಮತ್ತು ನ್ಯಾಯಾಧಿಕಾರಿಗಳು ಬ್ರಿಟಿಷ್ ಸರ್ಕಾರಕ್ಕೆ ಮನವಿ ಮಾಡಿದ ನಂತರ, ಬ್ರಿಟಿಷ್ ಸರ್ಕಾರ ಅಪರಾಧಿ ಬಡಕಟ್ಟುಗಳಿಗಾಗಿಯೇ ವಿಶೇಷ ಕಾನೂನುಗಳನ್ನು ಜಾರಿಗೊಳಿಸಲು ಚಿಂತನೆ ಮಾಡಿತು. ಅದರ ಫಲವಾಗಿ ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆ(Act XXVII) ಜಾರಿಗೆ ಬಂದಿತು. ಈ ಕಾಯ್ದೆಯನ್ನು ಭಾರತದ ಗವರ್ನರ್ ಜನರಲ್ ರವರು ೧೨ನೇ ಅಕ್ಟೋಬರ್ ೧೮೭೧ರಲ್ಲಿ ಜಾರಿಗೆ ತಂದರು. ಈ ಕಾಯ್ದೆಯಡಿಯಲ್ಲಿ ಅಪರಾಧಿ ಬುಡಕಟ್ಟುಗಳು ಮತ್ತು ಸೇವಕರು ಬರುತ್ತಾರೆ.

**➢ ೧೮೭೧ರ ಕಾಯ್ದೆಯ ಪ್ರಮುಖ ಅಂಶಗಳು / ಅನುಕೂಲತೆಗಳು**

೧೮೭೧ ಅಪರಾಧಿ ಬುಡಕಟ್ಟು ಕಾಯ್ದೆಯ ಸೆಕ್ಷನ್ ೨, ೩, ೪, ೫, ೧೭ ಮತ್ತು ೧೯ರ ಪ್ರಕಾರ ಸ್ಥಳೀಯ ಸರ್ಕಾರಗಳು ಯಾವುದೇ ಒಂದು ಬುಡಕಟ್ಟು ಅಥವಾ ಸಮುದಾಯ ವನ್ನು ಅಪರಾಧಿ ಬುಡಕಟ್ಟು ಎಂದು ಪರಿಗಣಿಸಬೇಕಾದರೆ, ಸ್ಥಳೀಯ ಸರ್ಕಾರಗಳು ಅಂತಹ ಬುಡಕಟ್ಟು/ಸಮುದಾಯವನ್ನು ಅಪರಾಧಿ ಪಟ್ಟಿಯಲ್ಲಿ ಸೇರಿಸಲು ಕಾರಣಗಳನ್ನು, ಅವರು ನೆಲೆಸಿರುವ ವಸತಿ ಪ್ರದೇಶದ ಬಗ್ಗೆ ವಿವರಣೆಯನ್ನು, ನಂತರ ಅವರಿಗೆ ಕಾಯ್ದೆಯಡಿಯಲ್ಲಿ ನಿರ್ಬಂಧಿಸಿಡುವ ವಸತಿ ಪ್ರದೇಶದ ಬಗ್ಗೆ ಹಾಗೂ ಅಲ್ಲಿ ಅವರಿಗೆ ಜೀವನಾವಶ್ಯಕತೆಗೆ ಒದಗಿಸುವ ಸಾಧನಗಳ ಬಗ್ಗೆ ಭಾರತದ ಗವರ್ನರ್ ಜನರಲ್‌ಗೆ ವರದಿ ನೀಡಬೇಕು. ಅದನ್ನು ಪರಿಶೀಲಿಸಿ ಭಾರತ ಸರ್ಕಾರ ಒಪ್ಪಿಗೆ ನೀಡಿದರೆ, ಆಗ ಅಂತಹ ಬುಡಕಟ್ಟು/ ಸಮುದಾಯ ೧೮೭೧ರ ಕಾಯ್ದೆಯ ಸೆಕ್ಷನ್ ೫ರ ಪ್ರಕಾರ ಅಪರಾಧಿ ಪಟ್ಟಿಯಲ್ಲಿ ಸೇರ್ಪಡೆಗೊಂಡು, ಅಂದಿನಿಂದ ಅಪರಾಧಿ ಬುಡಕಟ್ಟು ಕಾಯ್ದೆಯಡಿಯಲ್ಲಿ ನಿರ್ಬಂಧನಕ್ಕೊಳಪಡುತ್ತದೆ. ಅಪರಾಧಿ

ಬುಡಕಟ್ಟು ಸದಸ್ಯರನ್ನು ನೋಂದಣಿ ಮಾಡುವ ಹಾಗೂ ನಿರ್ಬಂಧನಕ್ಕೊಳಪಡಿಸುವ ಅಧಿಕಾರ ಜಿಲ್ಲಾ ನ್ಯಾಯಾಧೀಶರಿಗಿದೆ. ಅಪರಾಧಿ ಬುಡಕಟ್ಟುಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ನಿರ್ಬಂಧನಕ್ಕೊಳಪಡಿಸುವ, ಸ್ಥಳಾಂತರಿಸುವ ಅಥವಾ ಸುಧಾರಣಾ ಸೆಟ್ಲ್‌ಮೆಂಟ್‌ಗಳಿಗೆ ಸ್ಥಳಾಂತರಿಸುವ ಅಧಿಕಾರವನ್ನು ಸ್ಥಳೀಯ ಸರ್ಕಾರಗಳಿಗೂ ಸಹ ನೀಡಲಾಗಿದೆ. ಅಪರಾಧಿ ಬುಡಕಟ್ಟುಗಳ ಸದಸ್ಯರ ಚಲನವಲನಗಳ ಮೇಲೆ ನಿಗಾ ಇಡುವ ಹಾಗೂ ಅವರು ಮಾಡುವ ಅಪರಾಧಗಳ ಬಗ್ಗೆ ವರದಿ ನೀಡುವ ಕೆಲಸವನ್ನು/ಕರ್ತವ್ಯವನ್ನು ಹಳ್ಳಿಯ ಮುಖ್ಯಸ್ಥನಿಗೆ ಹಾಗೂ ಕಾವಲುಗಾರನಿಗೆ ವಹಿಸಲಾಗಿರುತ್ತದೆ. ಸ್ಥಳೀಯ ಪೋಲಿಸರಿಗೆ ಅವರ ಮನೆಗಳನ್ನು ಹಾಗೂ ಹಳ್ಳಿಗಳನ್ನು ವಿಚಾರಣೆಗೊಳಪಡಿಸುವ ಅಧಿಕಾರವನ್ನು ನೀಡಲಾಗಿದೆ. ಈ ಕಾಯ್ದೆಯಡಿಯಲ್ಲಿ ಅಪರಾಧಿ ಬುಡಕಟ್ಟುಗಳನ್ನು ನೋಂದಾಯಿಸುವ, ನಿರ್ಬಂಧಿಸುವ, ನಿಯಂತ್ರಿಸುವ ಹಾಗೂ ಮೇಲ್ವಿಚಾರಣೆ ಮಾಡುವ ಬಗ್ಗೆ ತಿಳಿಸಲಾಗಿದೆ. ಈ ಕಾಯ್ದೆಯು ಸೆಕ್ಷನ್ ೧ ಮತ್ತು ೨೦ನ್ನು ಹೊರತು ಪಡಿಸಿ ಕೆಲವು ಮಿತಿಗಳನ್ನು ಹೊಂದಿದೆ. ಈ ಸೆಕ್ಷನ್‌ಗಳು ಇಡೀ ಬ್ರಿಟಿಷ್ ಭಾರತಕ್ಕೆ ಅನ್ವಯಿಸುತ್ತವೆ. ನಂತರದಲ್ಲಿ ಇತರೆ ರಾಜ್ಯಗಳು ಹಾಗೂ ಬಂಗಾಳ ಸಂಸ್ಥಾನ, ವಾಯುವ್ಯ ಗಡಿ ಸಂಸ್ಥಾನ, ಪಂಜಾಬ್ ಮತ್ತು ಔದ್‌ಗಳಿಗೆ ವಿಸ್ತರಿಸಲಾಯಿತು. ೧೮೭೧ರ ಕಾಯ್ದೆಯನ್ನು ೧೮೭೬ರಲ್ಲಿ ತಿದ್ದುಪಡಿ ಮಾಡುವ ಮೂಲಕ ಲೋಯರ್ ಬೆಂಗಾಲ್ ಅನ್ನು ಸಹ ಈ ಕಾಯ್ದೆಯ ವ್ಯಾಪ್ತಿಗೆ ಒಳಪಡಿಸಲಾಯಿತು. ಈ ಎಲ್ಲಾ ಅಂಶಗಳಿಂದ ಅನುಭವ ಪಡೆದ ಬ್ರಿಟಿಷ್ ಸರ್ಕಾರ ೧೮೭೧ರ ಕಾಯ್ದೆಯನ್ನು ೧೮೯೭ರಲ್ಲಿ [Act II of 1897] ತಿದ್ದುಪಡಿ ಮಾಡಿತು. ಬುಡಕಟ್ಟುಗಳನ್ನು ಗುರುತಿಸುವ ಅಧಿಕಾರವನ್ನು ಸ್ಥಳೀಯ ಸರ್ಕಾರಗಳಿಗೆ ನೀಡಲಾಗಿತ್ತು. ಯಾವುದೇ ವರ್ಗ/ಗುಂಪು/ಬುಡಕಟ್ಟಿನ ವಿರುದ್ಧ ಯಾವುದೇ ರೀತಿಯಲ್ಲಿ ವ್ಯವಹರಿಸುವ/ವಿಚಾರಿಸುವ ಅಧಿಕಾರ ಅವರಿಗಿತ್ತು. ಈ ಕಾಯ್ದೆಯ ಸೆಕ್ಷನ್ ೧೭(A) ರಡಿಯಲ್ಲಿ ಸುಧಾರಣಾ ಸೆಟ್ಲ್‌ಮೆಂಟ್‌ಗಳನ್ನು ನಿರ್ಮಿಸುವ, ನಿರ್ವಹಿಸುವ ಮತ್ತು ಅಪರಾಧಿ ಬುಡಕಟ್ಟು ಕುಟುಂಬಗಳ ಮಕ್ಕಳನ್ನು ಅವರ ತಂದೆ–ತಾಯಿಯಿಂದ ಬೇರ್ಪಡಿಸುವ, ದೂರವಿರಿಸುವ ಅಧಿಕಾರವನ್ನು ಸ್ಥಳೀಯ ಸರ್ಕಾರಗಳು ಪಡೆದುಕೊಂಡವು. ಅಪರಾಧಿ ಬುಡಕಟ್ಟುಗಳಿಗಾಗಿ ಸರ್ಕಾರವು ಅನೇಕ ಸುಧಾರಣಾ ಗೃಹಗಳನ್ನು ಮತ್ತು ಸಂಸ್ಥೆಗಳನ್ನು ಸ್ಥಾಪಿಸಿತು. ಅಪರಾಧಿ ಬುಡಕಟ್ಟಿನ ೧೮ ವರ್ಷ ವಯಸ್ಸಿನ ಒಳಗೆ ಹಾಗು ೪ ವರ್ಷ ವಯಸ್ಸಿನ ಮೇಲ್ಪಟ್ಟ ಮಕ್ಕಳನ್ನು ಅಂತಹ ಸುಧಾರಣಾ ಗೃಹಗಳಲ್ಲಿ ಇರಿಸಲಾಗುತ್ತಿತ್ತು. ಆ ಮಕ್ಕಳ ಮೇಲ್ವಿಚಾರಣೆಗಾಗಿ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ಅಪರಾಧಗಳನ್ನು ಪುನರಾವರ್ತನೆ ಮಾಡುವ ಆಧಾರದ ಮೇಲೆ ಅಪರಾಧಿಗಳಿಗೆ ದಂಡವನ್ನು ಹೆಚ್ಚಿಸಲಾಗುತ್ತಿತ್ತು.

೧೮೭೧ರ ಕಾಯ್ದೆಯ ಪ್ರಮುಖ ಗುರಿಯೆಂದರೆ, ಅಪರಾಧಿ ಬುಡಕಟ್ಟುಗಳ ಚಟುವಟಿಕೆಗಳ/ ಚಲನವಲನಗಳ ಮೇಲೆ ನಿಗಾ ಇಡುವುದು, ಜೊತೆಗೆ ಅಪರಾಧಗಳನ್ನು ನಿಯಂತ್ರಿಸುವುದು

ಮತ್ತು ಅಪರಾಧಿ ಬುಡಕಟ್ಟು ಸದಸ್ಯರಿಗೆ ತಮ್ಮನ್ನು ತಾವು ಸುಧಾರಣೆ ಮಾಡಿಕೊಳ್ಳುವುದನ್ನು ತಿಳಿಸಿಕೊಡುವುದಾಗಿತ್ತು. ಯಾವುದೇ ಗುಂಪುಗಳ ವ್ಯಕ್ತಿಗಳನ್ನು ಸುಧಾರಿಸಲಾಗದ ಅಪರಾಧಿಗಳು ಎಂದು ನಿರ್ಧರಿಸುವ ಅಧಿಕಾರ ಸ್ಥಳೀಯ ಸರ್ಕಾರಗಳಿಗಿತ್ತು. ಈ ಕಾಯ್ದೆಯಲ್ಲಿ ಅಪರಾಧಿ ಬುಡಕಟ್ಟು ಎಂಬುದನ್ನು ಹೊಸದಾಗಿ ಪ್ರಯೋಗಿಸಲಾಯಿತು. ನೋಂದಣಿ ಮಾಡುವ ವ್ಯವಸ್ಥೆಯು ಶುರುವಾಯಿತು. ಈ ಕಾಯ್ದೆಯಂತೆ ಬುಡಕಟ್ಟುಗಳ ಹೆಸರುಗಳು ಹಾಗೂ ವಿವರಗಳನ್ನು ಬರೆದಿರುವ ದಾಖಲಾತಿ ಪುಸ್ತಕವನ್ನು ಇಡಬೇಕಿತ್ತು/ನಿರ್ವಹಣೆ ಮಾಡಬೇಕಿತ್ತು. ಕೆಲವು ಬುಡಕಟ್ಟುಗಳು ಪ್ರತಿನಿತ್ಯ ಪೋಲಿಸ್ ಸ್ಟೇಷನ್‌ಗೆ ಹೋಗಿ ವರದಿ ಮಾಡಬೇಕಿತ್ತು.

೧೮೭೧ರ ಕಾಯ್ದೆಯ ಮೂಲಕ ತಿಳಿದುಬಂದ ಸಂಗತಿಯೆಂದರೆ ಅಪರಾಧಿ ಬುಡಕಟ್ಟು ಕುಟುಂಬಗಳ ಪುರುಷರು ಸಣ್ಣ-ಪುಟ್ಟ ಅಪರಾಧಗಳಲ್ಲಿ ತೊಡಗುತ್ತಿದ್ದರು. ಒಂದು ವೇಳೆ ಅವರು ಜೈಲು ಹೋದರೆ, ಅವರ ಕುಟುಂಬಗಳು ಅದೇ ಅಪರಾಧಗಳನ್ನು ಮುಂದುವರೆಸುತ್ತಿದ್ದರು ಅಥವಾ ಮಾನಸಿಕ ಮತ್ತು ಆರ್ಥಿಕ ಒತ್ತಡ ಹಾಗೂ ತೊಂದರೆಯನ್ನು ಅನುಭವಿಸುತ್ತಿದ್ದರು. ಅಧಿಕಾರಿಗಳು ಗಮನಿಸಿದಂತೆ ಜೈಲಿನಿಂದ ಬಿಡುಗಡೆ ಹೊಂದಿದಂತಹ ಅಪರಾಧಿಗಳು ಹಿಂದಿಗಿಂತ ಹೆಚ್ಚಾಗಿ ದುರ್ನಡತೆಯಲ್ಲಿ ತೊಡಗುತ್ತಿದ್ದರು. ಈ ಎಲ್ಲಾ ಅನುಭವಗಳ ಫಲಿತವಾಗಿ ೧೮೭೧ರ ಕಾಯ್ದೆಯು ೧೮೯೭ರಲ್ಲಿ ತಿದ್ದುಪಡಿಗೊಂಡಿತು.

೧೮೭೧ರ ಕಾಯ್ದೆಯನ್ನು ಅವಲೋಕಿಸಿದಾಗ ತಿಳಿದುಬರುವುದೇನೆಂದರೆ, ಬ್ರಿಟಿಷ್ ಸರ್ಕಾರ ತನ್ನ ವಿರುದ್ಧ ಸಿಡಿದೆದ್ದವರನ್ನು ನಿಯಂತ್ರಿಸಲು, ಈ ೧೮೭೧ ಕಾಯ್ದೆನ್ನು ಬಳಸಿಕೊಂಡಿತು. ಆದರೆ ಇದರಡಿಯಲ್ಲಿ ಸಿಕ್ಕಿ ತಮ್ಮ ಸ್ವತಂತ್ರ ಬದುಕನ್ನು ಕಳೆದುಕೊಂಡಿದ್ದು ಮಾತ್ರ ಅಲೆಮಾರಿಗಳು, ಬುಡಕಟ್ಟುಗಳು, ಸಣ್ಣ ಸಣ್ಣ ವರ್ತಕ ಸಮುದಾಯಗಳು. ಇಂತಹ ಸಮುದಾಯಗಳನ್ನು ಯಾವುದೇ ವಿಚಾರಣೆ ಇಲ್ಲದೆ ಬಂಧಿಸಿ, ಅಪರಾಧಿ ಬುಡಕಟ್ಟು ಎಂದು ಘೋಷಿಸುವ ಅಧಿಕಾರ ಸ್ಥಳೀಯ ಸರ್ಕಾರಗಳಿಗೆ ನೀಡಲಾಗಿತ್ತು. ಹಲವು ವೇಳೆ ವಿನಾ ಕಾರಣ ಈ ಸಮುದಾಯಗಳನ್ನು ಬಂಧಿಸಿ ವಸಹಾತುಗಳಲ್ಲಿ ಇಟ್ಟು ನಿಯಂತ್ರಿಸಲಾಗುತ್ತಿತ್ತು. ಇದನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇರಲಿಲ್ಲ. ನಮ್ಮ ಭಾರತೀಯ ಮೇಲ್ಜಾತಿಗಳು, ಅಧಿಕಾರಿ ವರ್ಗಗಳು, ಶ್ರೀಮಂತ ಸಮುದಾಯಗಳು ಇದನ್ನು ಬೆಂಬಲಿಸುತ್ತಿದ್ದರು.

**B. The Criminal Tribes Act of 1897**

In 1897, the colonial government passed another CT Act. It permitted the local governments of India to establish and maintain settlements for children of CTs. In these settlements they were taught to work. Instructions were given to lead an honest life. Their children were sent to schools. It was hoped that such steps would bring

about a complete reformation. If any family failed to furnish the required information they were liable to punishment. They were forced to remain in the settlement until the authorities were fairly certain that they could be trusted to remain hones and law-abiding citizens. Enhanced penalties for repetition of offences and breach of rules were provided.

The CTA II of 1897 was found deficient in many particulars. It got adverse criticism from the Police Commission of 1902-03. Eventually in 1911 a fresh Act (Act III of 1911) was passed. Some new provisions were brought into this Act. The Act made it obligatory on the members of the CTs to register themselves, to allow fingerprints to be taken, to report their action and change of residence. The Government was further vested with the power to restrict the movement of the tribe to any particular area or place of residence; and the power relating to reformatories were further elaborated. As against these stringent provisions, two liberal modifications were made authorizing the District Magistrates to grant exemption to reformed members and raising the age limit of children of separation from their parents from four to six years.

### ಬಿ) ೧೮೯೭ರ ಅಪರಾಧಿ ಬುಡಕಟ್ಟು ಕಾಯ್ದೆ

೧೮೯೭ರಲ್ಲಿ ವಸಾಹತು ಸರ್ಕಾರವು ಮತ್ತೊಂದು ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಜಾರಿಗೊಳಿಸಿತು. ಈ ಕಾಯ್ದೆಯು ಅಪರಾಧಿ ಬುಡಕಟ್ಟು ಮಕ್ಕಳಿಗಾಗಿ ಸೆಟ್ಲ್‌ಮೆಂಟ್‌ಗಳನ್ನು ನಿರ್ಮಿಸುವ ಮತ್ತು ನಿರ್ವಹಿಸುವ ಅಧಿಕಾರವನ್ನು ಸ್ಥಳೀಯ ಭಾರತ ಸರ್ಕಾರಗಳಿಗೆ ನೀಡಿತು. ಈ ಸೆಟ್ಲ್‌ಮೆಂಟ್‌ಗಳಲ್ಲಿ ಮಕ್ಕಳಿಗೆ ಕೆಲಸವನ್ನು ಕಲಿಸುತ್ತಿದ್ದರು. ಪ್ರಾಮಾಣಿಕವಾಗಿ ಜೀವನ ನಡೆಸುವುದರ ಬಗ್ಗೆ ಮಕ್ಕಳಿಗೆ ಶಿಕ್ಷಣ ನೀಡುತ್ತಿದ್ದರು. ಮಕ್ಕಳನ್ನು ಶಾಲೆಗೆ ಸಹ ಕಳುಹಿಸುತ್ತಿದ್ದರು. ಇದು ಸುಧಾರಣೆಯ ಒಂದು ಹೆಜ್ಜೆಯಾಗಿತ್ತು. ಯಾವುದೇ ಕುಟುಂಬವೂ ಮಕ್ಕಳಿಗೆ ಶಾಲೆಗೆ ಕಳುಹಿಸದೇ ಇದ್ದರೆ, ಅವರು ಶಿಕ್ಷೆಗೆ ಗುರಿಯಾಗುತ್ತಿದ್ದರು. ಅಧಿಕಾರಿಗಳಿಗೆ ಬುಡಕಟ್ಟುಗಳು ಪ್ರಾಮಾಣಿಕ ನಾಗರಿಕರಾಗಿ ಹಾಗೂ ಕಾನೂನುರಿತ್ಯ ಬದುಕನ್ನು ಸಾಗಿಸುತ್ತಾರೆ ಎಂಬ ಭರವಸೆ ಮೂಡುವವರೆಗೂ ಅವರನ್ನು ಬಲವಂತವಾಗಿ ಸೆಟ್ಲ್‌ಮೆಂಟ್‌ಗಳಲ್ಲಿಯೇ ಇರಿಸಲಾಗುತ್ತಿತ್ತು. ಪದೇ ಪದೇ ಅಪರಾಧಗಳನ್ನು ಪುನರಾವರ್ತಿಸುತ್ತಿದ್ದರೆ, ಕಾನೂನುಗಳನ್ನು ಉಲ್ಲಂಘಿಸುತ್ತಿದ್ದರೆ ಅವರಿಗೆ ದಂಡವನ್ನು ಹೆಚ್ಚಿಸುತ್ತಿದ್ದರು.

೧೮೯೭ರ ಅಪರಾಧಿ ಬುಡಕಟ್ಟು ಕಾಯ್ದೆ II ರ ಅನೇಕ ಅಂಶಗಳಲ್ಲಿ ನ್ಯೂನತೆಗಳು ಕಂಡುಬಂದವು. ಈ ಕಾಯ್ದೆಯು ೧೯೦೨-೦೩ರ ಪೋಲಿಸ್ ಕಮೀಷನ್‌ನಿಂದ ವಿಮರ್ಶೆ

ಗೊಳಗಾಯಿತು. ಇದರ ಪರಿಣಾಮವಾಗಿ ೧೯೧೧ರಲ್ಲಿ ಒಂದು ಹೊಸ ಕಾಯ್ದೆ(Act III of 1911) ಜಾರಿಯಾಯಿತು. ಕೆಲವು ಹೊಸ ಷರತ್ತುಗಳನ್ನು ಈ ಕಾಯ್ದೆಯಡಿಯಲ್ಲಿ ತರಲಾಯಿತು. ಈ ಕಾಯ್ದೆಯು ಅಪರಾಧಿ ಬುಡಕಟ್ಟು ಸದಸ್ಯರ ಮೇಲೆ, ಅವರು ಈ ಕಾಯ್ದೆಯಡಿಯಲ್ಲಿ ನೋಂದಾಯಿಸಿಕೊಳ್ಳುವ, ಅವರ ಬೆರಳಚ್ಚುಗಳನ್ನು ನೀಡುವ, ಒಂದು ವೇಳೆ ಅವರು ವಸತಿಯನ್ನು ಬದಲಾಯಿಸಿದರೆ ಅದರ ಬಗ್ಗೆ ಅಧಿಕಾರಿಗಳಿಗೆ ವರದಿ ಕೊಡುವ ನಿರ್ಬಂಧನೆಗಳನ್ನು ವಿಧಿಸ ಲಾಯಿತು. ಸರ್ಕಾರಗಳಿಗೆ ಇಂತಹ ಸಮುದಾಯಗಳು ತಮ್ಮ ನೆಲೆ ಬದಲಿಸುವುದರ ಮೇಲೆ ನಿರ್ಬಂಧನೆ ಹೇರುವ ಹಾಗೂ ಸುಧಾರಣೆಗೆ ಸಂಬಂಧಿಸಿದಂತಹ ಅಧಿಕಾರವನ್ನು ವಿಸ್ತರಿಸ ಲಾಯಿತು. ಇಂತಹ ಕಠಿಣ ಷರತ್ತುಗಳ ವಿರುದ್ಧವಾಗಿ ಜಿಲ್ಲಾ ನ್ಯಾಯಾಧೀಶರು ಎರಡು ಉದಾರ ರೂಪಾಂತರಗಳನ್ನು ಜಾರಿಗೆ ತಂದರು. ಅವು–

೧. ಸುಧಾರಣೆಗೊಂಡ ಅಪರಾಧಿ ಬುಡಕಟ್ಟು ಸದಸ್ಯರನ್ನು ಬಿಡುಗಡೆ ಮಾಡುವುದು.

೨. ತಂದೆ–ತಾಯಿಯಿಂದ ಬೇರ್ಪಡಿಸುವ ಮಕ್ಕಳ ವಯಸ್ಸನ್ನು ೪ರ ಬದಲಾಗಿ ೬ ವರ್ಷಕ್ಕೆ ಏರಿಸಿದರು.

## C. The Criminal Tribes Act of 1911

### ➢ Origin of Criminal Tribes Act, 1911

The Criminal Tribes Act, 1911 had its origin in the report of the Indian Police Commission, 1902-03. The Police Commission laid down the principle that it should be the aim of every police system to obtain knowledge of CTs and secure overall supervision on certain gangs addicted to crime. Starting from this principle, the Police Commission declared that the police should have more powers of control on the criminal tribes. Keeping this specific object, the Police Commission recommended certain amendments to the CTA of 1897. The Government of India, in due course of time found many defects in the CT Act of 1897 and repealed the Act. In the place of 1897 Act the CT of 1911 was substituted. The CT Act 1911 was more comprehensive than the 1897 Act.

### ➢ Main features of the 1911 Act

The main features of the Act were: 1. Notification, 2. Registration, 3. Restriction of movements, 4. Settlements schools, and penalties. If the local governments had reason to believe that any tribe, gang or class of persons or a part of a tribe, gang or class is addicted to the systematic Commission of non-boilable offences, it may,

by notification in the local official gazette, declare that such persons or group was a CT (section 3). There are two methods of dealing with these people- registration and settlements. Registration attempted to keep tract of them under police surveillance in the communities where they live. Settlement means locating in a special place so that they can be more clearly controlled than by registration. Certain passes were issued to the criminal tribes to leave the place in which they are settled. Schedules were prepared. Personal identification marks, thumb and palm impressions of the tribe were taken into consideration.

Under Section 22 of the Act if any member in a family of the CTs violates the rules they were punished and imprisoned in the jails. On the first conviction one year jail, on the second conviction two years jail sentence and any subsequent conviction to three years rigorous jail imprisonment were made.

➢ **Difference between the CT Act 1871 and 1911**

The Criminal Tribes Act of 1871 was only applied to certain provinces in Northern India, namely, Benal, United Provinces, North west Frontier Province (NWFP) and Punjab. It was not extended to Madras. However, the Criminal Tribes Act 1911 applied throughout British India. The application of CT Act 1871 in certain provinces was not possible to the British Government due to some practical difficulties. The criminal Tribes Act 1911 was designed to apply the provisional of the criminal Tribes Act in all provinces. One of the specific objectives of the 1911 CT Act was to enlarge the power of control by enabling the local governments to proclaim CTs on their own authority and provide for the registration of the members without reference to the questions of settlements or the provision of the means of livelihood.

➢ **Provisions of the 1911 Act**

The CT Act 1911 enabled the local Government: (1) to declare any tribe, gang or class to be a criminal tribe, if it is satisfied that tribe, gang or class is addicted to the systematic commission of non-boilable offences, (2) to order the registration of the members of any criminal tribe and the taking of their finger impressions and (3) to direct that, every registered member shall report himself at fixed intervals or notify his place of residence and changes thereof. The local Government can also declare, with the sanction of the Government of India, that a CT shall be restricted in its

movements to any specified area or shall be settled in any specified place of residence (Section 12). But before such action was taken, the Governments of India must be satisfied that it is expedient to restrict the movement of such tribe or settle them in a place of residence and that the means by which it is proposed that such tribes shall earn their living were adequate. Another important feature of the Act was that the Local Government is authorized to establish industrial, agricultural or reformatory schools and to separate the children from their parents (section 17). This provision was the most important and useful portion of the Act. It enabled the local Governments to secure all the children, to educate them and to bring them up in a more wholesome atmosphere than that in which they would have been left if the tribe had not been settled. The government hoped by these means the children would grow up as honest citizens. Under Section 20 of the Act, the local Government may make rules to carry out the purposes and objects of the Act. Strict penalties and procedures were laid on the members of a CT such as issuing notices, obtaining unnecessary information from the families and taking fingerprints etc.

### ಸಿ) ೧೯೧೧ರ ಅಪರಾಧಿ ಬುಡಕಟ್ಟು ಕಾಯ್ದೆ

- ೧೯೧೧ರ ಅಪರಾಧಿ ಬುಡಕಟ್ಟು ಕಾಯ್ದೆಯ ಮೂಲ

೧೯೧೧ರ ಅಪರಾಧಿ ಬುಡಕಟ್ಟು ಕಾಯ್ದೆಯ ಮೂಲ ೧೯೦೨-೦೩ರ ಭಾರತದ ಪೋಲಿಸ್ ಕಮೀಷನ್ ವರದಿಯಾಗಿದೆ. ಪೋಲಿಸ್ ಕಮೀಷನ್ ಪ್ರಕಾರ ಪ್ರತಿ ಪೋಲಿಸ್ ವ್ಯವಸ್ಥೆಯು ಅಪರಾಧಿ ಬುಡಕಟ್ಟುಗಳ ಬಗ್ಗೆ ಜ್ಞಾನವನ್ನು, ತಿಳುವಳಿಕೆಯನ್ನು ಪಡೆದುಕೊಂಡಿರಬೇಕು ಮತ್ತು ಅಂತಹ ಗುಂಪುಗಳು ತೊಡಗುವ ಅಪರಾಧಗಳನ್ನು ನಿಯಂತ್ರಿಸುವ ತಾಕತ್ತನ್ನು ಹೊಂದಿರಬೇಕು. ಈ ತತ್ವದೊಂದಿಗೆ ಪೋಲಿಸ್ ಕಮೀಷನ್, ಪೋಲಿಸರಿಗೆ ಅಪರಾಧಿ ಬುಡಕಟ್ಟುಗಳನ್ನು ನಿಯಂತ್ರಿಸಲು ಇನ್ನೂ ಹೆಚ್ಚಿನ ಅಧಿಕಾರವನ್ನು ನೀಡಿತು. ಈ ಪ್ರಮುಖ ಉದ್ದೇಶವನ್ನಿಟ್ಟುಕೊಂಡು ಪೋಲಿಸ್ ಕಮೀಷನ್ ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆಗೆ ಕೆಲವು ತಿದ್ದುಪಡಿಗಳನ್ನು ಸೂಚಿಸಿತು. ಭಾರತ ಸರ್ಕಾರ ೧೮೭೧ರ ಕಾಯ್ದೆಯಲ್ಲಿ ಅನೇಕ ತೊಡಕುಗಳನ್ನು ಕಂಡ ಮೇಲೆ, ಆ ಕಾಯ್ದೆಯನ್ನು ರದ್ದು ಮಾಡಿತು. ೧೮೭೧ರ ಕಾಯ್ದೆಯ ಜಾಗದಲ್ಲಿ ೧೯೧೧ರ ಕಾಯ್ದೆಯು ಜಾರಿಗೆ ಬಂತು. ೧೮೭೧ರ ಕಾಯ್ದೆಗಿಂತ ೧೯೧೧ರ ಅಪರಾಧಿ ಬುಡಕಟ್ಟು ಕಾಯ್ದೆ ವ್ಯಾಪಕವಾದ ವ್ಯಾಪ್ತಿಯನ್ನು ಹೊಂದಿತ್ತು.

➢ **ಈ ಕಾಯ್ದೆಯ ಪ್ರಮುಖ ಅಂಶಗಳು**

೧. ಅಧಿಸೂಚನೆ

೨. ನೋಂದಣಿ

೩. ಬುಡಕಟ್ಟುಗಳ ಚಲನೆಯ ಮೇಲೆ ನಿರ್ಬಂಧ

೪. ವಸಾಹತುಗಳು, ಶಾಲೆಗಳು ಮತ್ತು ದಂಡ

ಸ್ಥಳೀಯ ಸರ್ಕಾರಗಳು ಯಾವುದೇ ಬುಡಕಟ್ಟು/ಗುಂಪು/ವರ್ಗದ ಜನರು ಯಾವುದೇ ರೀತಿಯ ಜಾಮೀನು ರಹಿತ ಅಪರಾಧಗಳಲ್ಲಿ ತೊಡಗಿರುವುದು ಕಂಡುಬಂದರೆ, ಸ್ಥಳೀಯ ಕಛೇರಿಯ ಗೆಝೆಟ್‌ನಲ್ಲಿ ಆದೇಶ ಹೊರಡಿಸುವ ಮೂಲಕ ಅವರನ್ನು ಅಪರಾಧಿ ಬುಡಕಟ್ಟು (ಸೆಕ್ಷನ್–೩) ಎಂದು ಘೋಷಿಸಬಹುದಿತ್ತು. ಈ ಜನಗಳ ಕುರಿತು ನೊಂದಣಿ ಮಾಡಿಕೊಳ್ಳುವುದು ಮತ್ತು ವಸಾಹತುಗಳಲ್ಲಿರಿಸುವ ಎರಡೂ ಕ್ರಮಗಳನ್ನು ಅನುಸರಿಸಬಹುದು.

ನೋಂದಣಿಯ ಮೂಲಕ ಇಂತಹ ಸಮುದಾಯಗಳನ್ನು ಅವರು ವಾಸಿಸುವ ಪ್ರದೇಶದಲ್ಲಿಯೇ ಪೋಲಿಸರ ಮೇಲ್ವಿಚಾರಣೆಯಲ್ಲಿಡಬಹುದು. ಸೆಟ್ಲ್‌ಮೆಂಟ್/ವಸಾಹತು ಎಂದರೆ ಇದೊಂದು ವಿಶೇಷ ವಸತಿ ಪ್ರದೇಶವಾಗಿದ್ದು, ಇಲ್ಲಿ ಅಪರಾಧಿ ಬುಡಕಟ್ಟುಗಳನ್ನು ಇರಿಸಿ ಅವರನ್ನು ಅಪರಾಧಿ ಬುಡಕಟ್ಟು ಕಾಯ್ದೆಯಡಿಯಲ್ಲಿ ನೋಂದಣಿ ಮಾಡುವ ಮೂಲಕ ಅವರನ್ನು ನಿಯಂತ್ರಿಸಬಹುದಿತ್ತು. ಅವರು ವಾಸಿಸುತ್ತಿದ್ದ ಪ್ರದೇಶಗಳನ್ನು ಬಿಟ್ಟುಹೋಗಲು ಅವರು ಅನುಮತಿ ಪತ್ರಗಳನ್ನು ಪಡೆಯಬೇಕಿತ್ತು. ವೈಯಕ್ತಿಕ ಗುರುತಿಗೋಸ್ಕರ ಬುಡಕಟ್ಟುಗಳಿಂದ ಬೆರಳಚ್ಚುಗಳನ್ನು ಮತ್ತು ಇತರೆ ಗುರುತುಗಳನ್ನು ಪಡೆಯುತ್ತಿದ್ದರು.

ಕಾಯ್ದೆಯ ಸೆಕ್ಷನ್ ೨೨ರ ಪ್ರಕಾರ ಒಂದು ವೇಳೆ ಅಪರಾಧಿ ಬುಡಕಟ್ಟು ಕುಟುಂಬದ ಯಾವುದೇ ಸದಸ್ಯರು ಕಾನೂನುಗಳನ್ನು ಉಲ್ಲಂಘಿಸಿದರೆ ಅವರನ್ನು ಶಿಕ್ಷಿಸುವುದು ಮತ್ತು ಜೈಲಿಗೆ ಹಾಕಬಹುದಿತ್ತು. ಮೊದಲನೆಯ ಬಾರಿ ಅಪರಾಧವೆಸಗಿದರೆ ಒಂದು ವರ್ಷ ಜೈಲುವಾಸ, ಎರಡನೇ ಬಾರಿಗೆ ಎರಡು ವರ್ಷ ಜೈಲುವಾಸ ಮತ್ತು ನಿರಂತರವಾಗಿ ಅಪರಾಧವೆಸಗುತ್ತಿದ್ದರೆ ಮೂರು ವರ್ಷ ಕಠಿಣವಾದ ಜೈಲು ಶಿಕ್ಷೆ ವಿಧಿಸಬಹುದಿತ್ತು.

➢ **೧೮೭೧ರ ಮತ್ತು ೧೯೧೧ರ ಕಾಯ್ದೆಗಳ ನಡುವಿನ ವ್ಯತ್ಯಾಸಗಳು**

೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆಯು ಕೆಲವೇ ಪ್ರದೇಶಗಳಿಗೆ ಅಂದರೆ ಉತ್ತರ ಭಾರತದ ಬೆನಾಲ್ ಒಕ್ಕೂಟ ಸಂಸ್ಥಾನಗಳು, ವಾಯುವ್ಯ ಪ್ರಾಂತ್ಯ ಮತ್ತು ಪಂಜಾಬ್‌ಗಳಿಗೆ ಮಾತ್ರ ಸೀಮಿತವಾಗಿತ್ತು. ಈ ಕಾಯ್ದೆ ಮದ್ರಾಸ್‌ಗೆ ಅನ್ವಯಿಸುತ್ತಿರಲಿಲ್ಲ. ೧೯೧೧ರ ಅಪರಾಧಿ ಬುಡಕಟ್ಟು ಕಾಯ್ದೆಯು ಇಡೀ ಬ್ರಿಟಿಷ್ ಭಾರತಕ್ಕೆ ಅನ್ವಯವಾಗುತ್ತಿತ್ತು. ೧೮೭೧ರ ಕಾಯ್ದೆಯು

ಬ್ರಿಟಿಷ್ ಆಳ್ವಿಕೆಯ ಸರ್ಕಾರದಲ್ಲಿ ಪೂರ್ಣವಾಗಿ ಅನ್ವಯಿಸಲು ಕೆಲವು ತೊಡಕುಗಳಿದ್ದವು. ಆದರೆ ೧೯೧೧ರ ಕಾಯ್ದೆಯು ಎಲ್ಲಾ ಪ್ರದೇಶಗಳಿಗೂ ಅದು ಅನ್ವಯವಾಗುವಂತೆ ತಿದ್ದುಪಡಿ ಮಾಡಲಾಯಿತು. ೧೯೧೧ರ ಕಾಯ್ದೆಯ ವಿಶೇಷತೆಯೆಂದರೆ ಅದರ ತಿದ್ದುಪಡಿಯಲ್ಲಿ ಸ್ಥಳೀಯ ಆಡಳಿತಕ್ಕೆ ಬಲ ನೀಡುವ ಮತ್ತು ಅಪರಾಧಿ ಬುಡಕಟ್ಟುಗಳನ್ನು ನಿಯಂತ್ರಿಸುವ ಶಕ್ತಿಯನ್ನು ದೊರಕಿಸಿಕೊಟ್ಟಿತು ಮತ್ತು ಅಪರಾಧಿ ಬುಡಕಟ್ಟು ಸದಸ್ಯರನ್ನು ಪ್ರಶ್ನೆ ಮಾಡದೇ ನೋಂದಣಿ ಮಾಡಿಕೊಂಡು, ಅವರನ್ನು ಸೆಟ್ಲ್‌ಮೆಂಟ್‌ಗಳಲ್ಲಿ ಇರಿಸುವ ಅಧಿಕಾರವನ್ನು ನೀಡಿತು.

➤ **೧೯೧೧ರ ಕಾಯ್ದೆಯ ಸವಲತ್ತುಗಳು**

೧೯೧೧ರ ಕಾಯ್ದೆಯು ಸ್ಥಳೀಯ ಸರ್ಕಾರಕ್ಕೆ ಈ ಕೆಳಕಂಡ ವಿಷಯಗಳಲ್ಲಿ ಬಲವನ್ನು ತಂದುಕೊಟ್ಟಿತು.

೧. ಯಾವುದೇ ಬುಡಕಟ್ಟು/ಪಂಗಡ/ಗುಂಪನ್ನು ಅಪರಾಧಿ ಬುಡಕಟ್ಟೆಂದು ಗುರುತಿಸುವ ಮತ್ತು ಅವು ಅಪರಾಧಗಳನ್ನು ಎಸಗುತ್ತಿದ್ದರೆ ಅವುಗಳನ್ನು ಜಾಮೀನುರಹಿತ ಅಪರಾಧ ಗಳೆಂದು ಪರಿಗಣಿಸುವ ಅಧಿಕಾರವಿತ್ತು.

೨. ಯಾವುದೇ ಅಪರಾಧಿ ಬುಡಕಟ್ಟು ಸದಸ್ಯರನ್ನು ನೋಂದಣಿ ಮಾಡಿಕೊಳ್ಳುವುದು ಮತ್ತು ಅವರ ಬೆರಳಿನ ಗುರುತುಗಳನ್ನು ಪಡೆಯಬಹುದಿತ್ತು.

೩. ನೋಂದಣಿಗೊಂಡ ಪ್ರತಿಯೊಬ್ಬ ಸದಸ್ಯರು ತಾವು ಯಾವ ಕಾರಣಕ್ಕಾಗಿ ತಮ್ಮ ನೆಲೆಯನ್ನು ಬದಲಿಸುತ್ತಿದ್ದೇವೆ ಎಂದು ನೇರವಾಗಿ ವರದಿ ಮಾಡಬೇಕಿತ್ತು. ಅದನ್ನು ಸ್ಥಳೀಯ ಸರ್ಕಾರವು ಘೋಷಿಸಬೇಕು. ಅಪರಾಧಿ ಬುಡಕಟ್ಟುಗಳು ತಮ್ಮ ಚಲನವಲನಕ್ಕೆ ಸಂಬಂಧಿಸಿದಂತೆ, ನಿರ್ಧರಿತ ಪ್ರದೇಶಗಳಲ್ಲಿ/ಸ್ಥಳಗಳಲ್ಲಿ ನೆಲೆಸಬೇಕಾಗಿತ್ತು (ಸೆಕ್ಷನ್೧೨).

ಆದರೆ ಅದರ ಕುರಿತು ಮೊದಲೇ ಕ್ರಮ ಕೈಗೊಳ್ಳಬೇಕಾಗಿತ್ತು. ಅವರ ಜೀವನ ಶೈಲಿ, ಅವರ ವೃತ್ತಿ ಮಾಡುತ್ತಿದ್ದಾರೆ ಎಂಬುದನ್ನು ಪರಿಗಣಿಸಿ, ಅವರ ಕುರಿತು ತೃಪ್ತಿ ಎನಿಸಿದಾಗ ಮಾತ್ರ ಭಾರತ ಸರ್ಕಾರವು ಅವರ ನೆಲೆಯ ಕುರಿತು ಪರವಾನಗಿ ನೀಡಬಹುದಿತ್ತು. ಇದರ ಹೊರತಾಗಿ ಈ ಕಾಯ್ದೆಯ ಮುಖ್ಯ ಅಂಶವೆಂದರೆ ಸ್ಥಳೀಯ ಸರ್ಕಾರವು, ಅಂತಹ ಜನರಿಗಾಗಿ ಕೆಲವೊಂದು ಕಾರ್ಖಾನೆಗಳು, ವ್ಯವಸಾಯ ಕುರಿತು ತಿಳುವಳಿಕೆ ನೀಡುವ ಶಾಲೆಗಳನ್ನು ನಿರ್ಮಿಸುವ, ಪಾಲಕರಿಂದ ಮಕ್ಕಳನ್ನು ಬೇರ್ಪಡಿಸುವ ಅಧಿಕಾರ ಪಡೆಯಿತು (ಸೆಕ್ಷನ್೧೭).

ಅವರ ಮಕ್ಕಳನ್ನು ಸಂರಕ್ಷಿಸುವ ಅಧಿಕಾರ ಸ್ಥಳೀಯ ಆಡಳಿತಕ್ಕೆ ದೊರಕಿತ್ತಲ್ಲದೆ ಆ ಮಕ್ಕಳ ವಾತಾವರಣ ಬದಲಿಸಿ, ಅವರಿಗೆ ಶಿಕ್ಷಣ ಮತ್ತು ಇತರೆ ತರಬೇತಿಯನ್ನು ನೀಡಲಾಗುತ್ತಿತ್ತು. ಈ ರೀತಿ ಮಾಡುವುದರಿಂದ ಆ ಮಕ್ಕಳು ವಿಧೇಯ ನಾಗರಿಕರಾಗಿ ಬೆಳೆಯುತ್ತಾರೆ ಎಂದು

ಕಂಪನಿ ಸರ್ಕಾರವು ಭಾವಿಸಿತ್ತು. ಈ ಕಾಯ್ದೆಯ ಸೆಕ್ಷನ್ ೨೦ರಡಿಯಲ್ಲಿ ಸ್ಥಳೀಯ ಸರ್ಕಾರವು ನಿಯಮಗಳನ್ನು ರೂಪಿಸುವುದು ಮತ್ತು ಆ ನಿಯಮಗಳು ಯಾವ ಉದ್ದೇಶಕ್ಕಾಗಿ ರೂಪಿಸ ಲಾಗಿದೆಯೋ ಆ ಉದ್ದೇಶ ಈಡೇರಿಸಲು ಬಳಸಬಹುದಿತ್ತು. ಅಪರಾಧಿ ಬುಡಕಟ್ಟುಗಳಿಗೆ ನೋಟಿಸ್ ಕೊಡುವ ಮೂಲಕ ದಂಡಶುಲ್ಕವನ್ನು ವಿಧಿಸಿ, ವಸೂಲು ಮಾಡಲಾಗುತ್ತಿತ್ತು.

**D. The Criminal Tribes Act of 1923**

The question of CTs came into review during the year 1919. The CT settlements were the main terms of reference included in the All India Jails Committee. The All Indian Jails Committee was appointed during the year 1919. The Jails Committee emphasized that the settlements were not to be merely another kind of a jail. The CT settlements were such places where there is provision for economic development. Without enthusiasm, devotion and religious teachings, the economic progress could not be achieved. The committee emphasized that the aim of the settlement should be positive one of the reclamation of the settlers. The CT settlements were not merely the negative one of the protection of the society from their degradation. The committee deprecated segregation and separation of children from their parents only in certain cases. The committee recommended that the most successful settlements would be placed in the industrial places. The settlers were employed as laborers in the industries. Due to the non-availability of land and lack of experience in agricultural methods, the committee did not recommend the opening of agriculture among the CT settlements. The committee also did not recommend for the industrial settlements because the CTs were not provided word sufficiently, paid less remuneration and were barred from socially useful work. However, for the first time, the Government considered the problem of CTs with greater emphasis. The government laid emphasis on economic development. It paid lesser attention on the penal side.

**ಡಿ) ೧೯೨೩ರ ಅಪರಾಧಿ ಬುಡಕಟ್ಟು ಕಾಯ್ದೆ**

೧೯೧೯ರ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಪ್ರಶ್ನಿಸಿ ೧೯೨೩ರ ಕಾಯ್ದೆಯನ್ನು ಜಾರಿಗೆ ತರಲಾಯಿತು. ಅಪರಾಧಿ ಬುಡಕಟ್ಟುಗಳ ವಸಾಹತುಗಳ ಜೊತೆಗೆ All India Jails Committee ಯನ್ನು ಇದು ಒಳಗೊಂಡಿದೆ. ಜೈಲ್ ಕಮಿಟಿಯು ಕೇವಲ ಇತರೆ ಸ್ವರೂಪದ ಜೈಲುಗಳಿಗೆ ಒತ್ತು ಕೊಡುವುದಲ್ಲದೆ ವಸಾಹತುಗಳಿಗೂ/ಸೆಟ್ಲ್‌ಮೆಂಟ್‌ಗಳಿಗೂ ಒತ್ತು ನೀಡಿತು. ಅಪರಾಧಿ ಬುಡಕಟ್ಟು ವಸಾಹತು ಸ್ಥಳಗಳು ಅವರ ಆರ್ಥಿಕ ಅಭಿವೃದ್ಧಿಗೂ ಅವಕಾಶ ಕಲ್ಪಿಸು

ವಂತಿರಬೇಕೆಂದು ಯೋಚಿಸಿತು. ಅದು ಯಾವುದೇ ಸಂಭ್ರಮ, ಆರಾಧನೆ, ಧಾರ್ಮಿಕ ಪುರೋಹಿತಶಾಹಿಗೆ ಅವಕಾಶ ನೀಡದೇ ಕೇವಲ ವಸಾಹತುವಾಸಿ ಅಪರಾಧಿ ಬುಡಕಟ್ಟುಗಳ ಏಳಿಗೆಯನ್ನು ದೃಷ್ಟಿಯಲ್ಲಿರಿಸಿಕೊಂಡಿತು. ಅಪರಾಧಿ ಬುಡಕಟ್ಟು ವಸಾಹತುಗಳು ಕೇವಲ ಈ ಸಮುದಾಯಗಳಿಂದ ಸಮಾಜವನ್ನು ಕಾಯುವ ನಿಟ್ಟಿನಲ್ಲಿ ಸೀಮಿತವಾಗದೆ ಅಲ್ಲಿರುವ ಜನರ ಕುರಿತು ಕಾಳಜಿಯನ್ನು ವ್ಯಕ್ತಪಡಿಸಿತು. ಈ ಸಮಿತಿಯು ಸೆಟ್ಲ್‌ಮೆಂಟ್‌ಗಳ ಉದ್ದೇಶ ಈಡೇರಿಕೆಗೆ ಔದ್ಯಮಿಕ ಪ್ರದೇಶಗಳಲ್ಲಿ ವಸಾಹತುಗಳನ್ನು ನಿರ್ಮಿಸಲು ಶಿಫಾರಸ್ಸು ಮಾಡಿತು. ಇದರಿಂದ ಈ ವಸಾಹತು ಜನ ಉದ್ದಿಮೆಗಳಲ್ಲಿ ಕೂಲಿ ಕಾರ್ಮಿಕರಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಯಿತು. ಸೆಟ್ಲ್‌ಮೆಂಟ್ ವಾಸಿಗಳಿಗೆ ಕೃಷಿಯ ಕುರಿತು ತಿಳುವಳಿಕೆಯ ಕೊರತೆ ಇತ್ತು ಹಾಗೂ ಅವರಿಗೆಲ್ಲ ನೀಡುವಷ್ಟು ಭೂಮಿ ದೊರೆಯುವುದು ಅಸಂಭವವಾಗಿತ್ತು. ಇದರಿಂದಾಗಿ ಕೃಷಿಯನ್ನು ಕುರಿತು ಈ ಸಮಿತಿ ಶಿಫಾರಸ್ಸು ಮಾಡಲಿಲ್ಲ. ಇದಕ್ಕೆ, ಅಪರಾಧಿ ಬುಡಕಟ್ಟು ಜನರು ಉದ್ದಿಮೆಗಳಲ್ಲಿ ತೃಪ್ತಿದಾಯಕವಾಗಿ ಕೆಲಸ ಮಾಡುವುದು ಅನುಮಾನದ ವಿಚಾರವೇ ಆಗಿತ್ತು. ಈ ಕಾರಣಕ್ಕಾಗಿಯೇ ಸಮಾಜಕ್ಕೆ ಉಪಯುಕ್ತ ಕೆಲಸಗಳನ್ನು ಇವರಿಂದ ಮಾಡಿಸಬಹುದು ಎಂಬ ಶಿಫಾರಸ್ಸನ್ನು ಈ ಸಮಿತಿ ಮಾಡಿತು. ಮೊದಲ ಬಾರಿಗೆ ಸರ್ಕಾರ ಅಪರಾಧಿ ಬುಡಕಟ್ಟು ಸಮಸ್ಯೆಗಳನ್ನು ಪರಿಗಣಿಸಿ ಅವುಗಳ ಕುರಿತು ಹೆಚ್ಚಿನ ಒತ್ತನ್ನು ನೀಡಿತು ಹಾಗೂ ಆ ಸಮುದಾಯಗಳ ಆರ್ಥಿಕ ಅಭಿವೃದ್ಧಿಯತ್ತ ಗಮನಹರಿಸಿತು.

### E. Criminal Tribes Act of 1924

On the recommendations of the Indian Jail Enquiry Committee, the CT Act was again amended in 1923. It was applied to the whole of British India in 1924. In many aspects, the 1911 Act was found defective and contained many loop-holes. Basically, in aim and intent, it was preventive and not corrective. There were virtually no attempts in it to reform and rehabilitate the criminals. There was provision for separating children from the parents and giving them proper education. But there were practical difficulties too. Intermixing the parents and children will add new problems. The culture of crime will be continued. Some of the main features of the Act are: 1. Notification, 2. Registration, 3. Restriction of movements, 4. Settlements and schools of Criminal Tribes and, 5.Unjust punishments and sentences.

➢ **Provisions of the 1924 Act**

1. Registration: Every member of the designated tribe was categorized as a "Criminal" or as a "potential criminal". The tribes were instructed to register themselves

either with the police department or the village administration, the purpose being to locate and keep vigil on them. Every new born child was thus forced to be registered to update records. Failure to register was a punishable offence.

2. Reporting: A surveillance system was built up by making every registered person belonging to a "criminal tribe" report to the police or to the village administration. The movements of each such person were recorded and each one had to get written permission from the authorities to go out of the colony and when returning to it had to furnish information about the purpose and destination (name and address) or the movement. Regardless of whether any crime was indulged in, merely belonging to the "Criminal Tribe" Provided sufficient legal grounds for total vigilance.

3. Segregation: Those individuals and families which were really involved in criminal operations never bothered to register themselves or report to the authorities. To exercise effective control and watch over them, active criminals and families were rounded up and sent to special settlements. The management of these settlements was given over to Christian missionaries, who were given magisterial and police powers. Some arable land was made available and the settlers were expected to cultivate it and live on its produce. Reporting to the management thrice a day was a routine instruction; night checks and controls were conducted; some settlements were fenced with barbed wire. In Andhra Pradesh there were five such settlement, established between 1906 and 1917; Sitanagaram and Stuartpuram in Guntur District, Kapparalatippa near Bitragunta in Nellore District, Siddhapuram in Kurnool District and Lingala in Mahaboob Nagar District. The Culture of Crime was perpetuated by isolating the members of the tribe and keeping vigilance on them, because the children born in these settlements were socialized only in their values and culture, old people take pride in narrating their brave deeds.

Section 3 of the Act empowered the local government to declare any tribe or class of persons or a part there of, as a criminal tribe, if it has some reason to believe that they are addicted to the commission of non-bailable offences. Sections 4 and 5, empowered the district magistrate to make a regular register of the members of the criminal tribes living within his jurisdiction. The district magistrate called every

member of the tribe concerned and asked each one to furnish the establishment of industrial, agricultural, reformatory settlements and schools for criminals. It empowered the local government to place any tribe in any type of settlement. Section 23 of the CT Act declared that any person belonging to this category convicted once for any offence under the IPC, specified in the schedule first, if convicted to the some offence for the second time, he will be punished with imprisonment for ten or not less than seven years and on a third or any subsequent conviction with transportation for life. The instance of getting a pass and reporting oneself to the police and village headman to take forced and free labour from the poor. This gave birth to bribery at the local level.

**ಇ) ೧೯೨೪ರ ಅಪರಾಧಿ ಬುಡಕಟ್ಟು ಕಾಯ್ದೆ**

Indian Jail Enquari Committeeಯ ಶಿಫಾರಸ್ಸುಗಳಿಂದಾಗಿ ೧೯೨೩ರ ಅಪರಾಧಿ ಬುಡಕಟ್ಟು ಕಾಯ್ದೆಯು ಮತ್ತೊಮ್ಮೆ ತಿದ್ದುಪಡಿಗೊಂಡಿತು. ಇದು ೧೯೨೪ರಲ್ಲಿ ಬ್ರಿಟಿಷ್ ಆಡಳಿತದ ಭಾರತದ ಎಲ್ಲಾ ಪ್ರದೇಶಕ್ಕೂ ಅನ್ವಯವಾಗುತ್ತಿತ್ತು. ೧೯೧೧ರ ಕಾಯ್ದೆಯು ಹಲವಾರು ದೋಷಗಳಿಂದ ಕೂಡಿತ್ತು. ಇದು ಅಪರಾಧಿಗಳ ಪುನರ್ವಸತಿ ಮತ್ತು ಸುಧಾರಣೆಗಳ ಕುರಿತು ಪ್ರಯತ್ನಿಸಲಿಲ್ಲ. ಕೇವಲ ಅಪರಾಧಿ ಪಾಲಕರಿಂದ ಮಕ್ಕಳನ್ನು ಬೇರ್ಪಡಿಸುವುದು ಮತ್ತು ಅಂತಹ ಮಕ್ಕಳಿಗೆ ಶಿಕ್ಷಣ ಒದಗಿಸುವುದಕ್ಕೆ ಮಾತ್ರ ಸೀಮಿತವಾಗಿಬಿಟ್ಟಿತು. ಪಾಲಕರು ಮತ್ತು ಮಕ್ಕಳ ಮಧ್ಯೆ ಹೊಸ ಸಮಸ್ಯೆಗಳು ತಲೆದೂರಿದವು. ಅಪರಾಧಿ ಭಾವನೆ ಅವರಲ್ಲಿ ಮುಂದುವರೆಯುವ ಸಾಧ್ಯತೆಗಳೇ ಹೆಚ್ಚಾಗಿದ್ದವು.

➢ **ಈ ಕಾಯ್ದೆಯ ಮುಖ್ಯ ಅಂಶಗಳು**

೧. ಅಧಿಸೂಚನೆ

೨. ನೋಂದಣಿ

೩. ಬುಡಕಟ್ಟುಗಳ ವಲಸೆ, ಚಲನೆಗಳ ಮೇಲೆ ನಿರ್ಬಂಧನೆ

೪. ಅಪರಾಧಿ ಬುಡಕಟ್ಟುಗಳಿಗಾಗಿ ನಿರ್ಮಿಸಿದ ಶಾಲೆಗಳು ಮತ್ತು ವಸಾಹತುಗಳು

೫. ಶಿಕ್ಷೆ ಮತ್ತು ಕೋರ್ಟ್ ವಿಚಾರಣೆ

➢ **೧೯೨೪ರ ಕಾಯ್ದೆಯ ಪ್ರಮುಖ ಪರತ್ತುಗಳು**

**೧. ನೋಂದಣಿ–** ಪ್ರತಿಯೊಬ್ಬ ಸದಸ್ಯನನ್ನು ಅಪರಾಧಿಗಳು ಅಥವಾ 'ಸಂಭಾವ್ಯ ಅಪರಾಧಿ' ಗಳು ಎಂದು ವರ್ಗೀಕರಿಸಲಾಗುತ್ತಿತ್ತು. ಆ ಬುಡಕಟ್ಟುಗಳು ಯಾವ ಸ್ವರೂಪದವು ಪೋಲಿಸ್

ಇಲಾಖೆ ಅಥವಾ ಗ್ರಾಮದ ಮುಖ್ಯಸ್ಥನಿಂದ ತಿಳಿದು ನಿರ್ಣಯಿಸಲಾಗುತ್ತಿತ್ತು. ಹೊಸದಾಗಿ ಹುಟ್ಟಿದ ಪ್ರತಿಯೊಂದು ಮಗುವನ್ನು ದಾಖಲೆಗಳಲ್ಲಿ ನೊಂದಾಯಿಸಿಕೊಳ್ಳಲಾಗುತ್ತಿತ್ತು. ಶಿಕ್ಷೆಗೆ ಒಳಪಡಿಸುವಂತಹ ಅಪರಾಧಗಳನ್ನು ಇಂತಹ ನೊಂದಣಿಯಿಂದಾಗಿ ಸುಲಭವಾಗಿ ಪತ್ತೆಹಚ್ಚಬಹುದಿತ್ತು.

**೨. ವರದಿ ನೀಡುವುದು–** ನೊಂದಣಿಗೊಂಡ ಪ್ರತಿಯೊಬ್ಬ ಅಪರಾದಿ , ಬುಡಕಟ್ಟಿನ ಸದಸ್ಯನನ್ನು ಪೋಲಿಸರು/ಗ್ರಾಮಾಧಿಕಾರಿಗಳು ತಮ್ಮ ಅಧೀನದಲ್ಲಿ ಕಾಯಬೇಕಿತ್ತು. ಪ್ರತಿಯೊಬ್ಬ ವ್ಯಕ್ತಿಯ ಚಲನವಲನಗಳು ದಾಖಲಾಗುತ್ತಿದ್ದವು. ಪ್ರತಿಯೊಬ್ಬರು ತಮ್ಮ ವಾಸಸ್ಥಾನವನ್ನು ಬಿಟ್ಟು ಹೊರಗೆ ಹೋಗಬೇಕಾದರೆ, ಅಧಿಕಾರಿಗಳಿಂದ ಲಿಖಿತ ಒಪ್ಪಿಗೆ ಪಡೆಯಬೇಕಿತ್ತು ಹಾಗೂ ತಾವು ಯಾವ ಉದ್ದೇಶಕ್ಕಾಗಿ ಹೊರಗೆ ಹೋಗಬೇಕಾಗಿದೆ, ಯಾವಾಗ ಮರಳಿ ಬರುತ್ತೇವೆ ಇತ್ಯಾದಿ ವಿವರಗಳನ್ನು ಮತ್ತು ತನ್ನ ಹೆಸರು, ವಿಳಾಸ ಇತ್ಯಾದಿಗಳ ಬಗ್ಗೆ ಮಾಹಿತಿ ನೀಡ ಬೇಕಾಗಿತ್ತು. ಒಟ್ಟಾರೆ ಆ ವ್ಯಕ್ತಿಯ ಹಿಂದಿನ ಚಾರಿತ್ರ್ಯವನ್ನು ಪರಿಗಣಿಸಿ ಆತನ ಕುರಿತು ಯಾವ ಕಾವಲು ವ್ಯವಸ್ಥೆ ರೂಪಿಸಬಹುದೆಂದು ನಿರ್ಣಯಿಸಲಾಗುತ್ತಿತ್ತು.

**೩. ಪ್ರತ್ಯೇಕಿಸಿಡುವಿಕೆ–** ಅಪರಾಧವನ್ನು ಭೇದಿಸಲು ಒಬ್ಬ ವ್ಯಕ್ತಿ ಅಥವಾ ಇಡೀ ಕುಟುಂಬವನ್ನು ನಿಯಂತ್ರಣಕ್ಕೊಳಪಡಿಸಲು ನೋಂದಣಿ ಅಥವಾ ವರದಿಗಳು ಆಧಾರವಾಗಿರುತ್ತಿದ್ದವು. ಇವು ಅವರನ್ನು ನಿಯಂತ್ರಿಸಲು ಮತ್ತು ಕಾಯಲು ಉಪಯುಕ್ತವಾಗುತ್ತಿತ್ತು. ಹೆಚ್ಚಿನ ಪ್ರಮಾಣದ ಅಪರಾಧಗಳಲ್ಲಿ ಕ್ರಿಯಾಶೀಲರಾದ ಅಪರಾಧಿಗಳನ್ನು ಮತ್ತು ಕುಟುಂಬಗಳನ್ನು ನಿಯಂತ್ರಣದಲ್ಲಿಡಲು ಮತ್ತು ಮೇಲ್ವಿಚಾರಣೆ ಮಾಡಲು ಅವರನ್ನು ಪ್ರತ್ಯೇಕವಾಗಿ ರೂಪಿಸಿದ ಸೆಟ್ಲ್‌ಮೆಂಟ್‌ಗಳಲ್ಲಿ ಇರಿಸಲಾಗುತ್ತಿತ್ತು. ಇವುಗಳ ನಿರ್ವಹಣೆ ಮತ್ತು ಮೇಲ್ವಿಚಾರಣೆಯ ಜವಾಬ್ದಾರಿಯನ್ನು 'ಕ್ರೈಸ್ತ ಮಿಶನರಿ'ಗಳಿಗೆ ವಹಿಸಲಾಗಿತ್ತು. ಅವರಿಗೆ ನ್ಯಾಯಾಧೀಶನ ಮತ್ತು ಪೋಲಿಸರಿಗಿರುವ ಎಲ್ಲಾ ಅಧಿಕಾರಗಳನ್ನು ನೀಡಲಾಗಿತ್ತು. ಲಭ್ಯವಿರುವ ಸ್ವಲ್ಪ ವ್ಯವಸಾಯಯೋಗ್ಯ ಭೂಮಿಯನ್ನು ವಸಾಹತುಗಳಲ್ಲಿ ನೆಲೆಸಿದವರಿಗೆ ನೀಡಿ, ಅವರಿಂದ ಕೃಷಿ ಚಟುವಟಿಕೆ ಮಾಡಿಸಿ, ಅದರಿಂದ ಫಲ ಪಡೆಯುವ ಪ್ರಯತ್ನ ಮಾಡಲಾಗುತ್ತಿತ್ತು.

ಮೇಲ್ವಿಚಾರಕರ ವರದಿಯನ್ನು ಆಧರಿಸಿ ಅಲ್ಲಿನ ವ್ಯಕ್ತಿ ಮತ್ತು ಕುಟುಂಬಗಳನ್ನು ದಿನಕ್ಕೆ ಮೂರು ಬಾರಿಯಂತೆ ತಪಾಸಣೆ ಮಾಡುವುದು ಮತ್ತು ಅವರನ್ನು ನಿಯಂತ್ರಣದಲ್ಲಿಡುವ ಕಾರ್ಯ ನಡೆಯುತ್ತಿತ್ತು.

ಕಾಯ್ದೆಯ ಸೆಕ್ಷನ್ ೩ರ ಪ್ರಕಾರ, ಒಂದು ವೇಳೆ ಯಾವದೇ ಬುಡಕಟ್ಟು/ವರ್ಗದ ವ್ಯಕ್ತಿಗಳು ಜಾಮೀನುರಹಿತ ಅಪರಾಧಗಳಲ್ಲಿ ತೊಡಗಿದ್ದಾರೆ ಎಂದು ನಂಬಿಕೆ ಮೂಡಿದರೆ, ಅಂತಹ ವೇಳೆ ಅವರನ್ನು 'ಅಪರಾಧಿ ಬುಡಕಟ್ಟು' ಎಂದು ಘೋಷಿಸುವ ಅಧಿಕಾರ ಸ್ಥಳೀಯ

ಸರ್ಕಾರಕ್ಕೆ ನೀಡಲಾಯಿತು. ಸೆಕ್ಷನ್ ೪ ಮತ್ತು ೫ ರಂತೆ ಜಿಲ್ಲಾ ನ್ಯಾಯಾಧೀಶರು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಬರುವ  ಅಪರಾಧಿ ಬುಡಕಟ್ಟುಗಳ ಪ್ರತಿಯೊಬ್ಬ ವ್ಯಕ್ತಿಯನ್ನು ಕುರಿತು ನಿರಂತರವಾಗಿ ನೋಂದಣಿ ಮಾಡಿಕೊಳ್ಳಬೇಕಾಗಿತ್ತು ಮತ್ತು ಜಿಲ್ಲಾ ನ್ಯಾಯಾಧೀಶರು ಬುಡಕಟ್ಟನ್ನು ಸಂಪರ್ಕಿಸಿ ಅವರನ್ನು ವಿಚಾರಿಸಿ, ಅವರ ಕುರಿತು ವಿವರಗಳನ್ನು ಪಡೆಯಬೇಕಾಗಿತ್ತು.

ಕಾಯ್ದೆಯ ಸೆಕ್ಷನ್ ೧೬ರ ಪ್ರಕಾರ ಉದ್ದಿಮೆಗಳು, ಕಾರ್ಖಾನೆಗಳು, ಕೃಷಿ ಸೆಟ್ಲ್‌ಮೆಂಟ್‌ಗಳು, ಮಕ್ಕಳಿಗಾಗಿ ಪುನರ್ವಸತಿ ಶಾಲೆ, ಇತ್ಯಾದಿಗಳನ್ನು ಸ್ಥಾಪಿಸಬಹುದಿತ್ತು. ಸ್ಥಳೀಯ ಸರ್ಕಾರವು ಬುಡಕಟ್ಟು ಸೆಟ್ಲ್‌ಮೆಂಟ್‌ಗೆ ಯಾವುದೇ ಸ್ಥಳವನ್ನು ನಿಗದಿಗೊಳಿಸಬಹುದಿತ್ತು. ಕಾಯ್ದೆಯ ಸೆಕ್ಷನ್ ೨೩ರ ಪ್ರಕಾರ, ಐಪಿಸಿ ಅಡಿಯಲ್ಲಿ ಯಾವುದೇ ವ್ಯಕ್ತಿ ಮೊದಲನೇ ಬಾರಿ ಅಪರಾಧ ವೆಸಗಿದರೆ ಸಾಮಾನ್ಯ ಶಿಕ್ಷೆಯನ್ನು, ಅದೇ ಅಪರಾಧವನ್ನು ಎರಡನೇ ಬಾರಿ ಮಾಡಿದರೆ ೧೦ ವರ್ಷ ಅಥವಾ ೭ ವರ್ಷಕ್ಕಿಂತ ಕಡಿಮೆ ಇಲ್ಲದ ಜೈಲು ಶಿಕ್ಷೆಯನ್ನು ಮತ್ತು ಮೂರನೇ ಬಾರಿ ಅಥವಾ ಪದೇ ಪದೇ ಅಪರಾಧವೆಸಗುತ್ತಿದ್ದರೆ ಜೀವನಪೂರ್ತಿ ಜೈಲು ಶಿಕ್ಷೆಯನ್ನು ವಿಧಿಸಬಹುದಿತ್ತು. ಪೋಲಿಸ್ ಮತ್ತು ಗ್ರಾಮಾಧಿಕಾರಿಯ ವರದಿಯ ಮೇರೆಗೆ ಅವರಿಗೆ ಕೂಲಿ ಕಾರ್ಮಿಕರಾಗಿ ಕಾರ್ಯ ನಿರ್ವಹಿಸುವ ಪಾಸ್‌ಗಳನ್ನು ನೀಡಲಾಗುತ್ತಿತ್ತು. ಈ ಪಾಸ್‌ಗಳನ್ನು ನೀಡಲು ಪೋಲಿಸರು ಮತ್ತು ಗ್ರಾಮಾಧಿಕಾರಿಗಳು ಅಪರಾಧಿ ಬುಡಕಟ್ಟು ಸದಸ್ಯರಿಂದ ಒತ್ತಾಯಪೂರ್ವಕವಾಗಿ ಉಚಿತ ಸೇವೆಯನ್ನು ಪಡೆಯುತ್ತಿದ್ದರು. ಇದು ಸ್ಥಳೀಯ ಮಟ್ಟದಲ್ಲಿ ಲಂಚಗಾರಿಕೆಯ ಉಗಮಕ್ಕೆ ಕಾರಣವಾಯಿತು.

### F. Madras Restriction of Habitual Offenders Act, 1948

During the year 1947, under the CT Act 1 of 1947 (Section 23 of CTA) laid down the minimum punishment of 7 years for the second offence and transportation for life for the third and subsequent offences was modified to the maximum of 7 years. The court can award any punishment it considered appropriate for the CTs. It came into force from 29th April 1948. It aims at the control of the criminals who take to crime as a profession. It was taken up after the rules under the Act were published in the Fort St. George Gazette dt. 22nd November 1949. The then Deputy Inspector General of Police Railways and Central Intelligence Department Madras noted: "The application of the Act is very limited. The Act has application only to such criminals- convicted of serious offences and criminal minded persons interned in the settlement. The Government of India published an All India Habitual offender's bill which is an effective-instrument to exercise better control over the criminals."

N.G.Ranga strongly fought for the repletion or abolition of the CT Act in Madras Presidency. He said the CT Act was used to 'suppress political workers' in those days. Two bills were passed in the Central Legislative Assembly. The first bill was sponsored by Venkatsubba Reddiyar who was an MLA to repeal the CT Act. The second bill was sponsored by N.G.Ranga. He proposed to repeal sections 10, 11, 12, 13,17,18,19 and 20 of the Act.

**ಎಫ್) ೧೯೪೮ರ ಮದ್ರಾಸ್‌ನ ನಿರ್ಬಂಧಿತ ರೂಢಿಗತ ಅಪರಾಧಿ ಕಾಯ್ದೆ**

೧೯೪೭ರ ಕಾಯ್ದೆಯ ಸೆಕ್ಷನ್ ೨೩ರ ಪ್ರಕಾರ ೨ನೇ ಬಾರಿ ಅಪರಾಧವೆಸಗಿದರೆ ಕನಿಷ್ಠ ಏಳು ವರ್ಷ ಶಿಕ್ಷೆಯನ್ನು ಮತ್ತು ಮೂರನೇ ಬಾರಿ ಅಪರಾಧವೆಸಗಿದರೆ ಮರಣದಂಡನೆ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಈ ಶಿಕ್ಷೆಯನ್ನು ಮರು ರೂಪಿಸಿ ಅದನ್ನು ಏಳು ವರ್ಷಕ್ಕೆ ಬದಲಾಯಿಸಲಾಯಿತು. ಅದೂ ನ್ಯಾಯಾಲಯವು ಅಪರಾಧಿ ಬುಡಕಟ್ಟುಗಳು ಆ ಅಪರಾದವನ್ನು ಮಾಡಿವೆ ಎಂದು ನಿರ್ಣಯಿಸಿದಲ್ಲಿ ಆ ರೀತಿಯ ಶಿಕ್ಷೆಗೆ ಗುರಿಪಡಿಸಬಹುದಿತ್ತು. ಇದು ಕಾನೂನಾಗಿ ಏಪ್ರಿಲ್ ೨೯, ೧೯೪೮ರಲ್ಲಿ ಜಾರಿಗೆ ಬಂತು. ಈ ಕಾಯ್ದೆಯ ಗುರಿ ಅಪರಾಧಗಳನ್ನು ನಿಯಂತ್ರಿಸುವುದು ಮತ್ತು ಅಪರಾದವನ್ನೇ ವೃತ್ತಿಯಾಗಿಸಿಕೊಳ್ಳುವುದನ್ನು ತಪ್ಪಿಸುವುದಾಗಿತ್ತು. ಈ ಕಾಯ್ದೆ ಜಾರಿಗೊಂಡ ತರುವಾಯ ಫೋರ್ಟ್ ಸೈಂಟ್ ಜಾರ್ಜ್ ಗೆಝೆಟ್‌ನಲ್ಲಿ ನವಂಬರ್ ೨೨, ೧೯೪೯ರಲ್ಲಿ ಪ್ರಕಟಗೊಳಿಸಲಾಯಿತು. ಈ ಕಾಯ್ದೆಯು ಕೇವಲ ಸೀಮಿತ ವಲಯಕ್ಕೆ ಸಂಬಂಧಿಸಿದುದು. ಇದು ಕೇವಲ ಅಪರಾಧಿಗಳಿಗೆ ಮಾತ್ರ ಸೀಮಿತವಾಗಿದೆ. ತೀವ್ರಕರವಾದ ಅಪರಾಧಗಳನ್ನು ಮಾಡುವವರಿಗೆ ಮತ್ತು ಅಪರಾಧಿ ಮನೋಭಾವದ ವ್ಯಕ್ತಿಗಳನ್ನು ಮಾತ್ರ ಸೆಟ್ಲ್‌ಮೆಂಟ್‌ನೊಳಗೆ ಇರಿಸಬಹುದೆಂದು ಈ ಕಾಯ್ದೆ ತಿಳಿಸುತ್ತದೆ. ಭಾರತ ಸರ್ಕಾರ ಪ್ರಕಟಿಸಿದ ಅಖಿಲ ಭಾರತ ರೂಢಿಗತ ಅಪರಾಧಗಳ ಮಸೂದೆ ಅಪರಾಧವನ್ನು ತಡೆಗಟ್ಟುವಲ್ಲಿ ಈ ಕಾಯ್ದೆ ತುಂಬಾ ಪರಿಣಾಮಕಾರಿಯಾಯಿತು.

*ಎನ್ ಜಿ ರಂಗಾರ*ವರು ಮದ್ರಾಸ್ ಪ್ರೆಸಿಡೆನ್ಸಿಯ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು ಹಿಂದಿನಂತೆ ಅನುಸರಿಸುವುದನ್ನು ವಿರೋಧಿಸಿ ಹೋರಾಟ ನಡೆಸಿದರು. ಅವರು ಹೇಳುವಂತೆ, 'ಅಪರಾಧಿ ಬುಡಕಟ್ಟು ಕಾಯ್ದೆಯು ಆ ದಿನಗಳಲ್ಲಿ ರಾಜಕೀಯ ಕಾರ್ಯಕರ್ತರನ್ನು ದಮನ ಮಾಡಲು ಉಪಯೋಗಿಸಲಾಗುತ್ತಿತ್ತು'.

ಕೇಂದ್ರ ಸಚಿವ ಸಂಪುಟದಲ್ಲಿ ಈ ವಿಚಾರವಾಗಿ ಎರಡು ಬಿಲ್‌ಗಳನ್ನು ಪಾಸು ಮಾಡಲಾಯಿತು.

೧. ಮೊದಲನೇ ಬಿಲ್, ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಹಿಂದಕ್ಕೆ ಪಡೆಯುವಂತೆ ಕೋರಿ ಎಮ್ ಎಲ್ ಎ ವೆಂಕಟಸುಬ್ಬ ರೆಡ್ಡಿಯರ್ ಅವರು ಮಂಡಿಸಿದರು.

೨. ಎರಡನೇ ಬಿಲ್, ಎನ್ ಜಿ ರಂಗಾ ರವರು, ಈ ಕಾಯ್ದೆಯ ಸೆಕ್ಷನ್ ೧೦, ೧೧, ೧೨, ೧೩, ೧೭, ೧೮, ೧೯ ಮತ್ತು ೨೦ನ್ನು ಹಿಂದಕ್ಕೆ ಪಡೆಯುವಂತೆ ಮನವಿ ಸಲ್ಲಿಸಿದರು.

**G. Criminal Tribes Laws (Repeal) Act, 1952 (No. XXIV of 1952)**

This act is called the criminal tribes laws (repeal) Act 1952. The Act extended to the whole of India except the state of Jammu and Kashmir. The CT Act and any other law corresponding to that was repealed on the 31st day of August 1952. However, the central government by its notification in the official Gazette declared that the said Act or law shall stand repealed in all the States. Though the Act was abolished in India by 1955 in some of the states, the provisions of the Act continued till 1965.

**ಜಿ) ೧೯೫೨ರ ಅಪರಾಧಿ ಬುಡಕಟ್ಟು ಕಾನೂನುಗಳನ್ನು ರದ್ದುಪಡಿಸುವ ಕಾಯ್ದೆ (೧೯೫೨, ಸಂ.XXIV)**

೧೯೫೨ರ ಕಾಯ್ದೆಯನ್ನು ೧೯೫೨ರ ಅಪರಾಧಿ ಬುಡಕಟ್ಟು ಕಾನೂನುಗಳನ್ನು ರದ್ದುಪಡಿಸುವ ಕಾಯ್ದೆ ಎಂದು ಕರೆಯುತ್ತಾರೆ. ಈ ಕಾಯ್ದೆ ಜಮ್ಮು ಮತ್ತು ಕಾಶ್ಮೀರ ರಾಜ್ಯಗಳನ್ನು ಹೊರತುಪಡಿಸಿ ಇಡೀ ಭಾರತಕ್ಕೆ ಅನ್ವಯಿಸುತ್ತದೆ. ಅಪರಾಧಿ ಬುಡಕಟ್ಟು ಕಾಯ್ದೆ ಮತ್ತು ಅದಕ್ಕೆ ಸಂಬಂಧಿಸಿದ ಇತರೆ ನಿಯಮಗಳು ಆಗಸ್ಟ್ ೩೧, ೧೯೫೨ರಲ್ಲಿ ಹಿಂದಕ್ಕೆ ಪಡೆಯಲಾಯಿತು. ಕೇಂದ್ರ ಸರ್ಕಾರವು ಇಲಾಖಾ ಗೆಝೆಟ್‌ನಲ್ಲಿ ಅಧಿಸೂಚನೆ ಹೊರಡಿಸಿ ಎಲ್ಲಾ ರಾಜ್ಯಗಳಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು ರದ್ದುಗೊಳಿಸಿರುವುದಾಗಿ ತಿಳಿಸಿತು. ಆದರೂ ಭಾರತದಲ್ಲಿ ಈ ಕಾಯ್ದೆಗಳು ಕೆಲ ರಾಜ್ಯಗಳಲ್ಲಿ ೧೯೫೫ರಲ್ಲಿ ರದ್ದುಗೊಂಡರೆ, ಕೆಲವು ಕಡೆ ೧೯೬೫ರವರೆಗೂ ಮುಂದುವರೆದವು.

ಹೀಗೆ ಕಾಲ–ಕಾಲಕ್ಕೆ ಈ ಅಪರಾಧಿ ಬುಡಕಟ್ಟು ಕಾಯ್ದೆಗಳು ಬದಲಾವಣೆಗೊಳ್ಳುತ್ತಾ ಹೋಗಿ ಕೊನೆಗೆ ೧೯೫೨ರಲ್ಲಿ ರದ್ದುಗೊಂಡು ಹೊಸ ರೂಪ ಪಡೆದವು. ಮೊದಲನೆಯ ಬಾರಿ ೧೮೭೧ರಲ್ಲಿ ಅಪರಾಧಿ ಬುಡಕಟ್ಟುಗಳ ಮೇಲೆ ದಂಡನೆ/ಶಿಕ್ಷೆಯ ಅವಕಾಶಗಳನ್ನು ಹೊರಡಿಸಲಾಯಿತು. ಅವು ೧೯೧೧ರವರೆಗೂ ಸಹ ಅನುಕ್ರಮವಾಗಿ ಜಾರಿಯಲ್ಲಿದ್ದವು. ೧೯೧೯ರಿಂದ ಅಪರಾಧಿ ಬುಡಕಟ್ಟುಗಳ ಒಳಿತಿಗಾಗಿ ಅಥವಾ ಸುಧಾರಣೆಗಾಗಿ ಕ್ರಮಗಳನ್ನು ಕೈಗೊಳ್ಳುವುದು ಪ್ರಾರಂಭವಾಯಿತು. ಸಾಮಾನ್ಯ ನಾಗರಿಕರ ಭದ್ರತೆಗೆ ಯಾವ ಕಂಟಕವೂ ಬರದಂತೆ, ಅಪರಾಧಿ ಬುಡಕಟ್ಟುಗಳ ಸುಧಾರಣೆಗೆ ಕಠಿಣವಾದ ಕಾನೂನುಗಳನ್ನು ತಿದ್ದುಪಡಿ ಮಾಡಬೇಕೆಂದು ಸರ್ಕಾರ ಯೋಚಿಸಿತು. ಅಪರಾಧಿ ಬುಡಕಟ್ಟು ಕಾಯ್ದೆಯನ್ನು ತಿದ್ದುಪಡಿ ತರಲು, ಮದ್ರಾಸ್ ಪ್ರೆಸಿಡೆನ್ಸಿಯ ಅನೇಕ ಜಿಲ್ಲಾ ನ್ಯಾಯಾಧೀಶರು ಮತ್ತು ಸುಪರಿಡೆಂಟ್ ಪೋಲಿಸರು ಒಲವು/

ಆಸಕ್ತಿ ತೋರಲಿಲ್ಲ. ಆದರೆ ಕೆಲವು ಮಾನವೀಯ ಜಿಲ್ಲಾ ನ್ಯಾಯಾಧೀಶರು ಮತ್ತು ಸುಪರಿಡೆಂಟ್ ಪೋಲಿಸರು ಅಪರಾಧಿ ಬುಡಕಟ್ಟು ಕಾಯ್ದೆಯನ್ನು ರದ್ದುಗೊಳಿಸಲು ಬಲವಂತಮಾಡಿದರು. ಎಲ್ಲಾ ಸೆಟ್ಲ್‌ಮೆಂಟ್‌ಗಳ ಸಾಮಾಜಿಕ ಸಂಘಟನೆಗಳು, ಕಾರ್ಯಕರ್ತರು, ಸಮಿತಿಗಳು ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಇಡಿಯಾಗಿ ತಿದ್ದುಪಡಿಗೊಳಿಸುವಂತೆ ಸರ್ಕಾರಕ್ಕೆ ಮನವಿ ಮಾಡಿದರು.

ಮೊದಲ ಅಪರಾಧಿ ಬುಡಕಟ್ಟು ಕಾಯ್ದೆ ೧೮೭೧ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಗಳು ಸಮಾಜದಲ್ಲಿ ಅಸಂಖ್ಯಾ ಪ್ರಾಮಾಣಿಕ ಜನರನ್ನು ದಂಡನಾರ್ಹ ಮತ್ತು ಶಿಕ್ಷಾರ್ಹಗೊಳಿಸಿದವು. ಇವು ಸಮುದಾಯಗಳು ತಮ್ಮಲ್ಲೆ ವಿಭಾಗಗೊಳ್ಳುವಂತೆ ಮಾಡಿದವು. ಈ ಕಾಯ್ದೆಗಳು ಯಾವುದೇ ಸಾಮಾಜಿಕ ಮತ್ತು ವೈವಾಹಿಕ ಸಂಬಂಧಗಳಿಲ್ಲದಂತೆ ಸಮುದಾಯಗಳನ್ನು 'ಅಪರಾಧಿ' ಮತ್ತು 'ಅಪರಾಧಿವಲ್ಲದ' ಗುಂಪುಗಳಾಗಿ ವಿಭಾಗಿಸಿದವು. ಇದರಿಂದಾಗಿ ಬುಡಕಟ್ಟು ಸಮುದಾಯ ಗಳು ಬೇರ್ಪಟ್ಟವು. ಅನೇಕ ವ್ಯಕ್ತಿಗಳು ಮತ್ತು ಕುಟುಂಬಗಳು ಕಳಂಕಿತ ಭಾವನೆಯನ್ನು ಹೊಂದಿದ್ದರು.

ಬುಡಕಟ್ಟು ಸದಸ್ಯರು, ಸ್ವತಂತ್ರ ಹೋರಾಟಗಾರರು, ಸಮಾಜ ಸುಧಾರಕರು ಎಲ್ಲರೂ ಸಹ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಸಂಪೂರ್ಣವಾಗಿ ರದ್ದುಗೊಳಿಸುವಂತೆ ಬೇಡಿಕೆ ಇಟ್ಟರು. ಈ ಅಪರಾಧಿ ಬುಡಕಟ್ಟು ಕಾಯ್ದೆ ಅಸಂಖ್ಯಾ ಜನರಲ್ಲಿ ಕಳಂಕಿತ ಭಾವನೆಯನ್ನು ಮೂಡಿಸಿತು. ಹೆಚ್ಚಿನದಾಗಿ ಅಂತಹ ಸಮುದಾಯದ ಯುವ ಜನತೆಯ ಮೇಲೆ ಕೆಟ್ಟ ಪರಿಣಾಮ ಬೀರಿತು. ಅವರನ್ನು ಅಪರಾಧಿಗಳೆಂದು ಗುರುತಿಸಿದ್ದರಿಂದ, ಯುವ ಜನತೆ ಸಮಾಜದ ಮೇಲೆ ಸಮಾಜ ಬಾಹಿರ ಭಾವನೆಗಳನ್ನು, ದ್ವೇಷವನ್ನು ಬೆಳೆಸಿಕೊಂಡರು. ಯುವ ಜನತೆ ತಮ್ಮ ಇತರೆ ಜಾತಿಯ ಸಹಪಾಠಿಗಳೊಂದಿಗೆ ನಾಚಿಕೆ ಮತ್ತು ಕೀಳರಿಮೆ ಭಾವನೆಯೊಂದಿಗೆ ಬಳಲುತ್ತಿದ್ದರು. ಮತ್ತೊಂದು ಕಡೆ ಕೆಲಸ ಮಾಡುವ ಸ್ಥಳದಲ್ಲಿ ತಮ್ಮ ಸಹ ಕೆಲಸಗಾರರು ಅಪರಾಧಿ ಬುಡಕಟ್ಟಿನ ಸದಸ್ಯರು ಎಂದು ತಿಳಿದ ಮೇಲೆ ಅವರಿಂದ ದೂರ ಸರಿಯುತ್ತಿದ್ದರು ಅಥವಾ ಹೆದರುತ್ತಿದ್ದರು.

ಭಾರತದ ಅನೇಕ ರಾಜ್ಯಗಳು ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಹಿಂದಕ್ಕೆ ಪಡೆಯಲು ಕ್ರಮ ಕೈಗೊಂಡರು. ಪ್ರಥಮವಾಗಿ ಮದ್ರಾಸ್ ಸರ್ಕಾರ ೧೯೪೯ರಲ್ಲಿ ಕಾಯ್ದೆಯನ್ನು ತಿದ್ದುಪಡಿ ಮಾಡಿತು. ಭಾರತ ಸರ್ಕಾರ ಈ ಕಾಯ್ದೆಯ ಉಪಯೋಗದ ಬಗ್ಗೆ ಅಧ್ಯಯನ ಮಾಡಲು ೧೯೪೯ರಲ್ಲಿ ಒಂದು ಕಮಿಟಿಯನ್ನು ನೇಮಿಸಿತು. ಈ ಕಾಯ್ದೆ ಸಂವಿಧಾನದ ವಿರುದ್ಧವಾದುದು ಒಂದು ಕಮಿಟಿ ಹೇಳಿತು. ಸಾರ್ವಜನಿಕರು ಸಹ ಇದನ್ನು ವಿರೋಧಿಸಿದರು. ಇದರೆಲ್ಲದರ ಪರಿಣಾಮವಾಗಿ ೧೯೫೨ರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಹಿಂದಕ್ಕೆ ಪಡೆಯಲಾಯಿತು. ಈ ಕಾಯ್ದೆಯು ರದ್ದುಗೊಂಡಿದ್ದರಿಂದ ದೇಶದ ೨,೨೬೮,೩೪೮ ಜನರು ಕಾನೂನುಬದ್ಧವಾಗಿ

ಈ ಕಾಯ್ದೆಗಳಿಂದ ಬಿಡುಗಡೆಗೊಂಡರು (ಮಲ್ಲಿಗಾಂಧಿ: ೨೦೦೮: ೧೪). ಅಂದಿನಿಂದ ಆ ಎಲ್ಲಾ ಸಮುದಾಯಗಳು ಇಂತಹ ಅಮಾನಷ ಕಾಯ್ದೆಯ ಬಂಧನದಿಂದ ಮುಕ್ತರಾಗಿ ಹೊಸ ರೂಪ ಪಡೆದು **'ವಿಮುಕ್ತ ಬುಡಕಟ್ಟು'**ಗಳ ಹೆಸರಿಂದ ಗುರುತಿಸಲ್ಪಟ್ಟವು.

ಭಾರತ ಸ್ವತಂತ್ರಗೊಂಡ ನಂತರ, ಭಾರತ ಸರ್ಕಾರ ಈ ಎಲ್ಲಾ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು ರದ್ದುಗೊಳಿಸಿತು ಮತ್ತು ಆ ಸಮುದಾಯಗಳನ್ನು 'ಹುಟ್ಟು ಅಪರಾಧಿ' ಎಂಬ ಭಾವನೆಯಿಂದ ಹೊರ ತರಲು ಪ್ರಯತ್ನಿಸಿತು. ಅಪರಾಧ ವೃತ್ತಿಯಲ್ಲ ಎಂದು ಸಮರ್ಥಿಸಿ ಕೊಂಡಿತು. ಕಾನೂನುಗಳಲ್ಲಿ ಬದಲಾವಣೆಗಳಾಗಿದ್ದರೂ, ಅಪರಾಧಿ ಬುಡಕಟ್ಟುಗಳ ಸ್ಥಿತಿ ಸೆಟ್ಲ್‌ಮೆಂಟ್‌ಗಳಲ್ಲಿ ಹಾಗೆಯೇ ಮುಂದುವರೆಯಿತು ಹಾಗೂ ಅವರಿಗೆ ತಮ್ಮನ್ನು ಉತ್ತಮ ಸ್ಥಿತಿಗೆ ಬದಲಾಯಿಸಿಕೊಳ್ಳಲು ಯಾವುದೇ ಅವಕಾಶಗಳು ಸಿಗಲಿಲ್ಲ. ಈಗಲೂ ಅಂತಹ ಸಮುದಾಯಗಳನ್ನು ಅಪರಾಧಿ ಹಿನ್ನೆಲೆ ಹೊಂದಿದವರು ಎಂದು ಕೀಳಾಗಿ ನೋಡುತ್ತಿರುವುದು ಹಾಗೂ ಅವರನ್ನು ಅಪರಾಧಿಗಳು ಎಂದು ಕರೆಯುತ್ತಿರುವುದು ದುರಾದುಷ್ಟಕರವಾಗಿದೆ.

ಪ್ರಸ್ತುತದಲ್ಲಿ ಈ ಸಮುದಾಯಗಳು ಸಹ ಕಾನೂನಿನಲ್ಲಿ ಇತರೆ ಭಾರತೀಯರು ಹೊಂದಿರುವ ಅಂತಸ್ತನ್ನೇ ಹೊಂದಿದ್ದಾರೆ. ಕಾಯ್ದೆಯು ರದ್ದುಗೊಂಡ ಮೇಲೆ, ಅಪರಾಧಿ ಬುಡಕಟ್ಟು ಸಮಸ್ಯೆಗಳ ಸುಧಾರಣೆಗಾಗಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಅನೇಕ ಕಮಿಟಿಗಳು ಶಿಫಾರಸ್ಸುಗಳನ್ನು ನೀಡಿದ್ದಾರೆ. ಸರ್ಕಾರ ಈಗ ಇವರ ಸಮಸ್ಯೆಗಳ ನಿವಾರಣೆಗಾಗಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುತ್ತಿದೆ. ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಸೌಲಭ್ಯಗಳನ್ನು ನೀಡುತ್ತಿದ್ದರೂ, ಈ ಸಮುದಾಯಗಳ ಸಾಮಾಜಿಕ ಸ್ಥಿತಿ ಮೊದಲಿನಂತೆಯೇ ಇದೆ. ಕಳಂಕಿತ ಭಾವನೆ ಇನ್ನೂ ಇವರನ್ನು ಕಾಡುತ್ತಿದೆ. ಈ ಜನರು ಸಾಮಾಜಿಕ ನಿರ್ಬಂಧನೆಯಿಂದ ತಮ್ಮನ್ನು ಬಿಡುಗಡೆಗೊಳಿಸಿ ಕೊಳ್ಳುವಲ್ಲಿ ಅಸಮರ್ಥರಾಗಿದ್ದಾರೆ.

ಅಯ್ಯಂಗಾರ್ ಸಮಿತಿ ತನ್ನ ವರದಿಯಲ್ಲಿ ೨೪ ವಿಮುಕ್ತ ಬುಡಕಟ್ಟುಗಳನ್ನು ಗುರುತಿಸಿದೆ. ಅದನ್ನೇ ಅಧಿಕೃತ ಪಟ್ಟಿಯೆಂದು ಪರಿಗಣಿಸಲಾಗುತ್ತಿದೆ (ಮಲ್ಲಿಕಾರ್ಜುನ: ೨೦೧೪: ೩೮). ಆ ಪಟ್ಟಿ ಈ ಕೆಳಕಂಡಂತಿದೆ.

**ಪರಿಶಿಷ್ಟ ಜಾತಿಗಳಲ್ಲಿ ಬರುವ ವಿಮುಕ್ತ ಬುಡಕಟ್ಟುಗಳು**

೧. ಆದಿ ದ್ರಾವಿಡ ೨. ಬಂಜಾರ, ಲಂಬಾಣಿ, ಲಮಾನಿ, ಸುಗಾಲಿ, ಸುಕಾಲಿ ೩. ದೋಮ್, ದೊಂಬರ್, ಪೈದಿ, ಪಾನೊ ೪. ಗಂಟಿಚೋರ್ಸ್ ೫. ಹಂಡಿ ಜೋಗಿಸ್ ೬. ಕೇಪ್ ಮಾರಿಸ್ ೭. ಕೊರಚ, ಕೊರಚರ ೮. ಮಾಲ ೯. ಮಾಂಗ ಗಾರುಡಿ

**ಪರಿಶಿಷ್ಟ ಪಂಗಡಗಳಲ್ಲಿ ಬರುವ ವಿಮುಕ್ತ ಬುಡಕಟ್ಟುಗಳು**

೧. ಭಿಲ್ ೨. ಪಾರ್ಧಿ, ಅಡ್ವಿಚಿಂಚೇರ್, ಫಾನ್ಸೆ ಪಾರ್ಧಿ, ಹರಣಶಿಕಾರಿ

**ಹಿಂದುಳಿದ ವರ್ಗಗಳಲ್ಲಿ ಬರುವ ವಿಮುಕ್ತ ಬುಡಕಟ್ಟುಗಳು**

೧. ಬೈರಾಗಿ, ಬವಾನಿ, ಬಾವಾ ೨. ಬೇಡರು ೩. ಬೆರಿಯ ೪. ಭಾಮ್ಟಾ ೫. ಚಾರಾ, ಛಾರಾ ೬. ಫಿಸಾಡಿ ೭. ಜ್ಯೋಗಿ, ಜೋಗೇರ, ಸನಜ್ಯೋಗಿ ೮. ಕಂಜರಭಾಟ ೯. ಕಂಜರಿ, ಕಂಜರ್ ೧೦. ಮಸಣಜ್ಯೋಗಿ ೧೧. ನಟ್ ೧೨. ಗುಜರ್ ೧೩. ಮರವರ್

ಈ ಪಟ್ಟಿಯಲ್ಲಿ ಚಪ್ಪರ್‌ಬಂದ್ ಸಮುದಾಯವನ್ನು ಪರಿಗಣಿಸಲೇ ಇಲ್ಲ. ಆದರೆ ಭಾರತ ಸರ್ಕಾರದ National Commission for Denotified, Nomadic and Semi-Nomadic Tribes, Ministry of social justice & empowerment, NewDelhi ಇವರ Draft list of Denotified, Nomadic and Semi-Nomadic Tribes of India ಎಂಬ ವರದಿಯಲ್ಲಿ ಕರ್ನಾಟಕದ ವಿಮುಕ್ತ ಬುಡಕಟ್ಟುಗಳ ಪಟ್ಟಿಯಲ್ಲಿ ಚಪ್ಪರ್‌ಬಂದ್ ಸಮುದಾಯದ ಹೆಸರು ನೊಂದಣಿಯಾಗಿದೆ.

ಅನೇಕ ಆದಿವಾಸಿ ಬುಡಕಟ್ಟುಗಳು ಅಪರಾಧಿ ಬುಡಕಟ್ಟುಗಳೆಂಬ ಹಣೆಪಟ್ಟಿ ಪಡೆದು, ನಂತರ ವಿಮುಕ್ತ ಬುಡಕಟ್ಟುಗಳ ಹೆಸರಲ್ಲಿ ನೆಲೆನಿಂತವು. ಒಟ್ಟಿನಲ್ಲಿ ಆದಿವಾಸಿ ಬುಡಕಟ್ಟುಗಳೇ ಇಂದು ವಿಮುಕ್ತ ಬಡಕಟ್ಟುಗಳ ರೂಪವನ್ನು ಪಡೆದಿವೆ ಎಂದು ಹೇಳಬಹುದು. ಈ ಬುಡಕಟ್ಟುಗಳು ಆಗಲೂ ಈಗಲೂ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾ ಬಂದಿವೆ. ಅನೇಕ ವಿಮುಕ್ತ ಬುಡಕಟ್ಟುಗಳ ಬಗ್ಗೆ ವಿವಿಧ ಬಗೆಯ ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ವಿಮುಕ್ತ ಬುಡಕಟ್ಟುಗಳು ಎಂದ ತಕ್ಷಣ ಪ್ರತೀ ಸರಿ ಕೆಲವೇ ಬುಡಕಟ್ಟುಗಳ ಹೆಸರು ಕೇಳಿಬರುತ್ತದೆ. ಕೆಲವೇ ಬುಡಕಟ್ಟುಗಳ ಕುರಿತು ಚರ್ಚೆ ನಡೆಯುತ್ತಿರುತ್ತದೆ. ಕೆಲ ವಿಮುಕ್ತ ಬುಡಕಟ್ಟುಗಳು ಕಡೆಗಣಿಸಲ್ಪಟ್ಟಿವೆ. ಅವುಗಳ ಹೆಸರು ಸಹ ತಿಳಿದಿರುವುದಿಲ್ಲ. ಅಂತಹ ಸಮುದಾಯಗಳನ್ನು ಸರ್ಕಾರ ಕೂಡ ಕಡೆಗಣಿಸಿದೆ. ಸರ್ಕಾರಿ ಆಯೋಗಗಳು ಸಹ ತಮ್ಮ ಅಧ್ಯಯನ ವರದಿಯಲ್ಲಿ ಕೆಲ ವಿಮುಕ್ತ ಬುಡಕಟ್ಟುಗಳ ಬಗ್ಗೆ ತಿಳಿಸೇ ಇಲ್ಲ. ಅಂತಹ ಕಡೆಗಣಿಸಲ್ಪಟ್ಟ ವಿಮುಕ್ತ ಬುಡಕಟ್ಟುಗಳಲ್ಲಿ ಚಪ್ಪರ್‌ಬಂದ್ ಸಮುದಾಯವು ಒಂದು. ಚಪ್ಪರ್‌ಬಂದ್ ವಿಮುಕ್ತ ಬುಡಕಟ್ಟನ್ನು ಸಮಾಜದ ಮುಖ್ಯವಾಹಿನಿಗೆ ಪರಿಚಯಿಸುವುದು ಮತ್ತು ಸರ್ಕಾರದ ಗಮನವನ್ನು ಇದರ ಕಡೆ ಸೆಳೆಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**ಆಧಾರಗಳು**

ಪ್ರಭಾಕರ ಎ ಎಸ್(ಸಂ), *ಆದಿವಾಸಿ ಅಖ್ಯಾನ* (ಹೊಸಪೇಟೆ: ಸಿದ್ಧಾರ್ಥ ಪ್ರಕಾಶನ: ೨೦೦೮)

ಮೇತ್ರಿ ಕೆ ಎಂ, *ಬುಡಕಟ್ಟು ಕುಲಕಸುಬುಗಳು* (ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ: ೨೦೦೨)

ಮಲ್ಲಿಕಾರ್ಜುನ ಬಿ ಮಾನ್ಪಡೆ, *ತಂತಿಬೇಲಿಯೊಳಗಿನ ಜಗತ್ತು* (ಶಿವಮೊಗ್ಗ: ಗೀತಾಂಜಲಿ ಪ್ರಕಾಶನ: ೨೦೧೪)

Annual Reports on the working of the Criminal Tribes Act in the Bombay Presidency (Bombay: Govt. Central press: 1934, 1936, 1937)

Draft list of Denotified, Nomadic and Semi-Nomadic Tribes of India (NewDelhi: Govt.of India: National Commission for Denotified, Nomadic and Semi-Nomadic Tribes: Ministry of social justice & empowerment)

Malli Gandhi, *Denotified Tribes: Dimensions of change* (New Delhi: Kanishka Publishers Distributors: 2008)

Nadeem Hasnain, *Tribal India* (Delhi: Palaka prakashan: 2011)

Rudolf C Heredia, *Denotified and Nomadic Tribes: The challenge of Free and Equal Citizenship* (Pune: University of Pune: 2007)

Singh K S (G.E), *People of India-Karnataka* (New Delhi: Affialiated East-West press Ltd: 2003: vol-26)

Subba Rao M, *Understanding Denotified and Nomadic Tribes* (Hydrabad: actionaid: 2013)

Vinayak shriram Irpate, *Sociology of Tribal Society* (New Delhi: Agri-Bio vet press: 2014)

ಅಧ್ಯಾಯ – ೩

# ಚಪ್ಪರ್‌ಬಂದರ ಹಿನ್ನೆಲೆ ಹಾಗೂ ಭೌಗೋಳಿಕ ಸ್ವರೂಪ ಮತ್ತು ಜನಸಂಖ್ಯೆ

ಚಪ್ಪರ್‌ಬಂದರ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

ಚಪ್ಪರ್‌ಬಂದ್ ಪದದ ಅರ್ಥ

ಚಪ್ಪರ್‌ಬಂದರ ಭೌಗೋಳಿಕ ಸ್ವರೂಪ ಮತ್ತು ಜನಸಂಖ್ಯೆ

## ಅಧ್ಯಾಯ ಮೂರು

# ಚಪ್ಪರ್‌ಬಂದ್‌ರ ಹಿನ್ನೆಲೆ ಹಾಗೂ ಭೌಗೋಳಿಕ ಸ್ವರೂಪ ಮತ್ತು ಜನಸಂಖ್ಯೆ

### ಚಪ್ಪರ್‌ಬಂದ್‌ರ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

ಚಪ್ಪರ್‌ಬಂದ್ ಒಂದು ಅಲೆಮಾರಿ ಬುಡಕಟ್ಟು ಸಮುದಾಯವಾಗಿತ್ತು. ಬ್ರಿಟಿಷ್ ಸರ್ಕಾರ ಈ ಸಮುದಾಯವನ್ನು 'ಅಪರಾಧಿ ಬುಡಕಟ್ಟು' ಎಂದು ಗುರುತಿಸಿ, ಸೆಟ್ಲ್‌ಮೆಂಟ್‌ಗಳಲ್ಲಿ ಇರಿಸಿತ್ತು. ಭಾರತ ಸ್ವತಂತ್ರಗೊಂಡ ನಂತರ ಇಂತಹ ಅನೇಕ ಅಪರಾಧಿ ಬುಡಕಟ್ಟುಗಳನ್ನು ವಿಮುಕ್ತ ಬುಡಕಟ್ಟುಗಳೆಂದು ಗುರುತಿಸಲಾಯಿತು. ೧೮೭೧ ರಿಂದ ೧೯೪೮ರ ವರೆಗೆ ಜಾರಿಯಲ್ಲಿದ್ದ ಅಪರಾಧಿ ಬುಡಕಟ್ಟು ಕಾಯ್ದೆಗಳನ್ನು, ಭಾರತ ಸ್ವತಂತ್ರಗೊಂಡ ನಂತರ ೧೯೫೨ರಲ್ಲಿ ರದ್ದುಗೊಳಿಸಲಾಯಿತು. ನಂತರ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಆ ಎಲ್ಲಾ ಸಮುದಾಯಗಳನ್ನು ಬಂಧನದಿಂದ ಮುಕ್ತಗೊಳಿಸಲಾಯಿತು. ಈ ರೀತಿಯಾಗಿ ಅಮಾನುಷ ವ್ಯವಸ್ಥೆಯ ಕಟ್ಟುಪಾಡುಗಳಿಂದ ಮುಕ್ತವಾದ ಬುಡಕಟ್ಟುಗಳನ್ನು ೧೯೫೧ರ ತರುವಾಯ 'ವಿಮುಕ್ತ ಬುಡಕಟ್ಟು'ಗಳೆಂದು ಗುರುತಿಸಲಾಯಿತು. ಕರ್ನಾಟಕದಲ್ಲಿ ಇಂತಹ ಅನೇಕ ವಿಮುಕ್ತ ಬುಡಕಟ್ಟುಗಳಿವೆ. ಅವುಗಳಲ್ಲಿ 'ಚಪ್ಪರ್‌ಬಂದ್' ಸಹ ಒಂದು. ಈ ಸಮುದಾಯದವರು ಕರ್ನಾಟಕದಲ್ಲಿ ಗದಗ, ಹುಬ್ಬಳ್ಳಿ, ಧಾರವಾಡ ಮತ್ತು ದಾವಣಗೆರೆ ನಗರಗಳಲ್ಲಿ ಹಾಗೂ ಬಾಗಲಕೋಟೆ ಮತ್ತು ವಿಜಯಪುರ ಜಿಲ್ಲೆಗಳಲ್ಲಿ ಕಾಣಸಿಗುತ್ತಾರೆ.

ಚಪ್ಪರ್‌ಬಂದ್ ಸಮುದಾಯ ಬುಡಕಟ್ಟು ಮೂಲವನ್ನು ಹೊಂದಿದ್ದು, ಇತರೆ ಸಮುದಾಯಗಳ ಮತ್ತು ಇಸ್ಲಾಂ ಎರಡರ ಸಮ್ಮಿಶ್ರ ಸಂಸ್ಕೃತಿಯನ್ನು ಹೊಂದಿದೆ. ಇವರ ಹಿನ್ನೆಲೆಯ ಬಗ್ಗೆ ಗೊಂದಲಗಳಿರುವುದು ಕಂಡುಬರುತ್ತದೆ. ಆದಾಗ್ಯೂ ಮೂಲತಃ ಇದೊಂದು ಬುಡಕಟ್ಟು

ಮೂಲವನ್ನು ಹೊಂದಿದ್ದು, ನಂತರ ದಿನಗಳಲ್ಲಿ ಇತರೆ ಧರ್ಮಗಳ ಪ್ರಭಾಕ್ಕೊಳಗಾಗಿರಬಹುದು. ಈ ಸಮುದಾಯದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಈ ಮುಂದಿನಂತೆ ಗುರುತಿಸಲಾಗಿದೆ.

**ಚಪ್ಪರ್‌ಬಂದ್ ಪದದ ಅರ್ಥ**

ಚಪ್ಪರ್‌ಬಂದ್ ಪದಕ್ಕೆ ವಿವಿಧ ಅಧ್ಯಯನಕಾರರು ವಿವಿಧ ಅರ್ಥಗಳನ್ನು ತಿಳಿಸಿದ್ದಾರೆ.

ಚಪ್ಪರ್‌ಬಂದರ ಮೂಲತಃ ಒಂದು ಬುಡಕಟ್ಟು ಮೂಲದವರು, ಆದರೆ ಕಾರಣಾಂತರಗಳಿಂದಾಗಿ, ಇವರು 'ಡೇರೆ' ಹಾಕುವ ಕೆಲಸದಲ್ಲಿ ನಿರತರಾದ್ದರಿಂದ ಇವರು ಚಪ್ಪರ್‌ಬಂದ್ ಎಂಬ ಹೆಸರಿನಿಂದ ಕರೆಯಲ್ಪಟ್ಟರು.

'ಚಪ್ಪರ್‌ಬಂದ್' ಎಂಬ ಪದ ಹಿಂದಿ ಭಾಷೆಯ 'ಚಪ್ಪರ್' ಮತ್ತು 'ಬಂದ್' ಎಂಬ ಎರಡು ಪದಗಳಿಂದ ಬಂದದ್ದಾಗಿದ್ದು, ಇದರ ಅರ್ಥ 'ಚಪ್ಪರ್' ಎಂದರೆ 'ಮೇಲ್ಛಾವಣಿ (ಹೊದಿಕೆ)' ಹಾಗೂ 'ಬಂದ್' ಎಂದರೆ 'ಕಟ್ಟುವುದು/ಹಾಕುವುದು' ಎಂದಾಗುತ್ತದೆ. ಆದ್ದರಿಂದ ಇವರನ್ನು ಮೇಲ್ಛಾವಣಿ ಕಟ್ಟುವವರೆಂದು ಕರೆಯಲಾಗುತ್ತದೆ (ಹುದ್ದಾರ್ ಎಂ ಜಿ: ೧೯೯೫: ೪೭).

ಲಹರಿ ತಿಳಿಸಿರುವಂತೆ, "೧೭ನೇ ಶತಮಾನದಲ್ಲಿ ಮೊಘಲರು ದಕ್ಷಿಣ ಭಾರತವನ್ನು ಆಕ್ರಮಿಸಿಕೊಂಡ ನಂತರ, ಮೊದಲ ಬಾರಿಗೆ ಈ ಸಮುದಾಯವನ್ನು ಬಾಂಬೆ ಪ್ರೆಸಿಡೆನ್ಸಿಯಲ್ಲಿ ಮೊಘಲ್ ಸೈನ್ಯದ ಶಿಬಿರಗಳನ್ನು ಕಟ್ಟುವ ಕೆಲಸದಲ್ಲಿ ತೊಡಗಿಸುತ್ತಾರೆ. ಅಂದಿನಿಂದ ಈ ಸಮುದಾಯ 'ಚಪ್ಪರ್‌ಬಂದ್' ಹೆಸರಿನಿಂದ ಗುರುತಿಸಲ್ಪಡುತ್ತದೆ" (ಅದೇ:೪೭).

'ಚಪ್ಪರ್‌ಬಂದ್ ಎನ್ನುವ ಹೆಸರು 'ಛಾಪ್' ಎಂಬ ಪದದಿಂದ ಬಂದಿರಬೇಕು. 'ಛಾಪ್' ಎಂದರೆ 'ಮುದ್ರಿಸು' ಎಂದರ್ಥ. ಇವರು ಈ ಹಿಂದೆ ನಾಣ್ಯಗಳನ್ನು ತಯಾರಿಸುತ್ತಿದ್ದರೆಂಬ ನಂಬಿಕೆ ಇದೆ' (ಥರ್ಸ್ಟನ್:೨೦೧೪:೮).

ಪಾಪರಾವ್ ನಾಯ್ಡು ಎಂ ತಿಳಿಸಿರುವಂತೆ, ''Chapparbands, as their name implies, are by profession builders of roofs, or in a more general term, builders of huts. They are Sheikh Muhammadans, and originally belonged to the Punjab. During the Moghul invasion of the Carnatic, as for back as 1687-88, a large number of them followed the Moghul army to Aurangabad, Ahmednagar, and Seringapatam until the year 1714, when Bijapur passed into the hands of the Peshwas. The Chapparbands then formed part of the Peshwa's army in the same capacity, and remained as such till the advent of the British in the year 1818, when it would apper a majority of them,

finding their peculiar profession not much in demand, returned to the north. A part of those who remained behind passed into Nizam's territory, while a part settled down in the Province of Talikota" (ಅದೇ:೧೦).

'ಚಪ್ಪರ್‌ಬಂದ್ ಎಂದರೆ ಗುಡಾರಗಳನ್ನು ಹಾಕುವವರು, ಈ ವೃತ್ತಿಯಿಂದಾಗಿ ಇವರಿಗೆ ಈ ಹೆಸರು ಬಂದಿದೆ. ಜೊತೆಗೆ ನಾಣ್ಯಗಳನ್ನು ತಯಾರಿಸುತ್ತಿದ್ದರು' (ಎಂಥೋವನ್:೧೯೯೦:೨೮೬).

ಚಪ್ಪರ್‌ಬಂದ್ ಸಮುದಾಯದ ಹಿರಿಯರು ತಿಳಿಸಿದಂತೆ, ಇವರ ಹಿರಿಯರು ಬಿಹಾರದ 'ಚಪ್ರ/ಚಪ್ಪರ್' ಎಂಬ ಹಳ್ಳಿಯಿಂದ ಬಂದಿದ್ದರಿಂದ ಇವರನ್ನು 'ಚಪ್ಪರ್‌ಬಂದ್' ಎಂಬ ಹೆಸರಿಂದ ಗುರುತಿಸಲಾಯಿತು. ಈ ಹಳ್ಳಿ ಬಿಹಾರದ 'ಸಾರನ್' ಜಿಲ್ಲೆಯಲ್ಲಿ ಕಂಡುಬರುತ್ತದೆ.

ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ತಿಳಿಸಿದಂತೆ, ಇವರು ತುಂಬಾ ಚಾಣಾಕ್ಷರಾಗಿದ್ದರಿಂದ, 'ಚತುರ ಬಂಧು' ಕಾಲಕ್ರಮೇಣವಾಗಿ 'ಚಪ್ಪರ್‌ಬಂದ್' ಎಂದು ಮಾರ್ಪಾಡಾಗಿರಬಹುದು.

ಮೇಲಿನ ಎಲ್ಲಾ ಹೇಳಿಕೆಗಳಿಂದ ತಿಳಿದುಬರುವುದೇನೆಂದರೆ, ಇವರು ಡೇರೆ ಅಥವಾ ಮೇಲ್ಛಾವಣಿ ಹಾಕುವ ವೃತ್ತಿಯಲ್ಲಿ ನಿರತರಾಗಿದ್ದರಿಂದ ಈ ಸಮುದಾಯಕ್ಕೆ ಚಪ್ಪರ್‌ಬಂದ್ ಎಂಬ ಹೆಸರು ಬಂದಿದೆ.

**ಚಪ್ಪರ್‌ಬಂದ್ ವಿಮುಕ್ತ ಬುಡಕಟ್ಟಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ**

ಮೂಲತಃ ಇವರು ಅಲೆಮಾರಿ ಬುಡಕಟ್ಟಿಗೆ ಸೇರಿದವರು. ಇವರ ಹಿನ್ನೆಲೆಯ ಬಗ್ಗೆ ಅನೇಕ ರೀತಿಯ ಭಿನ್ನಾಭಿಪ್ರಾಯಗಳಿವೆ. ಕೆಲವರು ಇವರು ಮೂಲತಃ ಹಿಂದೂಗಳಾಗಿದ್ದು, ನಂತರ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವರೆಂದು ಹೇಳಿದರೆ, ಇನ್ನೂ ಕೆಲವರು ಇವರು ಮೂಲತಹಃ ಇಸ್ಲಾಮಿಗಳೇ ಎಂದು ಹೇಳುತ್ತಾರೆ. ನನಗೆ ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ಹೇಳಿದ ಪ್ರಕಾರ, ಇವರು ಮೂಲತಃ ಇಸ್ಲಾಮಿಗಳೇ ಆಗಿದ್ದು, ಇವರು ಅಫ್‌ಘಾನ್ ದೇಶದಿಂದ ಬಾಬರ್‌ನೊಂದಿಗೆ ಸೈನ್ಯದಲ್ಲಿ ಗುಡಾರಗಳನ್ನು ಹಾಕಲು ಭಾರತಕ್ಕೆ ಬಂದಿದ್ದರು. ಇದು ಒಂದು ವೇಳೆ ನಿಜ ಆಗಿರಲೂಬಹುದು. ಅಫ್‌ಘಾನ್ ದೇಶದಲ್ಲಿ ಯಾವುದೋ ಒಂದು ಅಲೆಮಾರಿ ಬುಡಕಟ್ಟಿಗೆ ಇವರು ಸೇರಿರಬಹುದು. ನಂತರ ಇಲ್ಲಿ ಬಂದ ಮೇಲೆ ಇವರ ವೃತ್ತಿಯನ್ನು ಆಧಾರಿಸಿ ಇವರಿಗೆ 'ಚಪ್ಪರ್‌ಬಂದ್' ಹೆಸರು ಬಂದಿರಬಹುದು. ಹಾಗಾಗಿ ಇದು ಮೂಲತಃ ಒಂದು ಅಲೆಮಾರಿ ಬುಡಕಟ್ಟು ಸಮುದಾಯವೇ ಆಗಿತ್ತು ಎಂದು ಹೇಳಬಹುದು.

ಚಪ್ಪರ್‌ಬಂದ್ ಸಮುದಾಯದ ಹಿನ್ನೆಲೆಯನ್ನು ಕುರಿತು ಅಧ್ಯಯನಕಾರರಲ್ಲಿ ಭಿನ್ನಾಭಿಪ್ರಾಯ ಗಳನ್ನು ಕಾಣಬಹುದು.

'ಚಪ್ಪರ್‌ಬಂದರು ಮೂಲತಃ ಶೇಖ್ ಮೊಹಮ್ಮದರಾಗಿದ್ದು, ಇವರು ಪಂಜಾಬ್ ಮೂಲದಿಂದ ಬಂದವರು' (ಕೆನಡಿ ಎಂ:೧೯೦೮:೪೯).

ಮುಂಬಯಿ ಗೆಝೇಟಿಯರ್‌ನಲ್ಲಿ ತಿಳಿಸಿದಂತೆ, ಇವರು ಗುಜರಾತ್‌ದಿಂದ ವಲಸೆ ಬಂದು ಬಿಜಾಪುರದಲ್ಲಿ ನೆಲೆಸಿದರು. ಇವರ ಹಿಂದುಸ್ಥಾನಿ ಭಾಷೆಯಲ್ಲಿ ಗುಜರಾತೀ ಶಬ್ದಗಳು ಬರುತ್ತವೆ.



'ಇವರು ರಜಪೂತ ಮೂಲದವರಾಗಿದ್ದು, ಭಾರತದ ಮೇಲ್ಭಾಗದಿಂದ ಬಂದವರಾಗಿದ್ದು, ಮನೆಯಲ್ಲಿ ಹಿಂದುಸ್ಥಾನಿ ಭಾಷೆಯನ್ನು ಮಾತನಾಡುತ್ತಾರೆ. ಅಲ್ಲದೇ ಭಾರತದ ಮೇಲ್ಭಾಗದ ಬ್ರಾಹ್ಮಣರನ್ನು ತಮ್ಮ ಪುರೋಹಿತರನ್ನಾಗಿಸಿಕೊಂಡವರಾಗಿದ್ದಾರೆ' (ಎಂಥೋವನ್:೧೯೯೦:೨೮೬).

'ಇವರು ಬಿಹಾರದ 'ಚಪ್ರ' ಎಂಬ ಹಳ್ಳಿಯಿಂದ ಬಂದಿರುವುದರಿಂದ ಇವರನ್ನು ಚಪ್ಪರ್‌ಬಂದ್ ಎಂದು ಕರೆಯಲಾಗುತ್ತದೆ' (ಸಿಂಗ್ ಕೆ ಎಸ್:೨೦೦೩:೩೭೧).

'ಚಪ್ಪರ್‌ಬಂದರು ಬಿಜಾಪುರ ಜಿಲ್ಲೆಯಲ್ಲಿ ೧೭ನೇ ಶತಮಾನದಲ್ಲಿ ಮೊಗಲ್ ಸೈನಿಕರಿಗೆ ಡೇರೆಗಳನ್ನು ಹಾಕುವ ಕೆಲಸಕ್ಕಾಗಿ, ವಲಸೆ ಬಂದವರಾಗಿದ್ದಾರೆ' (ಗೆಯರ್:೧೯೦೬:೯೩).

ಈಟನ್ ಪ್ರಕಾರ, 'ಚಪ್ಪರ್‌ಬಂದರು ಗುಜರಾತ್ ದಿಂದ ೧೬ ಮತ್ತು ೧೭ನೇ ಶತಮಾನದಲ್ಲಿ ಬಂದವರಾಗಿದ್ದು, ಹಿಂದೂ ಧರ್ಮದಿಂದ ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದವರಾಗಿದ್ದಾರೆ' (ಹುದ್ದಾರ್ ಎಂ ಜಿ:೧೯೯೫:೪೬).



ಎಡ್ವರ್ಡ್ಸ್ ಪ್ರಕಾರ, 'ಚಪ್ಪರ್‌ಬಂದರು ಒಂದು ಉತ್ಸಾಹ ಭರಿತ ಗುಂಪಾಗಿದ್ದು, ಮೊಹಮ್ಮದ್ ಸೈನ್ಯದ ಸೈನಿಕರಿಗೆ ಗುಡಿಸಲನ್ನು ಹಾಕುವ ಕೆಲಸದಲ್ಲಿ ನಿರತರಾಗಿದ್ದವರು' (ಅದೇ:೪೭).

'ಇವರು ಖೊಟ್ಟಿ (ನಕಲಿ) ನಾಣ್ಯವನ್ನು ತಯಾರಿಸುವುದು ಹಾಗೂ ಅದರ ಚಲಾವಣೆಯಲ್ಲಿ ನಿರತರಾಗಿದ್ದವರಿಂದ ಅಪರಾಧ ಲೋಕದಲ್ಲಿ ಇವರನ್ನು 'ಖುಲ ಸೂರ್ಯರು'(ನಕಲಿ ನಾಣ್ಯ ತಯಾರಕರು)' ಎಂದು ಕರೆಯಲಾಗುತ್ತಿತ್ತು' (ಥರ್ಸ್ಟನ್:೨೦೧೪:೮).

ಚಿಂತಕರ ಎಲ್ಲಾ ಅಭಿಪ್ರಾಯಗಳು ಅವರ ಹಿನ್ನೆಲೆಯ ಬಗ್ಗೆ ಗೊಂದಲವನ್ನುಂಟು ಮಾಡುತ್ತವೆ. ಕೆಲ ಅಧ್ಯಯನಕಾರರು ಇವರು ಮೂಲತಃ ಹಿಂದೂ ಧರ್ಮದವರು, ನಂತರ ಮುಸ್ಲಿಂ ರಾಜರ ಪ್ರಭಾಕ್ಕೊಳಗಾಗಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವರೆಂದು ಹೇಳುತ್ತಾರೆ. ಆದರೆ ಯಾವುದೇ ಹೇಳಿಕೆಯನ್ನು ಇಷ್ಟು ಸುಲಭವಾಗಿ ಒಪ್ಪಲು ಸಾಧ್ಯವಿಲ್ಲ. ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ಹೇಳಿದಂತೆ, ಇವರು ಭಾರತಕ್ಕೆ ಬಾಬರ್‌ನೊಂದಿಗೆ ಬಾಬರ್ ಸೈನ್ಯಕ್ಕೆ ಶಿಬಿರ ನಿರ್ಮಿಸುವ ಕೆಲಸಕ್ಕೆ ಬಂದಿದ್ದರು. ಅಂದ ಮೇಲೆ ಇವರು ಅಫ್‌ಘಾನ್ ದೇಶಕ್ಕೆ ಸೇರಿದ ಯಾವುದೋ ಒಂದು ಬುಡಕಟ್ಟಿಗೆ ಸೇರಿರಬಹುದು, ಭಾರತಕ್ಕೆ ಬಂದ ನಂತರ, ಬಾಬರ್

ಅವನತಿಯ ನಂತರ ಇವರು ಆಶ್ರಯ ಕಳೆದುಕೊಂಡು ಅತಂತ್ರ ಸ್ಥಿತಿಯಲ್ಲಿದ್ದಾಗ, ಇವರು ಮತ್ತೆ ಬೇರೆ ರಾಜರ ಸೈನ್ಯದಲ್ಲಿ ಶಿಬಿರಗಳನ್ನು ಹಾಕುವ ಕೆಲಸದಲ್ಲಿ ಸೇರಿದರು. ಇಲ್ಲಿನ ಹಿಂದೂಗಳ ಜೊತೆಯಲ್ಲಿದ್ದು ಅವರ ಆಚರಣೆಗಳನ್ನು, ಸಂಪ್ರದಾಯಗಳನ್ನು ಅಳವಡಿಸಿಕೊಂಡು ಅವರೊಂದಿಗೆ ಜೀವಿಸತೊಡಗಿದರು. ಮೊದಲು ಇವರು ದೆಹಲಿಯ ಸುತ್ತ-ಮುತ್ತ, ಬಿಹಾರ, ಪಂಜಾಬ್ ಹಾಗೂ ಗುಜರಾತ್‌ನಲ್ಲಿ ನೆಲೆಸಿದ್ದರು. ನಂತರ ಮಹಾರಾಷ್ಟ್ರಕ್ಕೆ ವಲಸೆ ಬಂದರು. ತದನಂತರ ಆದಿಲ್ ಶಾಹಿಯ ಸೈನ್ಯಕ್ಕೆ ಗುಡಾರಗಳನ್ನು ನಿರ್ಮಿಸುವ ಕೆಲಸದೊಂದಿಗೆ, ಕರ್ನಾಟಕದ ವಿಜಯಪುರಕ್ಕೆ ವಲಸೆ ಬಂದರು. ಮತ್ತೆ ಅಲ್ಲಿಂದ ಬಾಗಲಕೋಟೆ, ಧಾರವಾಡ, ಹುಬ್ಬಳ್ಳಿ, ಗದಗ ನಗರಗಳಿಗೆ ಬಂದು ನೆಲೆಸಿದರು.

ಚಪ್ಪರ್‌ಬಂದ್ ಸಮುದಾಯದವರು ಭಾರತೀಯ ಇತರೆ ಸಮುದಾಯಗಳ ಮತ್ತು ಇಸ್ಲಾಂ ಎರಡರ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಆದರೆ ಚಪ್ಪರ್‌ಬಂದ್ ಸಮುದಾಯವು ಬುಡಕಟ್ಟು ಮೂಲವನ್ನು ಹೊಂದಿರುವ, ಇಸ್ಲಾಂ ಧರ್ಮದ ಒಂದು ಒಳ ಪಂಗಡವಾಗಿದೆ. ಈ ಸಮುದಾಯವನ್ನು ಬುಡಕಟ್ಟು ಮೂಲದ್ದು ಎಂದು ಹೇಳಲು, ನಾವು ಪ್ರಸ್ತುತದಲ್ಲೂ ಈ ಸಮುದಾಯದಲ್ಲಿ ಕೆಲ ಬುಡಕಟ್ಟು ಲಕ್ಷಣಗಳನ್ನ ಕಾಣುತ್ತೇವೆ. ಅವುಗಳೆಂದರೆ- ಈಗಲೂ ಇವರು ತಮ್ಮಲ್ಲಿ ಬೆಡಗು ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ, ಈಗಲೂ ಇವರಲ್ಲಿ ನಾವು ಪ್ರತ್ಯೇಕ ಭಾಷೆಯನ್ನು ಕಾಣತ್ತೇವೆ, ಸಜಾತಿಯ ಬೆಡಗುಗಳೊಂದಿಗೆ ಮತ್ತು ಸಜಾತಿಯ ಗುಂಪುಗಳ ನಡುವೆ ಈಗಲೂ ವಿವಾಹ ನಿಷಿದ್ಧವಿದೆ, ಇವರಲ್ಲಿ ಸರಳ ಜೀವನ ಶೈಲಿಯನ್ನು ಕಾಣುತ್ತೇವೆ, ಇವರದೇ ಆದ ನ್ಯಾಯ ಪದ್ಧತಿಯನ್ನು ಕಾಣುತ್ತೇವೆ. ಹಾಗಾಗಿ ಇದೊಂದು ಬುಡಕಟ್ಟು ಸಮುದಾಯವೇ ಆಗಿದೆ ಎಂದು ಹೇಳಬಹುದು. ಜೊತೆಗೆ ಇವರು ಇಸ್ಲಾಂ ಧರ್ಮದವರೇ ಎಂದು ಸಹ ಹೇಳಬಹುದು. ಇವರು ಇಸ್ಲಾಂ ಧರ್ಮದ ಆಚರಣೆಗಳನ್ನು, ಸಂಪ್ರದಾಯಗಳನ್ನು ಕಡ್ಡಾಯವಾಗಿ ಪಾಲಿಸುತ್ತಿದ್ದಾರೆ. ಇಸ್ಲಾಂ ಧರ್ಮದಲ್ಲಿ ಪ್ರತಿಯೊಬ್ಬರು ಕಡ್ಡಾಯವಾಗಿ ೫ ಕರ್ತವ್ಯಗಳನ್ನು ಪಾಲಿಸಬೇಕಾಗುತ್ತದೆ. ಈ ೫ ತತ್ವಗಳ ಮೇಲೆಯೆ ಇಸ್ಲಾಂ ಧರ್ಮ ನಿಂತಿದೆ ಎನ್ನಬಹುದು. ಅವು-

೧. ಅಲ್ಲಾಹ್‌ನ ಮೇಲೆ ನಂಬಿಕೆ ಇಡುವುದು.

೨. ದಿನಾಲೂ ೫ ವೇಳೆ ನಮಾಜ್ ಮಾಡುವುದು, ಖುರಾನ್ ಓದುವುದು.

೩. ರಂಜಾನ್ ತಿಂಗಳಲ್ಲಿ ರೋಜಾ(ಉಪವಾಸ) ಇರುವುದು.

೪. ಝುಕಾತ್ (ದಾನ) ನೀಡುವುದು.

೫. ಹಜ್ (ಮಕ್ಕಾ-ಮದೀನ ಯಾತ್ರೆ) ಮಾಡುವುದು (ಬ್ರಾಡ್ಲೆ ಕೆ ಹಾಕಿನ್ಸ್:೨೦೦೪:೬೭).

ಮೇಲಿನ ತತ್ವಗಳಲ್ಲಿ ಚಪ್ಪರ್‌ಬಂದ್ ಸಮುದಾಯದವರು ತಮ್ಮ ಕೈಲಾದವುಗಳನ್ನು ಕಡ್ಡಾಯವಾಗಿ ಪಾಲಿಸುತ್ತಾ ಬರುತ್ತಿದ್ದಾರೆ. ಹಾಗಾಗಿ ಇವರು ಇಸ್ಲಾಂ ಧರ್ಮಕ್ಕೆ ಸೇರುತ್ತಾರೆ.

ಚಪ್ಪರ್‌ಬಂದರು ಮೊದಲು ಸೈನ್ಯದಲ್ಲಿ ಸೈನಿಕ ಶಿಬಿರಗಳನ್ನು ಹಾಕುವ ಕೆಲಸದಲ್ಲಿ ನಿರತರಾಗಿದ್ದರು. ಜೊತೆಗೆ ಇವರು ರಾಜನ ಟಂಕಸಾಲೆಯಲ್ಲಿ ಸಹ ಕೆಲಸದಲ್ಲಿದ್ದಿರಬಹುದು. ಹಾಗಾಗಿ ಇವರಿಗೆ ನಾಣ್ಯ ತಯಾರಿಕೆ ಸಹ ತಿಳಿದಿತ್ತು. ಬ್ರಿಟಿಷರ ಆಗಮನದ ನಂತರ ಯುದ್ಧಗಳು ಕೊನೆಗೊಂಡು ಭಾರತೀಯ ರಾಜರು ಅವನತಿ ಹೊಂದಿದ ನಂತರ, ಇವರು ಆಶ್ರಯ ರಹಿತರಾಗಿ ದೇಶದ ತುಂಬೆಲ್ಲಾ ಅಲೆದಾಡತೊಡಗಿದರು.

'ಒಂದು ನೂರು ವರ್ಷಗಳ ಹಿಂದೆ ಯುದ್ಧಗಳು ಕೊನೆಗೊಂಡಾಗ, ಚಪ್ಪರ್‌ಬಂದರು ಚಡಪಡಿಸುತ್ತಾ ದೇಶದ ತುಂಬೆಲ್ಲಾ ಸಣ್ಣ ವ್ಯಾಪಾರಸ್ಥರಾಗಿ, ಕಪಟ ಸಾಧುಗಳಾಗಿ, ಕೊನೆಗೆ ಖೊಟ್ಟಿ(ನಕಲಿ) ನಾಣ್ಯ ತಯಾರಿಕೆಯಲ್ಲಿ ತೊಡಗಿದರು' (ಗೆಯರ್:೨೦೧೪:೧೦೫).

ಕ್ಷೇತ್ರಕಾರ್ಯದಲ್ಲಿ ವಕ್ತೃ ಒಬ್ಬರು ಹೇಳಿದಂತೆ, 'ಇವರು ರಾಜನಿಗೆ ಗುಪ್ತಚರರಾಗಿಯೂ ಸಹ ಕೆಲಸ ಮಾಡುತ್ತಿದ್ದರು. ರಾಜನ ಗುಪ್ತಚರರಾಗಿ ದೇಶದ ತುಂಬೆಲ್ಲಾ ಹರಡಿ, ರಾಜನಿಗೆ ಮಾಹಿತಿ ಒದಗಿಸಿಕೊಡುತ್ತಿದ್ದರು. ಜೊತೆಗೆ ಸೈನ್ಯದಲ್ಲಿ ಶಿಬಿರಗಳನ್ನು ಹಾಕುವುದು, ಪ್ರಾಣಿಗಳನ್ನು ನೋಡಿಕೊಳ್ಳುವುದು ಮಾಡುತ್ತಿದ್ದರು. ಹಾಗೂ ರಾಜನ ಟಂಕಸಾಲೆಯಲ್ಲಿಯೂ ಸಹ ಕೆಲಸದಲ್ಲಿದ್ದರು. ಹಾಗಾಗಿ ಇವರಿಗೆ ನಾಣ್ಯ ತಯಾರಿಕೆ ಸಹ ತಿಳಿದಿತ್ತು. ಬ್ರಿಟಿಷರ ಆಗಮನದ ನಂತರ ರಾಜಾಶ್ರಯವನ್ನು ಕಳೆದುಕೊಂಡ ಇವರು ಬ್ರಿಟಿಷರ ವಿರುದ್ಧ ಸಿಡಿದೆದ್ದರು. ಬ್ರಿಟಿಷರಿಗೆ ನಷ್ಟವುಂಟು ಮಾಡುವ ಸಲುವಾಗಿಯೇ ಇವರು ನಕಲಿ ನಾಣ್ಯಗಳನ್ನು ತಯಾರಿಸಿ ಚಲಾವಣೆ ಮಾಡಲು ಆರಂಭಿಸಿದರು. ಇದರಿಂದಾಗಿ ಬ್ರಿಟಿಷರಿಗೆ ಇವರು ತಲೆನೋವಾಗಿ ಪರಿಣಮಿಸಿದರು. ಬ್ರಿಟಿಷರ ಯಾವುದೇ ಹೆದರಿಕೆಗೆ ಇವರು ಹೆದರಲಿಲ್ಲ'. ಹೀಗೆ ಬ್ರಿಟಿಷರ ಯಾವುದೇ ಬೆದರಿಕೆಗೂ ಹೇದರರದೇ ಇದ್ದ ಇಂತಹ ಅನೇಕ ಅನೇಕ ಸಮುದಾಯಗಳನ್ನು ನಿಯಂತ್ರಿಸಲೆಂದೇ ಬ್ರಿಟಿಷರು ೧೮೭೧ರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಜಾರಿಗೆ ತಂದು, ಅದರಡಿಯಲ್ಲಿ ಇಂತಹ ಅನೇಕ ಬುಡಕಟ್ಟುಗಳನ್ನು ಸೆಟ್ಲ್‌ಮೆಂಟ್‌ಗಳಲ್ಲಿ ಬಂಧಿಸಿ, ನಿಯಂತ್ರಿಸಲು ಶುರು ಮಾಡಿದರು.

'ನಕಲಿ ನಾಣ್ಯ ತಯಾರಿಸಿ, ತಮಗೆ ತೊಂದರೆಯಾಗಿ ಪರಿಣಮಿಸಿದ ಚಪ್ಪರ್‌ಬಂದ್ ಸಮುದಾಯವನ್ನು ಬ್ರಿಟಿಷ್ ಸರ್ಕಾರ 'ಅಪರಾಧಿ ಬುಡಕಟ್ಟು' ಎಂದು ೧೮೯೭ರಲ್ಲಿ ಘೋಷಿಸಿತು' (ಹುದ್ದಾರ್ ಎಂ ಜಿ:೧೯೫೫:೪೯). 'ಬಾಂಬೆ ಪ್ರಾಂತ್ಯದಲ್ಲಿ 'ಅಪರಾಧಿ ಬುಡಕಟ್ಟು' ಎಂದು ಘೋಷಿಸಿ ಸೆಟ್ಲ್‌ಮೆಂಟ್/ವಸಾಹತುವಿನಲ್ಲಿರಿಸಿದ ಮೊದಲ ಬುಡಕಟ್ಟು ಎಂದರೆ ಚಪ್ಪರ್‌ಬಂದ್ ಆಗಿದೆ' (ಅದೇ: ೪೯).

'ಚಪ್ಪರ್‌ಬಂದರನ್ನು ನ್ಯಾಯಿಕ ಇಲಾಖೆಯು ಆದೇಶ ಸಂ:೫೫೧೮, ದಿನಾಂಕ ೧೮-೮-೧೯೧೬ರಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಮೊದಲ ಬಾರಿಗೆ ಅಪರಾಧಿ ಬುಡಕಟ್ಟೆಂದು ಘೋಷಿಸಿತು. ತರುವಾಯ ಗೃಹ ಇಲಾಖೆಯ ಆದೇಶ ಸಂ:೪೫೮೩/೨ ದಿನಾಂಕ ೧೬ ಫೆಬ್ರವರಿ ೧೯೨೪ರಂತೆ ಇಡೀ ಪ್ರಾಂತ್ಯಕ್ಕೆ ಮೇಲಿನ ಕಾಯ್ದೆಯನ್ನು ವಿಸ್ತರಿಸಿ ಆದೇಶ ಹೊರಡಿಸಲಾಯಿತು' (ಮಲ್ಲಿಕಾರ್ಜುನ ಬಿ ಮಾನ್ವಡೆ:೨೦೧೪:೩೨).

ಹೀಗೆ ಬ್ರಿಟಿಷ್ ಸರ್ಕಾರ ಚಪ್ಪರ್‌ಬಂದ್ ಸಮುದಾಯವನ್ನು 'ಅಪರಾಧಿ ಬುಡಕಟ್ಟು' ಎಂದು ಘೋಷಿಸಿ, ಕರ್ನಾಟಕದ ವಿಜಯಪುರ, ಬಾಗಲಕೋಟೆ, ಹುಬ್ಬಳ್ಳಿ ಮತ್ತು ಗದಗ ಸೆಟ್ಲ್‌ಮೆಂಟ್‌ಗಳಲ್ಲಿ ಬಂಧಿಸಿ, ನಿಯಮಾನುಸಾರ ಕಟ್ಟಳೆಗಳನ್ನು ವಿಧಿಸಿ, ಅವರನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿತು. ಸ್ವತಂತ್ರವಾಗಿ ಬದುಕುತ್ತಿದ್ದ ಈ ಸಮುದಾಯ ಈ ರೀತಿಯಲ್ಲಿ ಬ್ರಿಟಿಷರ ಅಧಿನಕ್ಕೊಳಪಟ್ಟು ಅನೇಕ ತೊಂದರೆಗಳನ್ನು ಅನುಭವಿಸಿತು. ೧೯೫೨ರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆ ರದ್ದುಗೊಂಡ ಮೇಲೆ ಆ ಕಾಯ್ದೆಯಲ್ಲಿದ್ದ ಎಲ್ಲಾ ಸಮುದಾಯಗಳು 'ವಿಮುಕ್ತ ಬುಡಕಟ್ಟು'ಗಳಾಗಿ ಕರೆಯಲ್ಪಟ್ಟವು. ಅಂದಿನಿಂದ ಆ ಎಲ್ಲಾ ಸಮುದಾಯಗಳಿಗೂ ಸಹ ಸಾಮಾನ್ಯ ಪ್ರಜೆಗಳಿಗಿರುವ ಹಕ್ಕು-ಸ್ವಾತಂತ್ರ್ಯಗಳನ್ನು ನೀಡಲಾಯಿತು. ಆ ಸಮುದಾಯಗಳಲ್ಲಿ 'ಚಪ್ಪರ್‌ಬಂದ್' ಸಹ ಒಂದು. ನಂತರ ಆ ಸೆಟ್ಲ್‌ಮೆಂಟ್‌ಗಳಿಂದ ಚಪ್ಪರ್‌ಬಂದ್ ಸಮುದಾಯದ ಕೆಲ ಜನರು ಧಾರವಾಡ, ಗೋವಾ, ಸೋಲಾಪುರಕ್ಕೆ ವಲಸೆ ಹೋಗಿ ನೆಲೆಸಲಾರಂಭಿಸಿದರು.

ಚಪ್ಪರ್‌ಬಂದರು ನಕಲಿ ನಾಣ್ಯವನ್ನು ತಯಾರಿಸಿ ಹಳ್ಳಿಗಳಲ್ಲಿ ಅವುಗಳನ್ನು ಚಲಾಯಿಸುತ್ತಿದ್ದರು. ಕೆಲವು ವೇಳೆ ಕಳ್ಳತನ ಮಾಡುವುದು, ಮಕ್ಕಳನ್ನು ಅಪಹರಿಸುವುದು ಸಹ ಮಾಡುತ್ತಿದ್ದರು ಎಂಬ ಆರೋಪಗಳು ಇವರ ಮೇಲಿವೆ. ಒಂದು ವೇಳೆ ನಿಜವಾಗಿಯೂ ಇವರು ನಕಲಿ ನಾಣ್ಯ ತಯಾರಿಸಿ ಚಲಾವಣೆ ಮಾಡಿದ್ದೇ ಆಗಿದ್ದರೆ ಇವರು ಆರ್ಥಿಕವಾಗಿ ಇಷ್ಟು ಹಿಂದುಳಿದಿರಲು ಸಾಧ್ಯವಿರುತ್ತಿರಲಿಲ್ಲ. ಇವರಿಗೆ ನಾಣ್ಯ ತಯಾರಿಸುವ ಕಲೆ ಗೊತ್ತಿದ್ದರಿಂದ ಇತರೆ ಪ್ರಬಲ ವ್ಯಕ್ತಿಗಳು, ರಾಜ ವಿರೋಧಿ ಗುಂಪು ಅಥವಾ ಅಧಿಕಾರಿಗಳು ಇವರ ಮೇಲೆ ನಾಣ್ಯ ತಯಾರಿಸುವಂತೆ ಒತ್ತಡ ಹೇರಿ ಅದರ ಲಾಭ ಪಡೆದಿದ್ದಿರಬಹುದು. ಕೆಲವು ವೇಳೆ ಅನಿವಾರ್ಯ ಕಾರಣಗಳಿಂದಾಗಿ ಹೊಟ್ಟೆ ತುಂಬಿಸಿಕೊಳ್ಳಲು ಸಣ್ಣ-ಪುಟ್ಟ ಕಳ್ಳತನ ಮಾಡಿರಲೂಬಹುದು? ಆದರೆ ಅದನ್ನೇ ಅವರ ವೃತ್ತಿ ಎನ್ನುವ ರೀತಿಯಲ್ಲಿ ಮೇಲ್ವರ್ಗದವರು, ಬ್ರಿಟಿಷರು, ಕೆಲ ಅಧ್ಯಯನಕಾರರು ಬಿಂಬಿಸಿದರು. ನಮ್ಮ ವ್ಯವಸ್ಥೆಯಲ್ಲಿ ಎಂಥೆಂತಹ ದೊಡ್ಡ ಅಪರಾಧಗಳನ್ನು, ವಂಚನೆಗಳನ್ನು ಮಾಡಿ ಸಿಕ್ಕಿಬಿದ್ದು, ನಂತರ ನಿರಪರಾಧಿಗಳೆಂದು ಹೊರಬಂದು ರಾಜಾರೋಷವಾಗಿ ಬದುಕುವವರಿದ್ದಾರೆ. ಆದರೆ ಎಂದೋ ತಿನ್ನಲು ಏನೂ ಇಲ್ಲದಿದ್ದಾಗ ಹೊಟ್ಟೆಪಾಡಿಗಾಗಿ ಮಾಡಿರುವ ಸಣ್ಣ-ಪುಟ್ಟ ತಪ್ಪುಗಳಿಂದ ಅಪರಾಧಿಯಾದ ಈ ಸಮುದಾಯ ಅಪರಾಧಿ

ಎಂಬ ಹಣೆಪಟ್ಟಿಯಿಂದ ಹೊರ ಬರಲು, ಸಾಮಾನ್ಯರಂತೆ ಸಮಾಜದಲ್ಲಿ ಜೀವನ ನಡೆಸಲು ಇನ್ನೂ ಸಾಧ್ಯವೇ ಆಗಿಲ್ಲ. ಏಕೆಂದರೆ ನಮ್ಮ ಈ ವ್ಯವಸ್ಥೆ ಈ ಎಲ್ಲಾ ಆರೋಪಗಳನ್ನು ಈ ಸಮುದಾಯದ ಮೇಲೆ ಬಲವಂತವಾಗಿ ಹೇರಿ, ಇವುಗಳನ್ನು ಈ ಸಮುದಾಯದವರು ಮಾನಸಿಕವಾಗಿ ಒಪ್ಪಿಕೊಳ್ಳುವಂತೆ ಒತ್ತಡ ಹೇರಿದೆ. ಎಂದೋ ತಮ್ಮ ಪೂರ್ವಜರು ಮಾಡಿದ ತಪ್ಪಿಗೆ ಸಮುದಾಯದ ಇಂದಿನ ಯುವ ಪೀಳಿಗೆ ಇಂದಿಗೂ ಶಿಕ್ಷೆ, ಕೀಳಿರಿಮೆ, ಅನುಮಾನ ಅನುಭವಿಸುತ್ತಾ ಬರುತ್ತಿದೆ.

ಸರ್ಕಾರ ಚಪ್ಪರ್‌ಬಂದ್ ವಿಮುಕ್ತ ಬುಡಕಟ್ಟನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಿದೆ. ಆದರೆ ಇವರು ತಮ್ಮನ್ನು ಎಸ್ ಟಿ ಪಟ್ಟಿಯಲ್ಲಿ ಸೇರಿಸುವಂತೆ ಹೋರಾಟ ಮಾಡುತ್ತಿದ್ದಾರೆ. ಈ ಸಮುದಾಯ ಪರಿಶಿಷ್ಟ ಬುಡಕಟ್ಟುಗಳು ಹೊಂದಿರಬೇಕಾದ ಲಕ್ಷಣಗಳನ್ನು ಹೊಂದಿದೆ. ಇತರೆ ವಿಮುಕ್ತ ಬುಡಕಟ್ಟುಗಳಿಗೆ ಹೋಲಿಸಿದರೆ ಇವರಿಗೆ ಯಾವುದೇ ರೀತಿಯ ಹೆಚ್ಚಿನ ಸೌಲಭ್ಯಗಳು ಸಿಗುತ್ತಿಲ್ಲದಿರುವುದನ್ನು ಕಾಣಬಹುದು. ಸರ್ಕಾರದಿಂದ ಇವರು ಕಡೆಗಣಿಸಲ್ಪಟ್ಟಿದ್ದಾರೆ. ಈ ಸಮುದಾಯ ತನ್ನ ಮೂಲ ಅಸ್ತಿತ್ವದೊಂದಿಗೇ, ಇಸ್ಲಾಂನ ಒಂದು ಒಳ ಪಂಗಡವಾಗಿದ್ದು ಕೊಂಡೇ, ತಮಗೆ ಸಿಗಬೇಕಾದ ಹಕ್ಕು-ಸೌಲಭ್ಯಗಳಿಗಾಗಿ ಹೋರಾಡುತ್ತಿರುವುದನ್ನು ಕಾಣಬಹುದಾಗಿದೆ. ಕರ್ನಾಟಕದಲ್ಲಿರುವ ವಿಮುಕ್ತ ಬುಡಕಟ್ಟುಗಳ ಬಗ್ಗೆ ಹಲವು ಅಧ್ಯಯನಗಳು ನಡೆದಿವೆ. ಆದರೆ ಕರ್ನಾಟಕದಲ್ಲಿರುವ ಚಪ್ಪರ್‌ಬಂದ್ ಸಮುದಾಯದ ಕುರಿತು ಅಂತಹ ಮಹತ್ವದ ಅಧ್ಯಯನಗಳು ನಡೆದಿಲ್ಲವೆನ್ನಬಹುದು. ಹಾಗಾಗಿ ಈ ಅಧ್ಯಯನ ಆ ನಿಟ್ಟಿನಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವೆಂದು ಹೇಳಬಹುದು.

**ಚಪ್ಪರ್‌ಬಂದ್ ಸಮುದಾಯದ ಭೌಗೋಳಿಕ ಸ್ವರೂಪ ಮತ್ತು ಜನಸಂಖ್ಯೆ**

ಈ ಅಧ್ಯಯನಕ್ಕೆ ಚಪ್ಪರ್‌ಬಂದ್ ಸಮುದಾಯದವರು ನೆಲೆಸಿರುವ ಸೆಟ್ಲ್‌ಮೆಂಟ್‌ಗಳನ್ನು ಮತ್ತು ಸೆಟ್ಲ್‌ಮೆಂಟ್ ಅಲ್ಲದ ಪ್ರದೇಶಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಕರ್ನಾಟಕದಲ್ಲಿ ಚಪ್ಪರ್‌ಬಂದ್ ಸಮುದಾಯದವರು ನೆಲೆಸಿರುವ ಸೆಟ್ಲ್‌ಮೆಂಟ್‌ಗಳು**

ಗದಗ ಸೆಟ್ಲ್‌ಮೆಂಟ್, ಹುಬ್ಬಳ್ಳಿ ಸೆಟ್ಲ್‌ಮೆಂಟ್, ವಿಜಯಪುರ ಸೆಟ್ಲ್‌ಮೆಂಟ್, ಬಾಗಲಕೋಟೆ ಸೆಟ್ಲ್‌ಮೆಂಟ್. ಇಲ್ಲಿನ ಎಲ್ಲಾ ಕುಟುಂಬಗಳನ್ನು ಸಮೀಕ್ಷೆ ಮಾಡಲಾಗಿದೆ.

**ಕರ್ನಾಟಕದಲ್ಲಿ ಚಪ್ಪರ್‌ಬಂದ್ ಸಮುದಾಯದವರು ನೆಲೆಸಿರುವ ಸೆಟ್ಲ್‌ಮೆಂಟ್ ಅಲ್ಲದ ಪ್ರದೇಶಗಳು**

ಧಾರವಾಡ ಮತ್ತು ದಾವಣಗೆರೆ ನಗರಗಳು. ಇಲ್ಲಿ ಕೆಲ ಕುಟುಂಬಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ಸಮೀಕ್ಷೆ ಮಾಡಲಾಗಿದೆ.

**ಕೋಷ್ಟಕ ೩.೧: ಚಪ್ಪರಬಂದ್ ಸಮುದಾಯದ ಪ್ರದೇಶವಾರು ಲಿಂಗವಾರು ಜನಸಂಖ್ಯೆ ಮತ್ತು ಲಿಂಗಾನುಪಾತ, ಕುಟುಂಬಗಾತ್ರ ಪ್ರಮಾಣ**

| ಕ್ರಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬ ಗಳು | ಜನಸಂಖ್ಯೆ | | | ಲಿಂಗಾನು ಪಾತ | ಕುಟುಂಬ ಗಾತ್ರ |
|---|---|---|---|---|---|---|---|---|---|
| | | | | | ಗಂಡು | ಹೆಣ್ಣು | ಒಟ್ಟು | | |
| ೧ | ಗದಗ | ಗದಗ | ಸೆಟ್ಲಮೆಂಟ್. | ೨೧೫ | ೩೯೪ | ೩೮೭ | ೭೮೧ | ೯೮೨ | ೩.೬೩ |
| ೨ | ದಾವಣಗೆರೆ | ದಾವಣಗೆರೆ | ಸರ್ ಮಿರ್ಜಾ ಇಸ್ಮಾಯಿಲ್ ನಗರ. | ೧೦ | ೨೨ | ೨೧ | ೪೩ | ೯೫೪ | ೪.೩ |
| ೩ | ಧಾರವಾಡ | ಧಾರವಾಡ | ಜನ್ನತ್ ನಗರ್. | ೪೮ | ೧೦೯ | ೧೧೬ | ೨೨೫ | ೧೦೬೪ | ೪.೬೮ |
| | | ಹುಬ್ಬಳ್ಳಿ | ಸೆಟ್ಲಮೆಂಟ್. | ೪೧ | ೯೨ | ೮೫ | ೧೭೭ | ೯೨೩ | ೪.೩೧ |
| | | | ಒಟ್ಟು | ೮೯ | ೨೦೧ | ೨೦೧ | ೪೦೨ | ೧೦೦೦ | ೪.೫೧ |
| ೪ | ಬಾಗಲಕೋಟೆ | ಬಾಗಲಕೋಟೆ | ಸೆಟ್ಲಮೆಂಟ್. | ೫೩ | ೧೨೬ | ೧೫೩ | ೨೭೯ | ೧೨೧೪ | ೫.೨೬ |
| | | ಹುನಗುಂದ | ಹುನಗುಂದ. | ೭ | ೧೨ | ೨೪ | ೩೬ | ೨೦೦ | ೫.೧೪ |
| | | | ಬಾದಾಮಿ. | ೩ | ೧೦ | ೫ | ೧೫ | ೫೦೦ | ೫ |
| | | | ಒಟ್ಟು | ೬೩ | ೧೪೮ | ೧೮೨ | ೩೩೦ | ೧೨೨೯ | ೫.೨೩ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೮೯ | ೬೯ | ೧೫೮ | ೭೭೫ | ೫.೦೯ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್. | ೩೫ | ೯೨ | ೯೧ | ೧೮೩ | ೯೮೯ | ೫.೨೨ |
| | | ವಿಜಯಪುರ | ಸೆಟ್ಲಮೆಂಟ್. | ೨೦೧ | ೬೧೧ | ೫೩೧ | ೧೧೪೨ | ೮೬೯ | ೫.೬೮ |
| | | | ಒಟ್ಟು | ೨೬೭ | ೭೯೨ | ೬೯೧ | ೧೪೮೩ | ೮೭೨ | ೫.೫೫ |
| | | | | ೬೪೪ | ೧೫೫೭ | ೧೪೮೨ | ೩೦೩೯ | ೯೫೧ | ೪.೭೧ |

ಮೇಲಿನ ಕೋಷ್ಟಕದ ಮೂಲಕ ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ ಒಟ್ಟು ಲಿಂಗವಾರು ಜನಸಂಖ್ಯೆ, ಲಿಂಗಾನುಪಾತ ಮತ್ತು ಕುಟುಂಬಗಾತ್ರ ಪ್ರಮಾಣವನ್ನು ತಿಳಿಸಲಾಗಿದೆ.

**ವೃತ್ತಚಿತ್ರ ೩.೧: ಚಪ್ಪರ್‌ಬಂದ್ ಸಮುದಾಯದ ತಾಲೂಕುವಾರು ಜನಸಂಖ್ಯೆಯ ಪ್ರಮಾಣ**




**ಲಂಬಚಿತ್ರ ೩.೧: ಕರ್ನಾಟಕದ ಚಪ್ಪರ್ ಬಂದ್ ಸಮುದಾಯದ ಜಿಲ್ಲಾವಾರು ಕುಟುಂಬ, ಲಿಂಗವಾರು ಜನಸಂಖ್ಯೆ ಲಿಂಗಾನುಪಾತ ಹಾಗೂ ಕುಟುಂಬಗಾತ್ರ**




| | ಗಂಡು | ಹೆಣ್ಣು | ಒಟ್ಟು | ಲಿಂಗಾನು ಪಾತ | ಕುಟುಂಬ ಗಾತ್ರ |
|---|---|---|---|---|---|
| ಗದಗ | ೩೯೪ | ೩೮೭ | ೭೮೧ | ೯೮೨ | ೩.೬೩ |
| ದಾವಣಗೆರೆ | ೨೨ | ೨೧ | ೪೩ | ೯೫೪ | ೪.೩ |
| ಧಾರವಾಡ | ೨೦೧ | ೨೦೧ | ೪೦೨ | ೧೦೦೦ | ೪.೫೧ |
| ಬಾಗಲಕೋಟೆ | ೧೪೮ | ೧೮೨ | ೩೩೦ | ೧೨೨೯ | ೫.೨೩ |
| ವಿಜಯಪುರ | ೭೯೨ | ೬೯೧ | ೧೪೮೩ | ೮೭೨ | ೫.೫೫ |

ವೃತ್ತಚಿತ್ರ ಮತ್ತು ಲಂಬ ಚಿತ್ರದಲ್ಲಿ ತೋರಿಸಿದಂತೆ ಸಮೀಕ್ಷೆಗೊಳಪಟ್ಟ ಒಟ್ಟು ೩೦೩೯ ಜನಸಂಖ್ಯೆಯಲ್ಲಿ ಗದಗ ಸೆಟ್ಲ್‌ಮೆಂಟಲ್ಲಿ ಶೇ.೨೬ ರಷ್ಟು ಜನಸಂಖ್ಯೆಯನ್ನು, ಹುಬ್ಬಳ್ಳಿ ಸೆಟ್ಲ್‌ಮೆಂಟಲ್ಲಿ ಶೇ.೬ ರಷ್ಟು ಜನಸಂಖ್ಯೆಯನ್ನು, ವಿಜಯಪುರ ಸೆಟ್ಲ್‌ಮೆಂಟಲ್ಲಿ ಶೇ.೩೮ ರಷ್ಟು ಜನಸಂಖ್ಯೆಯನ್ನು, ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಲ್ಲಿ ಶೇ.೬ ರಷ್ಟು ಜನಸಂಖ್ಯೆಯನ್ನು, ಅದೇ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿ ಶೇ.೫ ರಷ್ಟು ಜನಸಂಖ್ಯೆಯನ್ನು ಮತ್ತು ಬಾಗಲಕೋಟೆ ಸೆಟ್ಲ್‌ಮೆಂಟಲ್ಲಿ ಶೇ.೯ ರಷ್ಟು ಜನಸಂಖ್ಯೆಯನ್ನು, ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿ ಶೇ.೧ ರಷ್ಟು ಜನಸಂಖ್ಯೆಯನ್ನು, ಅದೇ ಜಿಲ್ಲೆಯ ಬಾದಾಮಿ ತಾಲೂಕಿನಲ್ಲಿ ಶೇ.೧ ರಷ್ಟು ಜನಸಂಖ್ಯೆಯನ್ನು ಹಾಗೂ ಧಾರವಾಢ ನಗರದಲ್ಲಿ ಶೇ.೭ ರಷ್ಟು ಜನಸಂಖ್ಯೆಯನ್ನು, ದಾವಣಗೆರೆ ನಗರದಲ್ಲಿ ಶೇ.೧ ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇಲ್ಲಿ ಅತೀ ಹೆಚ್ಚಿನ ಜನಸಂಖ್ಯೆಯನ್ನು ವಿಜಯಪುರ ಜಿಲ್ಲೆ ಮತ್ತು ಅತೀ ಕಡಿಮೆ ಜನಸಂಖ್ಯೆಯನ್ನು ದಾವಣಗೆರೆ ನಗರ ಹೊಂದಿದೆ. ಈ ಸಮುದಾಯದ ಲಿಂಗಾನುಪಾತವು ೯೫೧ ಇದೆ. ಇದರಿಂದ ಈ ಸಮುದಾಯದವರು ಹೆಣ್ಣುಮಕ್ಕಳನ್ನು ಕಡೆಗಣಿಸದಿರುವುದು ತಿಳಿಯುತ್ತದೆ.

**ಗದಗ ಸೆಟ್ಲ್‌ಮೆಂಟ್**

ಕರ್ನಾಟಕದಲ್ಲಿರುವ ಸೆಟ್ಲ್‌ಮೆಂಟ್‌ಗಳಲ್ಲಿ ಗದಗ ಸೆಟ್ಲ್‌ಮೆಂಟ್ ಎರಡನೇ ಅತಿ ದೊಡ್ಡ ಸೆಟ್ಲ್‌ಮೆಂಟ್ ಆಗಿದೆ. ಕೆಲ ವರ್ಷಗಳ ಹಿಂದಿನವರೆಗೂ ಗದಗ, ಧಾರವಾಡ ಜಿಲ್ಲೆಯ ಒಂದು ತಾಲೂಕಾಗಿತ್ತು. ಕರ್ನಾಟಕ ಸರ್ಕಾರ ಆಡಳಿತದ ದೃಷ್ಟಿಯಿಂದ ಹೆಚ್ಚುವರಿ ಜಿಲ್ಲೆಗಳನ್ನು ರೂಪಿಸಿದಾಗ ಗದಗ ಒಂದು ಪ್ರತ್ಯೇಕ ಜಿಲ್ಲೆಯಾಗಿ ರೂಪುಗೊಂಡಿತು. ಗದಗ ಮತ್ತು ಬೆಟಗೆರಿ ಇವು ಅವಳಿ ನಗರಗಳಾಗಿವೆ. ಗದಗ ನಗರವು ಧಾರವಾಡದಿಂದ ೮೦ ಕಿ.ಮೀ ಮತ್ತು ಬೆಂಗಳೂರಿ ನಿಂದ ೪೩೧ ಕಿ.ಮೀ ದೂರದಲ್ಲಿದೆ.

ಗದಗ ಜಿಲ್ಲೆಯು ಬಯಲು ಸೀಮೆ ಪ್ರದೇಶವಾಗಿದೆ. ಇಲ್ಲಿ ಬೇಸಿಗೆಯಲ್ಲಿ ೩೦° ಸೆಲ್ಲಿಯಸ್‌ರಿಂದ ೩೯° ಸೆಲ್ಸಿಯಸ್, ಚಳಿಗಾಲದಲ್ಲಿ ೧೮° ಸೆಲ್ಸಿಯಸ್ ರಿಂದ ೨೮° ಸೆಲ್ಸಿಯಸ್ ಉಷ್ಣತೆ ಇರುತ್ತದೆ. ಪ್ರತಿ ವರ್ಷ ಮಳೆ ಸರಾಸರಿ ೧೬.೬ ಮಿ.ಮಿ.ಗಳಷ್ಟು ಆಗಿರುತ್ತದೆ(https://kn.wikipedia.org/w/index.php?title=???&oldid=583652).

ಗದಗ ಸೆಟ್ಲ್‌ಮೆಂಟ್ ಸು.೧೦೦ ಎಕರೆಯಷ್ಟು ವಿಸ್ತೀರ್ಣವನ್ನು ಹೊಂದಿದೆ. ಸೆಟ್ಲ್‌ಮೆಂಟ್‌ಗೆ ಈಗ 'ಗಾಂಧಿನಗರ' ಎಂದು ಮರು ನಾಮಕರಣ ಮಾಡಲಾಗಿದೆ. ಸೆಟ್ಲ್‌ಮೆಂಟ್‌ನಲ್ಲಿ ಹಾಕಿ ಆಟದ ಮೈದಾನ, ಆಶ್ರಮಶಾಲೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಸತಿ ನಿಲಯ, ಸೆಟ್ಲ್‌ಮೆಂಟ್‌ನ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳು, ಬಂಧಿಖಾನೆ, ಬಾಲಮಂದಿರಗಳಿವೆ. ಸೆಟ್ಲ್‌ಮೆಂಟ್ ಜನರ ಆರೋಗ್ಯ ತಪಾಸಣೆಗಾಗಿಯೇ ಬ್ರಿಟಿಷ್

ನಕ್ಷೆ: ಸಮೀಕ್ಷೆಗೊಳಪಟ್ಟ ಗದಗ ಸೆಟ್ಲಮೆಂಟ್
ಚಪ್ಪರ್‌ಬಂದ್ ಸಮುದಾಯ



ಆಡಳಿತದಲ್ಲಿದ್ದ ಆಸ್ಪತ್ರೆಯೊಂದು ಇಂದು ಸರ್ಕಾರಿ ಆಯುರ್ವೇದಿಕ್ ಆಸ್ಪತ್ರೆಯಾಗಿದೆ, ಇಂದು ಅಂಗನವಾಡಿ ಕೇಂದ್ರ, ರೋಮನ್ ಕ್ಯಾಥೋಲಿಕ್ ಚರ್ಚ್, ಸೈಂಟ್‌ಜಾನ್ ಪ್ರಾಥಮಿಕ ಮತ್ತು ಪ್ರೌಢಶಾಲೆಗಳು ಸೆಟ್ಲ್‌ಮೆಂಟ್ ಪ್ರದೇಶದಲ್ಲಿವೆ.

ಗದಗ ಸೆಟ್ಲ್‌ಮೆಂಟ್‌ನಲ್ಲಿ ಹನುಮಪ್ಪ ದೇವರ ಗುಡಿ, ದಂಡಿನ ದುರ್ಗಮ್ಮನ ಪಾದಗಟ್ಟೆ, ತುಳಿಜಾ ಭವಾನಿ ಮತ್ತು ದಂಡಿನ ಬಯಲು ಗುಡಿಗಳು, ಚಪ್ಪರಬಂದ್ ಸಮುದಾಯದ ಮಸ್‌ಜೀದ್ ಮತ್ತು ಪಂಜಾಗಳನ್ನು ಕೂರಿಸುವ ಮಕಾನ್‌ಗಳು ಕಂಡುಬರುತ್ತವೆ. ಜೊತೆಗೆ ಬ್ರಿಟಿಷರ ಕಾಲದಲ್ಲಿ ಸೆಟ್ಲ್‌ಮೆಂಟ್ ಜನರಿಗೆ ಕರಕುಶಲ ಕೌಶಲ್ಯಗಳನ್ನು ಕಲಿಸುವ ಬಡಿಗೇರ ಕಾರ್ಖಾನೆ ಕಟ್ಟಡ ಸಹ ಇದೆ. ಗದಗ ಸೆಟ್ಲ್‌ಮೆಂಟ್‌ನಲ್ಲಿ ಗಂಟಿಚೋರ್, ಕೊರಮ, ಪಾರ್ಧಿ, ಕಂಜರಭಾಟ್, ಚಪ್ಪರ್‌ಬಂದ್ ಸಮುದಾಯಗಳು ನೆಲೆಸಿವೆ. ಇಲ್ಲಿ ಚಪ್ಪರ್‌ಬಂದ್ ಸಮುದಾಯದ 'ಬಡೇಭಾಯಿ (ಬಾರಾಗಂಡ)' ಮತ್ತು 'ಛೋಟೆಭಾಯಿ (ಛೇಗಂಡ)' ಎರಡೂ ಗುಂಪಿನವರು ನೆಲೆಸಿದ್ದಾರೆ.

**ಕೋಷ್ಟಕ ೩.೨: ಸಮೀಕ್ಷೆಗೊಳಪಟ್ಟ ಗದಗ ಸೆಟ್ಲಮೆಂಟ್ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ಗದಗ ಸೆಟ್ಲ್‌ಮೆಂಟ್ | | | | |
|---|---|---|---|---|
| ಒಟ್ಟು ಕುಟುಂಬಗಳು | ೨೧೫ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೩೯೪ | ೫೦.೪ | ೯೮೨ | ೩.೬೩ |
| ಮಹಿಳೆಯರು | ೩೮೭ | ೪೯.೬ | | |
| ಒಟ್ಟು ಜನಸಂಖ್ಯೆ | ೭೮೧ | ೧೦೦ | ೯೮೨ | ೪ |

ಸಮೀಕ್ಷೆಗೊಳಪಟ್ಟ ೨೧೫ ಕುಟುಂಬಗಳಲ್ಲಿ ಒಟ್ಟು ೭೮೧ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೫೦.೪ ರಷ್ಟು ಮತ್ತು ಮಹಿಳೆಯರು ಶೇ.೪೯.೬ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೪ ಇದೆ. ಇಲ್ಲಿ ಲಿಂಗಾನುಪಾತವು ಶೇ.೯೮೨ರಷ್ಟು ಪ್ರಮಾಣದಲ್ಲಿದೆ. ಇಲ್ಲಿ ಲಿಂಗಾನುಪಾತವು ೯೮೨ ಇದೆ. ಅಂದರೆ ಇಲ್ಲಿ ಗಂಡು ಮತ್ತು ಹೆಣ್ಣಿನ ಸಂಖ್ಯಾ ಪ್ರಮಾಣದಲ್ಲಿ ಅಷ್ಟೇನು ಹೆಚ್ಚಿನ ವ್ಯತ್ಯಾಸ ಕಂಡುಬಂದಿಲ್ಲ. ಇವರು ಹೆಣ್ಣು ಮತ್ತು ಗಂಡು ಮಕ್ಕಳನ್ನು ಸಮಾನತೆಯಿಂದ ಕಾಣುತ್ತಾರೆ.

**ಕೋಷ್ಟಕ ೩.೩: ಸಮೀಕ್ಷೆಗೊಳಪಟ್ಟ ಗದಗ ಸೆಟ್ಲ್‌ಮೆಂಟ್‌ನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೨೦೮ | ೧೬೧ | ೩೬೯ |
| ವಿವಾಹಿತರು | ೧೮೨ | ೧೮೨ | ೩೬೪ |
| ವಿಧುರ/ವಿಧವೆಯರು | ೪ | ೪೪ | ೪೮ |
| **ಒಟ್ಟು** | **೩೯೪** | **೩೮೭** | **೭೮೧** |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ಶೇ.೪೭.೨ ರಷ್ಟು ಜನ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೨೬.೬ರಷ್ಟು ಮತ್ತು ಮಹಿಳೆಯರು ಶೇ.೨೦.೬ರಷ್ಟಿದ್ದಾರೆ. ವಿವಾಹಿತರು ಶೇ.೪೬.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಮತ್ತು ಮಹಿಳೆಯರು ಶೇ.೨೩.೩ರಷ್ಟು ಸಮ ಪ್ರಮಾಣದಲ್ಲಿದ್ದಾರೆ. ವಿಧವ/ವಿಧುರರ ಪ್ರಮಾಣ ಶೇ.೬.೨ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೦.೬ರಷ್ಟು ಮತ್ತು ಮಹಿಳೆಯರು ಶೇ.೫.೬ ರಷ್ಟಿದ್ದಾರೆ.

**ಕೋಷ್ಟಕ ೩.೪: ಸಮೀಕ್ಷೆಗೊಳಪಟ್ಟ ಗದಗ ಸೆಟ್ಲ್‌ಮೆಂಟ್‌ನ ಚಪ್ಪರ್‌ಬಂದ್ ಸಮುದಾಯದ ವಯೋ ಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೨೯ | ೩೯ | ೬೮ |
| ೬–೧೭ | ೯೮ | ೭೭ | ೧೭೫ |
| ೧೮–೪೦ | ೧೭೧ | ೧೭೩ | ೩೪೪ |
| ೪೧–೬೦ | ೭೦ | ೭೦ | ೧೪೦ |
| ೬೧+ರ ಮೇಲ್ಪಟ್ಟ | ೨೬ | ೨೮ | ೫೪ |
| **ಒಟ್ಟು** | **೩೯೪** | **೩೮೭** | **೭೮೧** |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ೦ ರಿಂದ ೫ ವರ್ಷ ವಯೋಮಾನದವರು ಶೇ.೮.೮ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೩.೮ರಷ್ಟು ಮತ್ತು ಮಹಿಳೆಯರು ಶೇ.೫ ರಷ್ಟು

ಪ್ರಮಾಣದಲ್ಲಿದ್ದಾರೆ. ಇಲ್ಲಿ ೦-೫ ವಯಸ್ಸಿನವರ ಪ್ರಮಾಣದಲ್ಲಿ ಹೆಣ್ಣುಮಕ್ಕಳ ಪ್ರಮಾಣ ಹೆಚ್ಚಿರುವುದು ಕಂಡುಬಂದಿದೆ. ೬ ರಿಂದ ೧೭ ವರ್ಷ ವಯೋಮಾನದವರು ಶೇ.೨೨.೫ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೨.೫ರಷ್ಟು ಮತ್ತು ಮಹಿಳೆಯರು ಶೇ.೧೦ರಷ್ಟಿದ್ದಾರೆ. ೧೮ ರಿಂದ ೪೦ ವರ್ಷ ವಯೋಮಾನದವರು ಶೇ.೪೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೧.೮ರಷ್ಟು ಮತ್ತು ಮಹಿಳೆಯರು ಶೇ.೨೨.೨ರಷ್ಟಿದ್ದಾರೆ. ಇಲ್ಲಿ ಸಹ ಹೆಣ್ಣುಮಕ್ಕಳ ಪ್ರಮಾಣ ಹೆಚ್ಚಿರುವುದು ಕಂಡುಬಂದಿದೆ. ೪೧ ರಿಂದ ೬೦ ವರ್ಷ ವಯೋಮಾನದವರು ಶೇ.೧೭.೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಮತ್ತು ಮಹಿಳೆಯರು ಶೇ.೮.೯ರಷ್ಟು ಸಮ ಪ್ರಮಾಣದಲ್ಲಿದ್ದಾರೆ. ೬೧ ವರ್ಷಕ್ಕಿಂತ ಹೆಚ್ಚು ವಯೋಮಾನದವರು ಶೇ.೬.೯ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೩ರಷ್ಟು ಮತ್ತು ಮಹಿಳೆಯರು ಶೇ.೩.೬ರಷ್ಟಿದ್ದಾರೆ. ವಿಧವೆಯರ ಪ್ರಮಾಣ ಹೆಚ್ಚಿರಲು ಕಾರಣವೆಂದರೆ, ವಿವಾಹದ ಸಮಯದಲ್ಲಿ ಗಂಡು-ಹೆಣ್ಣಿನ ವಯಸ್ಸಿನಲ್ಲಿ ತುಂಬಾ ಅಂತರವಿರುತ್ತದೆ. ಗಂಡು ವಯಸ್ಸಿನಲ್ಲಿ ಹೆಣ್ಣಿಗಿಂತ ದೊಡ್ಡವನಾಗಿರುತ್ತಾನೆ. ಹಾಗಾಗಿ ಅವನ ಮರಣ ಬೇಗ ಸಂಭವಿಸುತ್ತದೆ.

**ಹುಬ್ಬಳ್ಳಿ ಸೆಟ್ಲ್‌ಮೆಂಟ್**

ಹುಬ್ಬಳ್ಳಿ ನಗರವು ಧಾರವಾಡ ಜಿಲ್ಲೆಯಲ್ಲಿದೆ. ಹುಬ್ಬಳ್ಳಿ ಧಾರವಾಢ ಇವು ಅವಳಿ ನಗರಗಳು, ಹುಬ್ಬಳ್ಳಿಯು ಪ್ರಮುಖ ವಾಣಿಜ್ಯ ನಗರವಾಗಿದೆ. ಈ ನಗರವು ಸಮುದ್ರ ಮಟ್ಟದಿಂದ ೬೭೦.೭೫ ಮೀ. ಎತ್ತರದಲ್ಲಿದೆ. ಮೊದಲು ಹುಬ್ಬಳ್ಳಿಯು ವಿಜಯನಗರ ಸಾಮ್ರಾಜ್ಯದ ಆಡಳಿತಕ್ಕೆ, ಒಳಪಟ್ಟಿತ್ತು. ೧೭ನೇ ಶತಮಾನಕ್ಕೆ ಬರುವಷ್ಟರಲ್ಲಿ ಈ ನಗರ ಬಹಳಷ್ಟು ಶ್ರೀಮಂತ ವ್ಯಾಪಾರಿಗಳಿಂದ ತುಂಬಿತ್ತು. ಕ್ರಿ.ಶ. ೧೮೩೬ರಲ್ಲಿ ಶಿವಾಜಿಯು ಹುಬ್ಬಳ್ಳಿಯ ಮೇಲೆ ದಂಡೆತ್ತಿ ಬಂದನು. ಮೂರನೇ ಆಂಗ್ಲೋ-ಮರಾಠ ಯುದ್ದದಲ್ಲಿ ಮರಾಠರು ಸೋತ ಪರಿಣಾಮವಾಗಿ, ಹುಬ್ಬಳ್ಳಿಯು ಬ್ರಿಟಿಷರ ವಶವಾಯಿತು. ಹಾಗೂ ಬ್ರಿಟಿಷ್ ಇಂಡಿಯಾದ ಬಾಂಬೆ ಪ್ರೆಸಿಡೆನ್ಸಿಯ ಭಾಗವಾಯಿತು. ಭಾರತ ಸ್ವತಂತ್ರಗೊಂಡ ನಂತರವೂ ಈ ನಗರ ಬಾಂಬೆ ಪ್ರೆಸಿಡೆನ್ಸಿಯ ಆಡಳಿತಕ್ಕೆ ಒಳಗಾಗಿತ್ತು. ೧೯೫೬ರ ಕರ್ನಾಟಕದ ಏಕೀಕರಣದ ಫಲವಾಗಿ ಹುಬ್ಬಳ್ಳಿ ಕರ್ನಾಟಕ ರಾಜ್ಯದ ಭಾಗವಾಯಿತು. ೨೦೧೧ರ ಜನಗಣತಿಯ ಪ್ರಕಾರ ಹುಬ್ಬಳ್ಳಿಯು ಒಟ್ಟು ೧೩,೪೯,೫೬೩ರಷ್ಟು ಜನಸಂಖ್ಯೆಯನ್ನು ಹೊಂದಿದೆ(https://en.wikipedia.org/w/index.php?title=Hubli&oldid=751372292).

ಹುಬ್ಬಳ್ಳಿಯ ರೈಲ್ವೆ ಸ್ಟೇಷನಿಗೆ ಅತೀ ಹತ್ತಿರದಲ್ಲಿ ಹಳೇ ಹುಬ್ಬಳ್ಳಿಯ ಹೊರವಲಯದಲ್ಲಿ ಆಗ್ನೇಯ ಭಾಗದಲ್ಲಿ ಸು. ೧೦೦ ಎಕರೆಗೂ ಮೇಲ್ಪಟ್ಟು ಇರುವ ಪ್ರದೇಶದಲ್ಲಿ ಸೆಟ್ಲ್‌ಮೆಂಟ್‌ನ್ನು ನಿರ್ಮಿಸಲಾಗಿತ್ತು. ಈ ಸೆಟ್ಲ್‌ಮೆಂಟ್ ಸುತ್ತಲೂ ಮುಳ್ಳುತಂತಿ ಬೇಲಿಯನ್ನು ನಿರ್ಮಿಸಿದ್ದರು, ಆದರೆ ಈಗ ಅದು ನಾಶವಾಗಿದೆ. ಸೆಟ್ಲ್‌ಮೆಂಟ್‌ನಲ್ಲಿ ಮಕ್ಕಳ ಪಾಲನೆಗಾಗಿ ಶಾಲೆ, ಬಾಲ ಮಂದಿರ, ಸ್ಪೋರ್ಟ್ಸ್ ಕ್ಲಬ್ ಮತ್ತು ಆಟದ ಮೈದಾನಗಳನ್ನು ನಿರ್ಮಿಸಿರುವುದನ್ನು ಕಾಣಬಹು

ನಕ್ಷೆ: ಸಮೀಕ್ಷೆಗೊಳಪಟ್ಟ ಹುಬ್ಬಳ್ಳಿ ಸೆಟ್ಲಮೆಂಟ್
ಚಪ್ಪರ್‌ಬಂದ್ ಸಮುದಾಯ



ದಾಗಿದೆ. ಕೆಲವು ಶಾಲೆಗಳನ್ನು, ಆಸ್ಪತ್ರೆಯೊಂದನ್ನು ಸಹ ನಿರ್ಮಿಸಲಾಗಿತ್ತು, ಅದನ್ನು ಈಗ ಕರ್ನಾಟಕ ಸರ್ಕಾರ ನೋಡಿಕೊಳ್ಳುತ್ತಿದೆ, ಸೆಟ್ಲ್‌ಮೆಂಟ್‌ಲ್ಲಿ ಚರ್ಚ್ ಸಹ ಇದೆ. ಈಗ ಈ ಸೆಟ್ಲ್‌ಮೆಂಟ್‌ಲ್ಲಿ ಅನೇಕ ಸಂಘ ಸಂಸ್ಥೆಗಳು, ಶಾಲೆಗಳು, ದೇವಸ್ಥಾನಗಳು ಇವೆ. ಇಲ್ಲಿ ಕೊರಮ, ಗಂಟಿಚೋರ್, ಕಂಜರಭಟ್, ಪಾರ್ಧಿ, ಬೋವಿ, ಚಪ್ಪರ್‌ಬಂದ್ ಸಮುದಾಯಗಳು ನೆಲೆಸಿವೆ, ಇಲ್ಲಿ ಚಪ್ಪರ್‌ಬಂದ್ ಸಮುದಾಯದವರ ಒಂದು ಮಸೀದಿ ಮತ್ತು ಚಿಕ್ಕ ದರ್ಗಾ ಹಾಗೂ ಮೊಹರಂ ಹಬ್ಬ ನಡೆಯುವ ದರ್ಗಾ ಸಹ ಇದೆ. ಇಲ್ಲಿ ಚಪ್ಪರ್‌ಬಂದ್ ಸಮುದಾಯದ 'ಬಡೇಭಾಯಿ' ಗುಂಪು ಮಾತ್ರ ಇದೆ.

**ಕೋಷ್ಟಕ ೩.೫: ಸಮೀಕ್ಷೆಗೊಳಪಟ್ಟ ಹುಬ್ಬಳ್ಳಿ ಸೆಟ್ಲ್‌ಮೆಂಟಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ಹುಬ್ಬಳ್ಳಿ ಸೆಟ್ಲ್‌ಮೆಂಟ್ | | | | |
|---|---|---|---|---|
| ಒಟ್ಟು ಕುಟುಂಬಗಳು | ೨೧೫ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೯೨ | ೫೨.೦ | ೯೨೪ | ೪.೩೨ |
| ಮಹಿಳೆಯರು | ೮೫ | ೪೮.೦ | | |
| ಒಟ್ಟು ಜನಸಂಖ್ಯೆ | ೧೭೭ | ೧೦೦.೦ | ೯೨೪ | ೪ |

ಸಮೀಕ್ಷೆಗೊಳಪಟ್ಟ ೪೧ ಕುಟುಂಬಗಳ ಒಟ್ಟು ಜನಸಂಖ್ಯೆ ೧೭೭ ಇದ್ದು, ಇದರಲ್ಲಿ ಶೇ.೫೨ರಷ್ಟು ಪುರುಷರು ಮತ್ತು ಶೇ.೪೮ರಷ್ಟು ಮಹಿಳೆಯರಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೪ ಇದೆ. ಇಲ್ಲಿನ ಲಿಂಗಾನುಪಾತವು ೯೨೪ ಇದೆ.

**ಕೋಷ್ಟಕ ೩.೬: ಸಮೀಕ್ಷೆಗೊಳಪಟ್ಟ ಹುಬ್ಬಳ್ಳಿ ಸೆಟ್ಲ್‌ಮೆಂಟಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೪೮ | ೪೨ | ೯೦ |
| ವಿವಾಹಿತರು | ೩೮ | ೩೮ | ೭೬ |
| ವಿಧುರ/ವಿಧವೆಯರು | ೬ | ೫ | ೧೧ |
| ಒಟ್ಟು | ೯೨ | ೮೫ | ೧೭೭ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೧ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೨೭.೨ರಷ್ಟು ಮತ್ತು ಮಹಿಳೆಯರು ಶೇ.೨೩.೮ರಷ್ಟಿದ್ದಾರೆ. ವಿವಾಹಿತರು ಶೇ.೪೨.೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೧.೪ರಷ್ಟು ಮತ್ತು ಮಹಿಳೆಯರು ಶೇ.೨೧.೪ರಷ್ಟಿದ್ದಾರೆ. ವಿಧವೆ/ವಿಧುದರ ಪ್ರಮಾಣ ಶೇ.೬.೨ರಷ್ಟಿದ್ದು, ಅದರಲ್ಲಿ ಪುರುಷರು ಶೇ.೩.೪ರಷ್ಟು ಮತ್ತು ಮಹಿಳೆಯರು ಶೇ.೩.೨.೮ರಷ್ಟು ಪ್ರಮಾಣದಲ್ಲಿದ್ದಾರೆ.

**ಕೋಷ್ಟದ ೩.೭: ಸಮೀಕ್ಷೆಗೊಳಪಟ್ಟ ಹುಬ್ಬಳ್ಳಿ ಸೆಟ್ಲ್‌ಮೆಂಟಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೭ | ೮ | ೧೫ |
| ೬–೧೭ | ೨೩ | ೧೫ | ೩೮ |
| ೧೮–೪೦ | ೪೨ | ೪೭ | ೮೯ |
| ೪೧–೬೦ | ೧೪ | ೧೩ | ೨೭ |
| ೬೧+ರ ಮೇಲ್ಪಟ್ಟ | ೬ | ೨ | ೮ |
| ಒಟ್ಟು | ೯೨ | ೮೫ | ೧೭೭ |

ಸಮೀಕ್ಷೆಗೊಳಪಟ್ಟವರಲ್ಲಿ ೦–೫ರ ವಯಸ್ಸಿನವರು ಶೇ.೮.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೯ರಷ್ಟು ಮತ್ತು ಮಹಿಳೆಯರು ಶೇ.೪.೫ರಷ್ಟು ಇದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೨೧.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೧೩ರಷ್ಟು ಪುರುಷರು ಮತ್ತು ಶೇ.೮.೪ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೫೦.೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೩.೭ರಷ್ಟು ಮತ್ತು ಮಹಿಳೆಯರು ಶೇ.೨೬.೫ ರಷ್ಟಿದ್ದಾರೆ. ಸಹ ಹೆಣ್ಣುಮಕ್ಕಳ ಪ್ರಮಾಣ ಹೆಚ್ಚಿರುವುದು ಕಂಡುಬಂದಿದೆ. ೪೧ ರಿಂದ ೬೦ರ ವಯಸ್ಸಿನವರು ಶೇ.೧೫.೪ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೮ ರಷ್ಟು ಮತ್ತು ಮಹಿಳೆಯರು ಶೇ.೭.೪ ರಷ್ಟಿದ್ದಾರೆ. ೬೧ ಕ್ಕಿಂತ ಮೇಲ್ಪಟ್ಟು ವಯಸ್ಸಿನವರು ಶೇ.೪.೬ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೪ ರಷ್ಟು ಮತ್ತು ಮಹಿಳೆಯರು ಶೇ.೧.೨ ರಷ್ಟಿದ್ದಾರೆ.

**ವಿಜಯಪುರ ಸೆಟ್ಲ್‌ಮೆಂಟ್**

ವಿಜಯಪುರವು ಕರ್ನಾಟಕ ರಾಜ್ಯದ ಒಂದು ಜಿಲ್ಲಾಡಾಳಿತ ಕೇಂದ್ರವಾಗಿದೆ. ಈ ನಗರವು ಬೆಂಗಳೂರಿನಿಂದ ಉತ್ತರ-ಪಶ್ಚಿಮಕ್ಕೆ ೫೩೦ ಕಿ.ಮೀ ದೂರದಲ್ಲಿದೆ. ವಿಜಯಪುರದ ಪುರಾತನ ಹೆಸರು ಬಿಜ್ಜನಹಳ್ಳಿ ಇದು ೧೦-೧೧ನೇ ಶತಮಾನಗಳಲ್ಲಿ ಕಲ್ಯಾಣಿ ಚಾಲುಕ್ಯರಿಂದ ಸ್ಥಾಪಿತವಾಯಿತು. ೧೩ನೇ ಶತಮಾನದ ಕೊನೆಯ ಹೊತ್ತಿಗೆ ದೆಹಲಿಯ ಖಿಲ್ಜಿ ಸುಲ್ತಾನರ ಪ್ರಭಾವಕ್ಕೆ ಬಂದ ವಿಜಯಪುರ, ಕ್ರಿ.ಶ ೧೩೪೭ರಲ್ಲಿ ಬೀದರಿನ ಬಹುಮನಿ ಸುಲ್ತಾನರ ಆಳ್ವಿಕೆಗೆ ಒಳಗಾಯಿತು. ಕ್ರಿ.ಶ ೧೬೮೬ರಲ್ಲಿ ಮೊಘಲ್ ಅರಸ ಔರಂಗ ಜೇಬ್ ಈ ಪ್ರದೇಶವನ್ನು ಗೆದ್ದನು.

ಕ್ರಿ.ಶ ೧೭೨೪ರಲ್ಲಿ ವಿಜಯಪುರವು ಹೈದರಾಬಾದನ ನಿಜಾಮರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ ೧೭೬೦ರಲ್ಲಿ ಮರಾಠರಿಂದ ನಿಜಾಮರು ಸೋಲಲ್ಪಟ್ಟಾಗ ವಿಜಯಪುರವು ಮರಾಠ ಪೇಶಾವರ ಆಳ್ವಿಕೆಗೆ ಒಳಪಟ್ಟಿತು, ನಂತರ ಕ್ರಿ.ಶ ೧೮೧೮ರ ३ನೇ ಆಂಗ್ಲ-ಮರಾಠ ಯುದ್ಧದಲ್ಲಿ ಬ್ರಿಟಿಷರಿಂದ ಮರಾಠರು ಸೋಲಲ್ಪಟ್ಟು ವಿಜಯಪುರ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು. ನಂತರ ವಿಜಯಪುರವನ್ನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೆ ಹಸ್ತಾಂತರಿಸಲಾಯಿತು. ಕ್ರಿ.ಶ೧೮೪೮ರಲ್ಲಿ ವಿಜಯಪುರವನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ೧೮೮೫ರಲ್ಲಿ ವಿಜಯಪುರವನ್ನು ಜಿಲ್ಲಾಡಳಿತ ಪ್ರದೇಶವಾಗಿ ಮಾಡಿ, ಮುಂಬಯಿ(ಬಾಂಬೆ) ರಾಜ್ಯಕ್ಕೆ ಸೇರಿಸಲಾಯಿತು. ನಂತರ ೧೯೫೬ರಲ್ಲಿ ವಿಜಯಪುರವನ್ನು ಮರಳಿ ಆಗಿನ ಮೈಸೂರು ರಾಜ್ಯಕ್ಕೆ ಸೇರಿಸಲಾಯಿತು. ವಿಜಯಪುರ ನಗರವನ್ನು ಕರ್ನಾಟಕ ರಾಜ್ಯ ಸರ್ಕಾರವು ೨೦೧೩ರಲ್ಲಿ ವಿಜಯಪುರ ಮಹಾನಗರ ಪಾಲಿಕೆ ಎಂದು ಘೋಷಿಸಿದೆ.

ವಿಜಯಪುರವು ಸಮುದ್ರ ಮಟ್ಟದಿಂದ ೭೭೦ ಮೀ. ಎತ್ತರದಲ್ಲಿದೆ ವಿಜಯಪುರ ಜಿಲ್ಲೆಯ ಒಟ್ಟು ವಿಸ್ತೀರ್ಣವು ೧೦೫೪೧ ಚದರ ಕಿ.ಮೀ ಇದೆ. ವಿಜಯಪುರ ಜಿಲ್ಲೆಯು ಪೂರ್ವಕ್ಕೆ ಗುಲ್ಬರ್ಗ, ದಕ್ಷಿಣಕ್ಕೆ ರಾಯಚೂರು, ದಕ್ಷಿಣ-ಪಶ್ಚಿಮಕ್ಕೆ ಬಾಗಲಕೋಟೆ, ಪಶ್ಚಿಮಕ್ಕೆ ಬೆಳಗಾವಿ, ಉತ್ತರ-ಪಶ್ಚಿಮಕ್ಕೆ ಮಹಾರಾಷ್ಟದ ಸಾಂಗಲಿ ಮತ್ತು ಉತ್ತರಕ್ಕೆ ಮಹಾರಾಷ್ಟದ ಸೋಲಾಪುರ ಜಿಲ್ಲೆಗಳಿಂದ ಆವೃತಗೊಂಡಿದೆ. ಇಲ್ಲಿ ಬೇಸಿಗೆಯಲ್ಲಿ ೩೫° ಸೆಲ್ಸಿಯಸ್ ನಿಂದ ೪೨° ಸೆಲ್ಸಿಯಸ್, ಚಳಿಗಾಲದಲ್ಲಿ ೧೮°೮ ಸೆಲ್ಸಿಯಸ್ ನಿಂದ ೨೮° ಸೆಲ್ಸಿಯಸ್ ವರೆಗೆ ಉಷ್ಣತೆ ಇರುತ್ತದೆ. ಪ್ರತಿ ವರ್ಷ ಸರಾಸರಿ ೩೦೦-೬೦೦ ಮಿ.ಮಿ.ಗಳಷ್ಟು ಮಳೆ ಆಗುತ್ತದೆ. ೨೦೧೧ರ ಜನಗಣತಿಯಂತೆ ಇದು ೨೦,೦೭,೭೫೫ ಜನಸಂಖ್ಯೆ ಮತ್ತು ೨೦೭ ಚದರ ಕಿ.ಮೀ ಜನ ಸಾಂದ್ರತೆಯನ್ನು ಹೊಂದಿದೆ. ೨೦೧೧ರ ಜನಗಣತಿಯಂತೆ ಇಲ್ಲಿ ೬೭% ಸಾಕ್ಷರತೆ ಇದೆ. ಅದರಲ್ಲಿ ೭೭% ಪುರುಷರು ಮತ್ತು ೫೬% ಮಹಿಳೆಯರು ಸಾಕ್ಷರತೆ ಹೊಂದಿದ್ದಾರೆ(https://kn.wikipedia.org/w/index.php?title=ವಿಜಯಪುರ&oldid=591180).

ನಕ್ಷೆ: ಸಮೀಕ್ಷೆಗೊಳಪಟ್ಟ ವಿಜಯಪುರ ಸೆಟ್ಲಮೆಂಟ್ ಚಪ್ಪರ್‌ಬಂದ್ ಸಮುದಾಯ



ವಿಜಯಪುರ ನಗರವು ಪ್ರೇಕ್ಷಣೀಯ ಸ್ಥಳವಾಗಿದೆ. ಇಲ್ಲಿ ಅನೇಕ ಜಗತ್ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳಗಳಿವೆ. ಗೋಲ್‌ಗುಂಬಜ್‌ನ ಅತ್ಯಂತ ಪ್ರಸಿದ್ಧ ಪ್ರೇಕ್ಷಣೀಕ ಸ್ಥಳವಾಗಿದೆ. ಗೋಲ್‌ಗುಂಬಜ್‌ನ ಮುಂಭಾಗಕ್ಕೆ ಅದರ ಬಲಭಾಗದಲ್ಲಿ ಸ್ವಲ್ಪ ದೂರದಲ್ಲಿಯೇ ಸೆಟ್ಲ್‌ಮೆಂಟ್ ಇದೆ. ಇಲ್ಲಿ ಗಂಟಿಚೋರ್, ಪಾರ್ಧಿ, ಚಪ್ಪರ್‌ಬಂದ್ ಸಮುದಾಯಗಳು ನೆಲೆಸಿವೆ, ಇಲ್ಲಿ ಚಪ್ಪರ್‌ಬಂದ್ ಸಮುದಾಯದ ಬಡೇಭಾಯಿ (ಬಾರಾಗಂಡ) ಮತ್ತು 'ಛೋಟೆಭಾಯಿ (ಛೇಗಂಡ)' ಎರಡೂ ಗುಂಪಿನವರು ನೆಲೆಸಿದ್ದಾರೆ.

**ಕೋಷ್ಟಕ ೩.೮: ಸಮೀಕ್ಷೆಗೊಳಪಟ್ಟ ವಿಜಯಪುರ ಸೆಟ್ಲ್‌ಮೆಂಟಿನ**

**ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ವಿಜಯಪುರ ಸೆಟ್ಲ್‌ಮೆಂಟ್ | | | | |
|---|---|---|---|---|
| ಒಟ್ಟು ಕುಟುಂಬಗಳು | ೨೦೧ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೬೧೧ | ೫೩.೫ | ೮೬೯ | ೫.೬೮ |
| ಮಹಿಳೆಯರು | ೫೩೧ | ೪೬.೫ | | |
| ಒಟ್ಟು ಜನಸಂಖ್ಯೆ | ೧೧೪೨ | ೧೦೦ | ೮೬೯ | ೬ |

ಸಮೀಕ್ಷೆಗೊಳಪಟ್ಟ ೨೦೧ ಕುಟುಂಬಗಳಲ್ಲಿ ಒಟ್ಟು ೧೧೪೨ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೫೩.೫ ರಷ್ಟು ಮತ್ತು ಮಹಿಳೆಯರು ಶೇ.೪೬.೫ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೬ ಇದೆ. ಇಲ್ಲಿನ ಲಿಂಗಾನುಪಾತವು ೮೬೯ ಇದೆ. ಇಲ್ಲಿ ಗಂಡು-ಹೆಣ್ಣಿನ ಸಂಖ್ಯಾ ಪ್ರಮಾಣದಲ್ಲಿ ಬಹಳ ವ್ಯತ್ಯಾಸವಿರುವುದು ಕಂಡುಬಂದಿದೆ.

**ಕೋಷ್ಟಕ ೩.೯: ಸಮೀಕ್ಷೆಗೊಳಪಟ್ಟ ವಿಜಯಪುರ ಸೆಟ್ಲ್‌ಮೆಂಟಿನ**

**ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೩೩೪ | ೨೩೮ | ೫೭೨ |
| ವಿವಾಹಿತರು | ೨೬೫ | ೨೬೫ | ೫೩೦ |
| ವಿಧುರ/ವಿಧವೆಯರು | ೧೨ | ೨೮ | ೪೦ |
| ಒಟ್ಟು | ೬೧೧ | ೫೩೧ | ೧೧೪೨ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೦ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೨೯.೨ರಷ್ಟು ಮತ್ತು ಮಹಿಳೆಯರು ಶೇ.೨೦.೮ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೪೬.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೩.೨ರಷ್ಟು ಮತ್ತು ಮಹಿಳೆಯರು ಶೇ.೨೩.೨ರಷ್ಟಿದ್ದಾರೆ. ವಿಧವೆ/ವಿಧುದರ ಪ್ರಮಾಣ ಶೇ.೩.೬ರಷ್ಟಿದ್ದು, ಅದರಲ್ಲಿ ಪುರುಷರು ಶೇ.೧.೧ರಷ್ಟು ಮತ್ತು ಮಹಿಳೆಯರು ಶೇ.೨.೫ರಷ್ಟು ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ ೩.೧೦: ಸಮೀಕ್ಷೆಗೊಳಪಟ್ಟ ವಿಜಯಪುರ ಸೆಟ್ಲ್‌ಮೆಂಟಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೫ | ೭೦ | ೫೫ | ೧೨೫ |
| ೬-೧೭ | ೧೭೫ | ೧೪೩ | ೩೧೮ |
| ೧೮-೪೦ | ೨೪೮ | ೨೪೦ | ೪೮೮ |
| ೪೧-೬೦ | ೮೮ | ೭೪ | ೧೬೨ |
| ೬೧+ರ ಮೇಲ್ಪಟ್ಟ | ೩೦ | ೧೯ | ೪೯ |
| ಒಟ್ಟು | ೬೧೧ | ೫೩೧ | ೧೧೪೨ |

ಸಮೀಕ್ಷೆಗೊಳಪಟ್ಟವರಲ್ಲಿ ೦-೫ರ ವಯಸ್ಸಿನವರು ಶೇ.೧೧ರಷ್ಟು ಪ್ರಮಾಣದಲ್ಲಿದ್ದು, ಪುರುಷರು ಶೇ.೬.೨ರಷ್ಟು ಮತ್ತು ಮಹಿಳೆಯರು ಶೇ.೪.೮ರಷ್ಟು ಪ್ರಮಾಣದಲ್ಲಿದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೨೭.೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೧೫.೩ರಷ್ಟು ಪುರುಷರು ಮತ್ತು ಶೇ.೧೨.೫ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೨.೭ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೧.೭ರಷ್ಟು ಮತ್ತು ಮಹಿಳೆಯರು ಶೇ.೨೧ರಷ್ಟಿದ್ದಾರೆ. ೪೧ ರಿಂದ ೬೦ರ ವಯಸ್ಸಿನವರು ಶೇ.೧೪.೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೭.೮ರಷ್ಟು ಮತ್ತು ಮಹಿಳೆಯರು ಶೇ.೬.೪ರಷ್ಟಿದ್ದಾರೆ. ೬೧ ಕ್ಕಿಂತ ಮೇಲ್ಪಟ್ಟು ವಯಸ್ಸಿನವರು ಶೇ.೪.೩ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨.೭ರಷ್ಟು ಮತ್ತು ಮಹಿಳೆಯರು ಶೇ.೧.೬ ರಷ್ಟಿದ್ದಾರೆ.

ವಿಜಯಪುರ ಜಿಲ್ಲೆಯಲ್ಲಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ತಾಲೂಕುಗಳ ಜನಸಂಖ್ಯೆಯ ವಿವರ

**ಮುದ್ದೇಬಿಹಾಳ ತಾಲೂಕು**

**ಕೋಷ್ಟಕ ೩.೧೧: ಸಮೀಕ್ಷೆಗೊಳಪಟ್ಟ ಮುದ್ದೇಬಿಹಾಳ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ವಿಜಯಪುರ (ಜಿ) ಮುದ್ದೇಬಿಹಾಳ್ (ತಾ) | | | | |
|---|---|---|---|---|
| ಒಟ್ಟು ಕುಟುಂಬಗಳು | ೩೫ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೯೨ | ೫೦.೩ | ೯೮೯ | ೫.೨೩ |
| ಮಹಿಳೆಯರು | ೯೧ | ೪೯.೭ | | |
| ಒಟ್ಟು ಜನಸಂಖ್ಯೆ | ೧೮೩ | ೧೦೦ | ೯೮೯ | ೫ |

ಸಮೀಕ್ಷೆಗೊಳಪಟ್ಟ ೩೫ ಕುಟುಂಬಗಳಲ್ಲಿ ಒಟ್ಟು ೧೮೩ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೫೦.೩ ರಷ್ಟು ಮತ್ತು ಮಹಿಳೆಯರು ಶೇ.೪೯.೭ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಇಲ್ಲಿನ ಲಿಂಗಾನುಪಾತವು ೯೮೯ ಇದೆ. ಇಲ್ಲಿ ಗಂಡು-ಹೆಣ್ಣಿನ ಸಂಖ್ಯಾ ಪ್ರಮಾಣದಲ್ಲಿ ಕಡಿಮೆ ವ್ಯತ್ಯಾಸವಿರುವುದು ಕಂಡುಬಂದಿದೆ.

**ಕೋಷ್ಟಕ ೩.೧೨: ಸಮೀಕ್ಷೆಗೊಳಪಟ್ಟ ಮುದ್ದೇಬಿಹಾಳ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೫೦ | ೪೫ | ೯೫ |
| ವಿವಾಹಿತರು | ೪೨ | ೪೨ | ೮೪ |
| ವಿಧುರ/ವಿಧವೆಯರು | ೦ | ೪ | ೪ |
| ಒಟ್ಟು | ೯೨ | ೯೧ | ೧೮೩ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೧.೮ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೨೭.೩ರಷ್ಟು ಮತ್ತು ಮಹಿಳೆಯರು ಶೇ.೨೪.೫ರಷ್ಟು ಪ್ರಮಾಣದಲ್ಲಿದ್ದಾರೆ.

ವಿವಾಹಿತರು ಶೇ.೪೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೩ರಷ್ಟು ಮತ್ತು ಮಹಿಳೆಯರು ಶೇ.೨೩ರಷ್ಟಿದ್ದಾರೆ. ಶೇ.೨.೨ರಷ್ಟು ಪ್ರಮಾಣದಲ್ಲಿ ವಿಧವೆಯರು ಮಾತ್ರ ಇದ್ದಾರೆ.

**ಕೋಷ್ಟಕ ೩.೧೩: ಸಮೀಕ್ಷೆಗೊಳಪಟ್ಟ ಮುದ್ದೇಬಿಹಾಳ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | | ೪ | ೪ |
| ೬–೧೭ | ೨೪ | ೨೩ | ೪೭ |
| ೧೮–೪೦ | ೩೭ | ೪೨ | ೭೯ |
| ೪೧–೬೦ | ೨೫ | ೧೫ | ೪೦ |
| ೬೧+ರ ಮೇಲ್ಪಟ್ಟ | ೬ | ೭ | ೧೩ |
| ಒಟ್ಟು | ೯೨ | ೯೧ | ೧೮೩ |

ಸಮೀಕ್ಷೆಗೊಳಪಟ್ಟವರಲ್ಲಿ ೦–೫ರ ವಯಸ್ಸಿನವರು ಶೇ.೨.೨ರಷ್ಟು ಪ್ರಮಾಣದಲ್ಲಿ ಮಹಿಳೆಯರು ಮಾತ್ರ ಇದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೨೫.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೧೩.೧ರಷ್ಟು ಪುರುಷರು ಮತ್ತು ಶೇ.೧೨.೫ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೩.೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೦.೨ರಷ್ಟು ಮತ್ತು ಮಹಿಳೆಯರು ಶೇ.೨೩ರಷ್ಟಿದ್ದಾರೆ. ಇಲ್ಲಿ ಮಹಿಳೆಯರ ಪ್ರಮಾಣ ಹೆಚ್ಚಿದೆ. ೪೧ ರಿಂದ ೬೦ರ ವಯಸ್ಸಿನವರು ಶೇ.೨೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೩.೭ರಷ್ಟು ಮತ್ತು ಮಹಿಳೆಯರು ಶೇ.೮.೩ರಷ್ಟಿದ್ದಾರೆ. ೬೧ ಕ್ಕಿಂತ ಮೇಲ್ಪಟ್ಟು ವಯಸ್ಸಿನವರು ಶೇ.೭ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೨ರಷ್ಟು ಮತ್ತು ಮಹಿಳೆಯರು ಶೇ.೩.೮ ರಷ್ಟಿದ್ದಾರೆ.

ಬಸವನ ಬಾಗೇವಾಡಿ ತಾಲೂಕು

**ಕೋಷ್ಟಕ ೩.೧೪: ಸಮೀಕ್ಷೆಗೊಳಪಟ್ಟ ಬಸವನ ಬಾಗೇವಾಡಿ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ವಿಜಯಪುರ (ಜಿ) ಬಿ.ಬಾಗೇವಾಡಿ (ತಾ) | | | | |
|---|---|---|---|---|
| ಒಟ್ಟು ಕುಟುಂಬಗಳು | ೩೧ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೮೯ | ೫೬.೩ | ೭೭೫ | ೫.೦೯ |
| ಮಹಿಳೆಯರು | ೬೯ | ೪೩.೭ | | |
| ಒಟ್ಟು ಜನಸಂಖ್ಯೆ | ೧೫೮ | ೧೦೦ | ೭೭೫ | ೫ |

ಸಮೀಕ್ಷೆಗೊಳಪಟ್ಟ ೩೧ ಕುಟುಂಬಗಳಲ್ಲಿ ಒಟ್ಟು ೧೫೮ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೫೬.೩ ರಷ್ಟು ಮತ್ತು ಮಹಿಳೆಯರು ಶೇ.೪೩.೭ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಇಲ್ಲಿನ ಲಿಂಗಾನುಪಾತವು ೭೭೫ ಇದೆ. ಇಲ್ಲಿ ಗಂಡು-ಹೆಣ್ಣಿನ ಸಂಖ್ಯಾ ಪ್ರಮಾಣದಲ್ಲಿ ಬಹಳ ವ್ಯತ್ಯಾಸವಿರುವುದು ಕಂಡುಬಂದಿದೆ.

**ಕೋಷ್ಟಕ ೩.೧೫: ಸಮೀಕ್ಷೆಗೊಳಪಟ್ಟ ಬಸವನ ಬಾಗೇವಾಡಿ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೫೪ | ೩೦ | ೮೪ |
| ವಿವಾಹಿತರು | ೩೫ | ೩೫ | ೭೦ |
| ವಿಧುರ/ವಿಧವೆಯರು | ೦ | ೪ | ೪ |
| ಒಟ್ಟು | ೮೯ | ೬೯ | ೧೫೮ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೩ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೩೪.೧ರಷ್ಟು ಮತ್ತು ಮಹಿಳೆಯರು ಶೇ.೧೮.೯ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೪೪.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೨.೨ರಷ್ಟು

ಮತ್ತು ಮಹಿಳೆಯರು ಶೇ.೨೨.೨ರಷ್ಟಿದ್ದಾರೆ. ಶೇ.೨.೬ರಷ್ಟು ಪ್ರಮಾಣದಲ್ಲಿ ವಿಧವೆಯರು ಮಾತ್ರ ಇದ್ದಾರೆ.

**ಕೋಷ್ಟದ ೩.೧೬: ಸಮೀಕ್ಷೆಗೊಳಪಟ್ಟ ಬಸವನ ಬಾಗೇವಾಡಿ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೫ | ೭ | ೧೨ |
| ೬–೧೭ | ೨೬ | ೧೯ | ೪೫ |
| ೧೮–೪೦ | ೩೮ | ೨೬ | ೬೪ |
| ೪೧–೬೦ | ೧೫ | ೧೫ | ೩೦ |
| ೬೧+ರ ಮೇಲ್ಪಟ್ಟ | ೫ | ೨ | ೭ |
| ಒಟ್ಟು | ೮೯ | ೬೯ | ೧೫೮ |

ಸಮೀಕ್ಷೆಗೊಳಪಟ್ಟವರಲ್ಲಿ ೦–೫ರ ವಯಸ್ಸಿನವರು ಶೇ.೭.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೨ರಷ್ಟು ಮತ್ತು ಮಹಿಳೆಯರು ಶೇ.೪.೪ ರಷ್ಟಿದ್ದು, ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೨೮.೫ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೧೬.೫ರಷ್ಟು ಪುರುಷರು ಮತ್ತು ಶೇ.೧೨ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೦.೫ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೪ರಷ್ಟು ಮತ್ತು ಮಹಿಳೆಯರು ಶೇ.೧೬.೫ರಷ್ಟಿದ್ದಾರೆ. ೪೧ ರಿಂದ ೬೦ರ ವಯಸ್ಸಿನವರು ಶೇ.೧೯ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೯.೫ರಷ್ಟು ಮತ್ತು ಮಹಿಳೆಯರು ಶೇ.೯.೫ರಷ್ಟಿದ್ದಾರೆ. ೬೧ ಕ್ಕಿಂತ ಮೇಲ್ಪಟ್ಟು ವಯಸ್ಸಿನವರು ಶೇ.೪.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩.೨ರಷ್ಟು ಮತ್ತು ಮಹಿಳೆಯರು ಶೇ.೧.೨ ರಷ್ಟಿದ್ದಾರೆ.

**ಬಾಗಲಕೋಟೆ ಸೆಟ್ಲ್‌ಮೆಂಟ್**

ಬಾಗಲಕೋಟೆ ಕರ್ನಾಟಕದ ಒಂದು ಜಿಲ್ಲೆ ಕೇಂದ್ರವಾಗಿದೆ. ಇದು ಮೊದಲಿಗೆ ವಿಜಯಪುರ ಜಿಲ್ಲೆಯೊಳಗಿನ ಒಂದು ತಾಲೂಕು ಕೇಂದ್ರವಾಗಿತ್ತು. ನಂತರ ಆಡಳಿತ ದೃಷ್ಟಿಯಿಂದ ೧೯೯೭ರಲ್ಲಿ ಜಿಲ್ಲಾ ಕೇಂದ್ರವಾಗಿ ಮಾರ್ಪಟ್ಟಿತು. ಇದು ಬೆಳಗಾವಿ, ಗದಗ, ಕೊಪ್ಪಳ, ರಾಯಚೂರು ಹಾಗೂ ವಿಜಯಪುರಗಳೊಂದಿಗೆ ತನ್ನ ಗಡಿಯನ್ನು ಹೊಂದಿದೆ. ಐತಿಹಾಸಿಕವಾಗಿ ಬಾಗಲಕೋಟೆ ಜಿಲ್ಲೆಯು ಚಾಲುಕ್ಯರಾಳಿದ ನಾಡು. ಬಾದಾಮಿ, ಐಹೊಳೆ, ಪಟ್ಟದಕಲ್ಲು, ಕೂಡಲಸಂಗಮ

ನಕ್ಷೆ: ಸಮೀಕ್ಷೆಗೊಳಪಟ್ಟ ಬಾಗಲಕೋಟೆ ಸೆಟ್ಲಮೆಂಟ್
ಚಪ್ಪರ್‌ಬಂದ್ ಸಮುದಾಯ



ಮತ್ತು ಮಹಾಕೂಟ ಇಲ್ಲಿಯ ಅತ್ಯಂತ ಪ್ರಮುಖ ಪ್ರೇಕ್ಷಣೀಯ ಸ್ಥಳಗಳು. ಸಮುದ್ರ ಮಟ್ಟದಿಂದ ೭೪೭ ಮೀ. ಎತ್ತರದಲ್ಲಿರುವ ಬಾಗಲಕೋಟೆಯು ೨೦೧೧ರ ಜನಗಣತಿಯಂತೆ ೧೬,೫೧,೮೯೨ ಜನಸಂಖ್ಯೆ ಹೊಂದಿದೆ. ಜಿಲ್ಲೆಯ ವಿಸ್ತೀರ್ಣ ೬೫೯೩ ಕಿ.ಮೀ ಆಗಿದ್ದು, ಜನಸಾಂದ್ರತೆ ೨೫೧ ಚದರ ಕಿ.ಮೀ ಇದೆ(https://kn.wikipedia.org/w/index.php?title=ವಿಜಯಪುರ&oldid=531030).

ಬಾಗಲಕೋಟೆ ನಗರದ ದಕ್ಷಿಣ ಭಾಗಕ್ಕೆ ಸಕ್ರಿ ಹೈಸ್ಕೂಲ್‌ನಿಂದ ಶಕ್ತಿ ಟಾಕೀಸ್ ಮತ್ತು ವಾಸವಿ ಟಾಕೀಸ್‌ಗಳ ಮಧ್ಯಭಾಗದಲ್ಲಿ ಸೆಟ್ಲ್‌ಮೆಂಟ್ ಹರಡಿಕೊಂಡಿದೆ. ಈ ಸೆಟ್ಲ್‌ಮೆಂಟ್ ೧೧.೨೫ ಎಕರೆ ವಿಸ್ತೀರ್ಣವಿರುವುದಾಗಿ ವಕ್ತೃಗಳು ತಿಳಿಸುತ್ತಾರೆ. ಇಲ್ಲಿ ಚಪ್ಪರ್‌ಬಂದ್, ಪಾರ್ಧಿ, ಗಂಟಿಚೋರ್, ಕೊರಮ ಸಮುದಾಯಗಳು ನೆಲೆಸಿವೆ. ಇಲ್ಲಿ ಚಪ್ಪರ್‌ಬಂದ್ ಸಮುದಾಯದ 'ಭೋಟೆಭಾಯಿ (ಭೇಗಂಡ)' ಗುಂಪು ಮಾತ್ರ ನೆಲೆಸಿದೆ.

**ಕೋಷ್ಟಕ ೩.೧೭: ಸಮೀಕ್ಷೆಗೊಳಪಟ್ಟ ಬಾಗಲಕೋಟೆ ಸೆಟ್ಲ್‌ಮಂಟಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ಬಾಗಲಕೋಟೆ ಸೆಟ್ಲ್‌ಮೆಂಟ್ | | | | |
|---|---|---|---|---|
| ಒಟ್ಟು ಕುಟುಂಬಗಳು | ೫೩ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೧೨೬ | ೪೫.೨ | ೧೨೧೪ | ೫.೨೬ |
| ಮಹಿಳೆಯರು | ೧೫೩ | ೫೪.೮ | | |
| ಒಟ್ಟು ಜನಸಂಖ್ಯೆ | ೨೭೯ | ೧೦೦ | ೧೨೧೪ | ೫ |

ಸಮೀಕ್ಷೆಗೊಳಪಟ್ಟ ೫೩ ಕುಟುಂಬಗಳಲ್ಲಿ ಒಟ್ಟು ೨೭೯ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೪೫.೨ ರಷ್ಟು ಮತ್ತು ಮಹಿಳೆಯರು ಶೇ.೫೪.೮ ರಷ್ಟು ಪ್ರಮಾಣದಲ್ಲಿದ್ದಾರೆ. ಇಲ್ಲಿ ಮಹಿಳೆಯರ ಪ್ರಮಾಣ ಹೆಚ್ಚಿರುವುದು ಕಾಣಬಹುದು. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಇಲ್ಲಿನ ಲಿಂಗಾನುಪಾತವು ೧೨೧೪ ಇದೆ. ಇಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದೆ. ಇದೊಂದು ಉತ್ತಮ ಬೆಳವಣಿಗೆಯಾಗಿದೆ.

**ಕೋಷ್ಟಕ ೩.೧೮: ಸಮೀಕ್ಷೆಗೊಳಪಟ್ಟ ಬಾಗಲಕೋಟೆ ಸೆಟ್ಲ್‌ಮಂಟಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೬೬ | ೮೦ | ೧೪೬ |
| ವಿವಾಹಿತರು | ೫೯ | ೬೦ | ೧೧೯ |
| ವಿಧುರ/ವಿಧವೆಯರು | ೧ | ೧೩ | ೧೪ |
| **ಒಟ್ಟು** | **೧೨೬** | **೧೫೩** | **೨೭೯** |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೨.೪ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೨೩.೭ರಷ್ಟು ಮತ್ತು ಮಹಿಳೆಯರು ಶೇ.೨೮.೭ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೪೨.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೧.೧ರಷ್ಟು ಮತ್ತು ಮಹಿಳೆಯರು ಶೇ.೨೧.೫ರಷ್ಟಿದ್ದಾರೆ. ವಿಧವೆ/ವಿಧುದರರ ಪ್ರಮಾಣ ಶೇ.೫ರಷ್ಟಿದ್ದು, ಅದರಲ್ಲಿ ಪುರುಷರು ಶೇ.೦.೪ರಷ್ಟು ಮತ್ತು ಮಹಿಳೆಯರು ಶೇ.೪.೬ರಷ್ಟು ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ ೩.೧೯: ಸಮೀಕ್ಷೆಗೊಳಪಟ್ಟ ಬಾಗಲಕೋಟೆ ಸೆಟ್ಲ್‌ಮೆಂಟಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೧೨ | ೨೧ | ೩೩ |
| ೬–೧೭ | ೨೭ | ೨೮ | ೫೫ |
| ೧೮–೪೦ | ೫೭ | ೭೭ | ೧೩೪ |
| ೪೧–೬೦ | ೨೩ | ೧೮ | ೪೧ |
| ೬೧+ರ ಮೇಲ್ಪಟ್ಟ | ೭ | ೯ | ೧೬ |
| **ಒಟ್ಟು** | **೧೨೬** | **೧೫೩** | **೨೭೯** |

ಸಮೀಕ್ಷೆಗೊಳಪಟ್ಟವರಲ್ಲಿ ೦–೫ರ ವಯಸ್ಸಿನವರು ಶೇ.೧೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೪.೫ರಷ್ಟು ಮತ್ತು ಮಹಿಳೆಯರು ಶೇ.೭.೫ ರಷ್ಟಿದ್ದು, ಪುರುಷರಿಗಿಂತ ಹೆಚ್ಚಿನ

ಸಂಖ್ಯೆಯಲ್ಲಿದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೧೯.೯ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೯.೯ರಷ್ಟು ಪುರುಷರು ಮತ್ತು ಶೇ.೧೦ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೦.೫ರಷ್ಟು ಮತ್ತು ಮಹಿಳೆಯರು ಶೇ.೨೭.೫ ರಷ್ಟಿದ್ದು, ಅಧಿಕ ಸಂಖ್ಯೆಯಲ್ಲಿದ್ದಾರೆ. ೪೧ ರಿಂದ ೬೦ರ ವಯಸ್ಸಿನವರು ಶೇ.೧೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೮.೫ ರಷ್ಟು ಮತ್ತು ಮಹಿಳೆಯರು ಶೇ.೩.೫ ರಷ್ಟಿದ್ದಾರೆ. ೬೧ ಕ್ಕಿಂತ ಮೇಲ್ಪಟ್ಟು ವಯಸ್ಸಿನವರು ಶೇ.೬.೧ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨.೬ರಷ್ಟು ಮತ್ತು ಮಹಿಳೆಯರು ಶೇ.೩.೫ರಷ್ಟು ಪ್ರಮಾಣದಲ್ಲಿದ್ದಾರೆ.

**ಬಾಗಲಕೋಟೆ ಜಿಲ್ಲೆಯಲ್ಲಿ ಸಮೀಕ್ಷೆಗೆ ಆಯ್ಕೆಮಾಡಿಕೊಂಡ ತಾಲೂಕುಗಳ ಜನಸಂಖ್ಯೆಯ ವಿವರ**

**ಹುನಗುಂದ ತಾಲೂಕು**

**ಕೋಷ್ಟಕ ೩.೨೦: ಸಮೀಕ್ಷೆಗೊಳಪಟ್ಟ ಹುನಗುಂದ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ಬಾಗಲಕೋಟ್ (ಜಿ) ಹುನಗುಂದ (ತಾ) | | | | |
|---|---|---|---|---|
| ಒಟ್ಟು ಕುಟುಂಬಗಳು | ೭ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೧೨ | ೩೩.೩ | ೨೦೦೦ | ೫.೧೪ |
| ಮಹಿಳೆಯರು | ೨೪ | ೬೬.೭ | | |
| ಒಟ್ಟು ಜನಸಂಖ್ಯೆ | ೩೬ | ೧೦೦ | ೨೦೦೦ | ೫ |

ಸಮೀಕ್ಷೆಗೊಳಪಟ್ಟ ೦೭ ಕುಟುಂಬಗಳಲ್ಲಿ ಒಟ್ಟು ೩೬ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೩೩.೪ ರಷ್ಟು ಮತ್ತು ಮಹಿಳೆಯರು ಶೇ.೬೬.೬ ರಷ್ಟು ಪ್ರಮಾಣದಲ್ಲಿದ್ದಾರೆ. ಇಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಹೆಚ್ಚಿದೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಇಲ್ಲಿನ ಲಿಂಗಾನುಪಾತವು ೨೦೦೦ ಇದೆ. ಇಲ್ಲಿ ಸಹ ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದೆ. ಇದೊಂದು ಉತ್ತಮ ಬೆಳವಣಿಗೆಯಾಗಿದೆ.

**ಕೋಷ್ಟಕ ೩.೨೧: ಸಮೀಕ್ಷೆಗೊಳಪಟ್ಟ ಹುನಗುಂದ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೬ | ೧೭ | ೨೩ |
| ವಿವಾಹಿತರು | ೬ | ೬ | ೧೨ |
| ವಿಧುರ/ವಿಧವೆಯರು | ೦ | ೧ | ೧ |
| **ಒಟ್ಟು** | **೧೨** | **೨೪** | **೩೬** |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೬೩.೮ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೧೬.೬ರಷ್ಟು ಮತ್ತು ಮಹಿಳೆಯರು ಶೇ.೪೭.೨ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೩೩.೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೬.೬ರಷ್ಟು ಮತ್ತು ಮಹಿಳೆಯರು ಶೇ.೧೬.೬ರಷ್ಟಿದ್ದಾರೆ. ಶೇ.೩ರಷ್ಟು ಪ್ರಮಾಣದಲ್ಲಿ ವಿಧವೆಯರು ಮಾತ್ರ ಇದ್ದಾರೆ.

**ಕೋಷ್ಟದ ೩.೨೨: ಸಮೀಕ್ಷೆಗೊಳಪಟ್ಟ ಹುನಗುಂದ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೧ | | ೧ |
| ೬–೧೭ | ೧ | ೧೧ | ೧೨ |
| ೧೮–೪೦ | ೫ | ೮ | ೧೩ |
| ೪೧–೬೦ | ೫ | ೫ | ೧೦ |
| ೬೧+ರ ಮೇಲ್ಪಟ್ಟ | ೦ | ೦ | ೦೦ |
| **ಒಟ್ಟು** | **೧೨** | **೨೪** | **೩೬** |

ಸಮೀಕ್ಷೆಗೊಳಪಟ್ಟವರಲ್ಲಿ ೦–೫ರ ವಯಸ್ಸಿನವರು ಶೇ.೨.೮ರಷ್ಟು ಪ್ರಮಾಣದಲ್ಲಿ ಪುರುಷರು ಮಾತ್ರ ಇದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೩೩.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೨.೮ರಷ್ಟು ಪುರುಷರು ಮತ್ತು ಶೇ.೩೦.೬ರಷ್ಟು ಪ್ರಮಾಣದಲ್ಲಿ ಮಹಿಳೆಯರು, ಪುರುಷರಿಗಿಂತ ಅಧಿಕ ಸಂಖ್ಯೆಯಲ್ಲಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೩೬.೨ರಷ್ಟು

ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೩.೮ರಷ್ಟು ಮತ್ತು ಮಹಿಳೆಯರು ಶೇ.೨೨.೪ ರಷ್ಟಿದ್ದಾರೆ. ಇಲ್ಲಿ ಸಹ ಮಹಿಳೆಯರು ಹೆಚ್ಚಿದ್ದಾರೆ. ೪೧ ರಿಂದ ೬೦ರ ವಯಸ್ಸಿನವರು ಶೇ.೨೭.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಮತ್ತು ಮಹಿಳೆಯರು ಶೇ.೧೩.೮ ರಷ್ಟು ಸಮ ಪ್ರಮಾಣದಲ್ಲಿದ್ದಾರೆ.

**ಬಾದಾಮಿ ತಾಲೂಕು**

**ಕೋಷ್ಟಕ ೩.೨೩: ಸಮೀಕ್ಷೆಗೊಳಪಟ್ಟ ಬಾದಾಮಿ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

| ಬಾಗಲಕೋಟ್ (ಜಿ) ಬಾದಾಮಿ (ತಾ) | | | | |
|---|---|---|---|---|
| ಒಟ್ಟು ಕುಟುಂಬಗಳು | ೩ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೧೦ | ೬೬.೭ | ೫೦೦ | ೫ |
| ಮಹಿಳೆಯರು | ೫ | ೩೩.೩ | | |
| ಒಟ್ಟು ಜನಸಂಖ್ಯೆ | ೧೫ | ೧೦೦ | ೫೦೦ | ೫ |

ಸಮೀಕ್ಷೆಗೊಳಪಟ್ಟ ೦೩ ಕುಟುಂಬಗಳಲ್ಲಿ ಒಟ್ಟು ೧೫ ಜನಸಂಖ್ಯೆ ಇದ್ದು, ಅದರಲ್ಲಿ ಪುರುಷರು ಶೇ.೬೬.೬ ರಷ್ಟು ಮತ್ತು ಮಹಿಳೆಯರು ಶೇ.೩೩.೪ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಇಲ್ಲಿನ ಲಿಂಗಾನುಪಾತವು ಸಮ ೫೦೦ ಇದೆ. ಪುರುಷರ ಸಂಖ್ಯೆಯ ಅರ್ಧದಷ್ಟು ಮಾತ್ರ ಮಹಿಳೆಯರು ಇದ್ದಾರೆ.

**ಕೋಷ್ಟಕ ೩.೨೪: ಸಮೀಕ್ಷೆಗೊಳಪಟ್ಟ ಬಾದಾಮಿ ತಾಲೂಕಿನ ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೭ | ೨ | ೯ |
| ವಿವಾಹಿತರು | ೩ | ೩ | ೬ |
| ವಿಧುರ/ವಿಧವೆಯರು | ೦ | ೦ | ೦ |
| ಒಟ್ಟು | ೧೦ | ೫ | ೧೫ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೬೦ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅದರಲ್ಲಿ ಪುರುಷರು ಶೇ.೪೬.೬ರಷ್ಟು ಮತ್ತು ಮಹಿಳೆಯರು ಶೇ.೧೩.೪ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೪೦ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೦ರಷ್ಟು ಮತ್ತು ಮಹಿಳೆಯರು ಶೇ.೨೦ರಷ್ಟಿದ್ದಾರೆ.

**ಕೋಷ್ಟದ ೩.೨೫: ಸಮೀಕ್ಷೆಗೊಳಪಟ್ಟ ಬಾದಾಮಿ ತಾಲೂಕಿನ**

**ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೦ | ೦ | ೦ |
| ೬–೧೭ | ೫ | ೧ | ೬ |
| ೧೮–೪೦ | ೩ | ೩ | ೬ |
| ೪೧–೬೦ | ೨ | ೧ | ೩ |
| ೬೧+ರ ಮೇಲ್ಪಟ್ಟ | ೦ | ೦ | ೦ |
| ಒಟ್ಟು | ೧೦ | ೫ | ೧೫ |

ಸಮೀಕ್ಷೆಗೊಳಪಟ್ಟವರಲ್ಲಿ ೬ ರಿಂದ ೧೭ರ ವಯಸ್ಸಿನವರು ಶೇ.೪೦ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶೇ.೩೩.೪ರಷ್ಟು ಪುರುಷರು ಮತ್ತು ಶೇ.೬.೬ರಷ್ಟು ಮಹಿಳೆಯರಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೦ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೦ರಷ್ಟು ಮತ್ತು ಮಹಿಳೆಯರು ಶೇ.೨೦ ರಷ್ಟಿದ್ದಾರೆ. ೪೧ ರಿಂದ ೬೦ರ ವಯಸ್ಸಿನವರು ಶೇ.೨೦ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೩.೪ ರಷ್ಟು ಮತ್ತು ಮಹಿಳೆಯರು ಶೇ.೬.೬ ರಷ್ಟಿದ್ದಾರೆ.

**ಧಾರವಾಡ – ಜನ್ನತ್ ನಗರ/ಚಪ್ಪರ್‌ಬಂದ್ ಕಾಲೋನಿ**

ಧಾರವಾಡ ಕರ್ನಾಟಕ ರಾಜ್ಯದ ಒಂದು ಜಿಲ್ಲೆ. ಧಾರವಾಡ ನಗರ ಈ ಜಿಲ್ಲೆಯ ಕೇಂದ್ರಸ್ಥಳ. ಹುಬ್ಬಳ್ಳಿ ಮತ್ತು ಧಾರವಾಡ ಅವಳಿ ನಗರಗಳು. ೨೦೧೧ರ ಜನಗಣತಿಯಂತೆ ಜನಸಂಖ್ಯೆ ೧೮,೪೭,೦೨೩ ಆಗಿದ್ದು, ಇದರಲ್ಲಿ ಪುರುಷರು ೯,೩೭,೨೦೬ ಮತ್ತು ಮಹಿಳೆಯರು ೯,೦೯,೮೧೭ ಆಗಿದೆ, ಜಿಲ್ಲೆಯ ವಿಸ್ತೀರ್ಣ ೪೨೬೦ ಕಿ.ಮೀ ವಿಸ್ತೀರ್ಣ ಹೊಂದಿದ್ದು, ಜನಸಾಂದ್ರತೆ ೪೩೪ ಚದರ ಕಿ.ಮೀ ಇದೆ.

ನಕ್ಷೆ: ಸಮೀಕ್ಷೆಗೊಳಪಟ್ಟ ಧಾರವಾಡ
ಚಪ್ಪರ್‌ಬಂದ್ ಸಮುದಾಯ



ಧಾರವಾಡವನ್ನು ೭ನೇ ಶತಮಾನದಲ್ಲಿ ಚಾಲುಕ್ಯರು, ಕ್ರಿ.ಶ ೯ನೇ ಶತಮಾನದಲ್ಲಿ ರಾಷ್ಟ್ರಕೂಟರು, ೧೨ನೇ ಶತಮಾನದಲ್ಲಿ ದೇವಗಿರಿಯ ಯಾದವರು ಆಳ್ವಿಕೆ ಮಾಡಿದರು. ೧೨ನೇ ಶತಮಾನದವರೆಗೆ ಧಾರವಾಡ ಜಿಲ್ಲೆ ಚಾಲುಕ್ಯ ಸಾಮ್ರಾಜ್ಯದ ಭಾಗವಾಗಿದ್ದಿತು. ನಂತರ ವಿಜಯನಗರ ಸಾಮ್ರಾಜ್ಯದ ಭಾಗವಾಯಿತು. ವಿಜಯನಗರ ಪತನದ ನಂತರ ಆದಿಲ್ ಶಾಹಿ ಸುಲ್ತಾನರ ಕೈ ಸೇರಿತು. ನಂತರ ಸ್ವಲ್ಪ ಕಾಲ ಮೊಘಲ್ ಸಾಮ್ರಾಜ್ಯದ ಕೈಯಲ್ಲಿದ್ದು ನಂತರ ಅನುಕ್ರಮವಾಗಿ ಮರಾಠರು, ಹೈದರ್‌ಅಲಿ ಮತ್ತು ಟಿಪ್ಪು ಸುಲ್ತಾನ್ ಹಾಗೂ ಬ್ರಿಟಿಷರ ಕೈ ಸೇರಿತು. ನಂತರ ಮುಂಬಯಿ ಸರ್ಕಾರದ ಆಡಳಿತದಲ್ಲಿದ ಧಾರವಾಡ 'ಕರ್ನಾಟಕ ಏಕೀಕರಣ'ದ ನಂತರ ಕರ್ನಾಟಕಕ್ಕೆ ಸೇರಿತು(https://kn.wikipedia.org/w/index.php?title=ಧಾರವಾಡ&oldid=530930).

ಧಾರವಾಡ ನಗರದ ಚಪ್ಪರ್‌ಬಂದ್ ಕಾಲೋನಿ/ಜನ್ನತ್ ನಗರ ಎಂಬಲ್ಲಿ ಚಪ್ಪರ್‌ಬಂದ್ ಸಮುದಾಯದವರು ನೆಲೆಸಿದ್ದಾರೆ. ಇದು ಸೆಟ್ಲ್‌ಮೆಂಟ್ ಅಲ್ಲದ ಪ್ರದೇಶವಾಗಿದೆ. ಅಂದರೆ ಗದಗ, ಹುಬ್ಬಳ್ಳಿ, ವಿಜಯಪುರ, ಬಾಗಲಕೋಟೆ, ಮತ್ತು ಸೋಲಾಪುರಗಳಿಂದ ಉದ್ಯೋಗ ಹುಡುಕುತ್ತ ಇಲ್ಲಿ ಬಂದು ನೆಲೆಸಿದ್ದಾರೆ. ಅನೇಕ ವರ್ಷಗಳ ಹಿಂದೆ ಇಲ್ಲಿ ವಲಸೆ ಬಂದು ನೆಲೆಸಿ ತಮ್ಮದೇ ಆದ ನಗರವನ್ನು ನಿರ್ಮಿಸಿಕೊಂಡಿದ್ದಾರೆ. ಇಲ್ಲಿ ಚಪ್ಪರ್‌ಬಂದ್ ಸಮುದಾಯ ದವರು ತಾವೇ ಒಂದು ದೊಡ್ಡ 'ಮಸ್‌ಜೀದ್' ಅನ್ನು ನಿರ್ಮಿಸಿಕೊಂಡಿದ್ದಾರೆ ಹಾಗೂ ಇಲ್ಲಿ ಒಂದು ಅಂಗನವಾಡಿ ಕೇಂದ್ರ ಸಹ ಇದೆ. ಇಲ್ಲಿ ಚಪ್ಪರ್‌ಬಂದ್ ಸಮುದಾಯದ 'ಬಡೇಭಾಯಿ' ಮತ್ತು 'ಛೋಟೆಭಾಯಿ' ಎರಡೂ ಗುಂಪಿನವರು ನೆಲೆಸಿದ್ದಾರೆ.

**ಕೋಷ್ಟಕ ೩.೨೬: ಸಮೀಕ್ಷೆಗೊಳಪಟ್ಟ ಧಾರವಾಡದ**

**ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗ ಪ್ರಮಾಣ**

**ಬಾಗಲಕೋಟ್ (ಜಿ) ಬಾದಾಮಿ (ತಾ)**

| ಧಾರವಾಡ-ಜನ್ನತ್ ನಗರ | | | | |
|---|---|---|---|---|
| ಒಟ್ಟು ಕುಟುಂಬಗಳು | ೪೮ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೧೦೯ | ೪೮.೪ | ೧೦೬೪ | ೪.೬೯ |
| ಮಹಿಳೆಯರು | ೧೧೬ | ೫೧.೬ | | |
| ಒಟ್ಟು ಜನಸಂಖ್ಯೆ | ೨೨೫ | ೧೦೦.೦ | ೧೦೬೪ | ೫ |

ಸಮೀಕ್ಷೆಗೊಳಪಟ್ಟ ೪೮ ಕುಟುಂಬಗಳ ಒಟ್ಟು ಜನಸಂಖ್ಯೆ ೨೨೫ ಇದ್ದು, ಇದರಲ್ಲಿ ಶೇ.೪೮.೪ ರಷ್ಟು ಪುರುಷರು ಮತ್ತು ಶೇ.೫೧.೬ ರಷ್ಟು ಪ್ರಮಾಣದಲ್ಲಿ ಮಹಿಳೆಯರಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೫ ಇದೆ. ಲಿಂಗಾನುಪಾತವು ೧೦೬೪ ಇದೆ. ಇಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಹೆಚ್ಚಿರುವುದು ಕಂಡುಬರುತ್ತದೆ.

**ಕೋಷ್ಟಕ ೩.೨೭: ಸಮೀಕ್ಷೆಗೊಳ ಪಟ್ಟ ಧಾರವಾಡದ**

**ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೫೮ | ೬೩ | ೧೨೧ |
| ವಿವಾಹಿತರು | ೫೧ | ೫೧ | ೧೦೨ |
| ವಿಧುರ/ವಿಧವೆಯರು | ೦ | ೨ | ೨ |
| ಒಟ್ಟು | ೧೦೯ | ೧೧೬ | ೨೨೫ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೫೩.೭ ರಷ್ಟು ಪ್ರಮಾಣದಲ್ಲಿ ಅವಿವಾಹಿತರಿದ್ದು, ಅವರಲ್ಲಿ ಶೇ.೨೫.೭ ರಷ್ಟು ಪುರುಷರು ಮತ್ತು ಶೇ.೨೮ ರಷ್ಟು ಮಹಿಳೆಯರಿದ್ದಾರೆ. ವಿವಾಹಿತರು ಶೇ.೪೫.೪ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೨.೭ ರಷ್ಟು ಮತ್ತು ಮಹಿಳೆಯರು ಶೇ.೨೨.೭ ರಷ್ಟು ಪ್ರಮಾಣದಲ್ಲಿದ್ದಾರೆ. ಶೇ.೦.೯ ರಷ್ಟು ಪ್ರಮಾಣದಲ್ಲಿ ವಿಧವೆಯರು ಮಾತ್ರ ಇದ್ದಾರೆ.

**ಕೋಷ್ಟಕ ೩.೨೮: ಸಮೀಕ್ಷೆಗೊಳಪಟ್ಟ ಧಾರವಾಡದ**

**ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೫ | ೧೦ | ೧೧ | ೨೧ |
| ೬–೧೭ | ೩೬ | ೪೪ | ೮೦ |
| ೧೮–೪೦ | ೪೩ | ೫೨ | ೯೫ |
| ೪೧–೬೦ | ೨೦ | ೯ | ೨೯ |
| ೬೧+ರ ಮೇಲ್ಪಟ್ಟ | ೦೦ | ೦೦ | ೦೦ |
| ಒಟ್ಟು | ೧೦೯ | ೧೧೬ | ೨೨೫ |

ಸಮೀಕ್ಷೆಗೊಳಪಟ್ಟವರಲ್ಲಿ ೦-೫ರ ವಯೋ ಗುಂಪಿನವರು ಶೇ.೯.೨ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೪.೪ರಷ್ಟು ಮತ್ತು ಮಹಿಳೆಯರು ಶೇ.೪.೮ ರಷ್ಟಿದ್ದಾರೆ. ೬ ರಿಂದ ೧೭ ವಯಸ್ಸಿನವರು ಶೇ.೩೫.೬ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೬ ರಷ್ಟು ಮತ್ತು ಮಹಿಳೆಯರು ಶೇ.೧೯.೬ ರಷ್ಟಿದ್ದಾರೆ. ಇಲ್ಲಿ ಮಹಿಳೆಯರು ಹೆಚ್ಚಿದ್ದಾರೆ. ೧೮ ರಿಂದ ೪೦ ವಯಸ್ಸಿನವರು ಶೇ.೪೨.೪ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೯.೨ ರಷ್ಟು ಮತ್ತು ಮಹಿಳೆಯರು ಶೇ.೨೩.೨ ರಷ್ಟಿದ್ದಾರೆ. ಇಲ್ಲಿ ಸಹ ಮಹಿಳೆಯರು ಹೆಚ್ಚಿದ್ದಾರೆ. ೪೧ ರಿಂದ ೬೦ ವಯಸ್ಸಿನವರು ಶೇ.೧೨.೮ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೮.೮ ರಷ್ಟು ಮತ್ತು ಮಹಿಳೆಯರು ಶೇ.೪ ರಷ್ಟಿದ್ದಾರೆ.

**ದಾವಣಗೆರೆ- ಸರ್ ಮಿರ್ಜಾ ಇಸ್ಮಾಯಿಲ್ ನಗರ**

ದಾವಣಗೆರೆಯು ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಯಾಗಿದೆ. ಇದು ಜವಳಿ ಉದ್ಯಮಕ್ಕೆ ಜನಪ್ರಿಯವಾಗಿದೆ. ಇಲ್ಲಿನ ದಾವಣಗೆರೆ ಕಾಟನ್ ಮಿಲ್ಸ್ ಬಹಳ ಜನಪ್ರಿಯವಾದ ಹೆಸರು. ದಾವಣಗೆರೆಯ ಮೊದಲಿನ ಹೆಸರು 'ದವನಗಿರಿ' ಅದು ಕಾಲಕ್ರಮೇಣ ದಾವಣಗೆರೆಯಾಯಿತು. ಇದು ಕರ್ನಾಟಕದ ಪ್ರಮುಖ ವ್ಯಾಪಾರ ಸ್ಥಳವಾಗಿದ್ದು, ಇತ್ತೀಚೆಗೆ ಪ್ರಮುಖ ವಿದ್ಯಾಕೇಂದ್ರವಾಗಿ ಬೆಳೆದಿದೆ. ಇದು ಬೆಣ್ಣೆ ದೋಸೆಗೆ ಪ್ರಸಿದ್ಧಿ ಪಡೆದಿದೆ.

ದಾವಣಗೆರೆಯು ಶಿವಮೊಗ್ಗ, ಚಿತ್ರದುರ್ಗ, ಹಾವೇರಿ ಮತ್ತು ಬಳ್ಳಾರಿ ಜಿಲ್ಲೆಗಳಿಂದ ಸುತ್ತುವರೆದಿದೆ. ಇದು ಕರ್ನಾಟಕದ ಹೃದಯ ಭಾಗದಲ್ಲಿ ೧೪೦ ೨೮೦ ರೇಖಾಂಶ ಮತ್ತು ೭೫೦ ೫೯೦ ಅಕ್ಷಾಂಶದಲ್ಲಿದ್ದು, ಸಮುದ್ರಮಟ್ಟದಿಂದ ೬೦೨.೫ ಮೀ. ಎತ್ತರದಲ್ಲಿದೆ.

ದಾವಣಗೆರೆಯು ಮೊದಲು ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕಾಗಿತ್ತು. ನಂತರ ೧೯೯೭ರಲ್ಲಿ ಅಂದಿನ ಮುಖ್ಯಮಂತ್ರಿ ಜೆ ಹೆಚ್ ಪಟೇಲ್ ರವರು ದಾವಣಗೆರೆಯನ್ನು ಸ್ವತಂತ್ರ ಜಿಲ್ಲೆಯಾಗಿ ಮಾರ್ಪಡಿಸಿದರು. ೨೦೧೧ರ ಜನಗಣತಿಯ ಪ್ರಕಾರ ದಾವಣಗೆರೆಯು ಒಟ್ಟು ೪,೩೫,೧೨೮ ರಷ್ಟು ಜನಸಂಖ್ಯೆಯನ್ನು ಹೊಂದಿದೆ (https://kn.wikipedia.org/w/index.php?title=ದಾವಣಗೆರೆ&oldid=731206).

ಚಪ್ಪರ್‌ಬಂದ್ ಸಮುದಾಯದವರು ಗದಗ, ಹುಬ್ಬಳ್ಳಿ, ಧಾರವಾಡ, ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಿಂದ ಕೆಲಸಕ್ಕಾಗಿ ವಲಸೆ ಬಂದು, ಈ ನಗರದ ಸರ್ ಮಿರ್ಜಾ ಇಸ್ಮಾಯಿಲ್ ನಗರದಲ್ಲಿ ನೆಲೆಸಿದ್ದಾರೆ. ಇಲ್ಲಿ ಕೇವಲ ಛೋಟೆ ಭಾಯಿ ಗುಂಪಿನ ಬೆರಳೆಣಿಕೆಯಷ್ಟು ಕುಟುಂಬಗಳು ಮಾತ್ರ ನೆಲೆಸಿವೆ.

ನಕ್ಷೆ: ಸಮೀಕ್ಷೆಗೊಳಪಟ್ಟ ದಾವಣಗೆರೆ
ಚಪ್ಪರ್‌ಬಂದ್ ಸಮುದಾಯ



**ಕೋಷ್ಟಕ ೩.೨೯: ಸಮೀಕ್ಷೆಗೊಳಪಟ್ಟ ದಾವಣಗೆರೆಯ**

**ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ಮತ್ತು ಲಿಂಗಪ್ರಮಾಣ**

| ದಾವಣಗೆರೆ –ಸರ್ ಮಿರ್ಜಾ ಇಸ್ಮಾಯಿಲ್ ನಗರ | | | | |
|---|---|---|---|---|
| ಒಟ್ಟು ಕುಟುಂಬಗಳು | ೧೦ | | | |
| ಲಿಂಗವಾರು | ಸಂಖ್ಯೆ | ಶೇಕಡ | ಲಿಂಗಾನುಪಾತ | ಕುಟುಂಬ ಗಾತ್ರ |
| ಪುರುಷರು | ೨೨ | ೫೧.೨ | ೯೫೪ | ೪.೩ |
| ಮಹಿಳೆಯರು | ೨೧ | ೪೮.೮ | | |
| ಒಟ್ಟು ಜನಸಂಖ್ಯೆ | ೪೩ | ೧೦೦.೦ | ೯೫೪ | ೪ |

ಸಮೀಕ್ಷೆಗೊಳಪಟ್ಟ ೧೦ ಕುಟುಂಬಗಳ ಒಟ್ಟು ಜನಸಂಖ್ಯೆ ೪೩ ಆಗಿದ್ದು, ಅದರಲ್ಲಿ ಪುರುಷರು ಶೇ.೫೧.೨ ರಷ್ಟು ಮತ್ತು ಮಹಿಳೆಯರು ಶೇ.೪೮.೮ ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಇಲ್ಲಿನ ಕುಟುಂಬ ಗಾತ್ರದ ಪ್ರಮಾಣ ಶೇ.೪ ಇದೆ. ಇಲ್ಲಿನ ಲಿಂಗಾನುಪಾತವು ೯೫೪ ಇದೆ.

**ಕೋಷ್ಟಕ ೩.೩೦: ಸಮೀಕ್ಷೆಗೊಳಪಟ್ಟ ದಾವಣಗೆರೆಯ**

**ಚಪ್ಪರ್‌ಬಂದ್ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನಗಳು | ಲಿಂಗವಾರು ಜನಸಂಖ್ಯೆ | | |
|---|---|---|---|
| | ಗಂಡು | ಹೆಣ್ಣು | ಒಟ್ಟು |
| ಅವಿವಾಹಿತರು | ೧೦ | ೯ | ೧೯ |
| ವಿವಾಹಿತರು | ೧೨ | ೧೨ | ೨೪ |
| ವಿಧುರ/ವಿಧವೆಯರು | ೦೦ | ೦೦ | ೦೦ |
| ಒಟ್ಟು | ೨೨ | ೨೧ | ೪೩ |

ಸಮೀಕ್ಷೆಗೊಳಪಟ್ಟವರಲ್ಲಿ ಶೇ.೪೪.೨ ರಷ್ಟು ಅವಿವಾಹಿತರಿದ್ದು ಅದರಲ್ಲಿ ಪುರುಷರು ಶೇ.೨೫.೭ ರಷ್ಟು ಮತ್ತು ಮಹಿಳೆಯರು ಶೇ.೨೮ ರಷ್ಟು ಪ್ರಮಾಣದಲ್ಲಿದ್ದಾರೆ. ವಿವಾಹಿತರು ಶೇ.೫೫.೮ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೨೭.೯ ರಷ್ಟು ಮತ್ತು ಮಹಿಳೆಯರು ಶೇ.೨೭.೯ ರಷ್ಟು ಪ್ರಮಾಣದಲ್ಲಿದ್ದಾರೆ. ವಿಧವ/ವಿಧುರರ ಪ್ರಮಾಣ ಶೂನ್ಯವಾಗಿದೆ.

**ಕೋಷ್ಟಕ ೩.೩೧: ಸಮೀಕ್ಷೆಗೊಳಪಟ್ಟ ದಾವಣಗೆರೆಯ ಚಪ್ಪರ್‌ಬಂದ್ ಸಮುದಾಯದ ವಯೋಗುಂಪು ರಚನೆ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೫ | ೧ | ೦ | ೧ |
| ೬-೧೭ | ೫ | ೩ | ೮ |
| ೧೮-೪೦ | ೮ | ೧೦ | ೧೮ |
| ೪೧-೬೦ | ೭ | ೮ | ೧೫ |
| ೬೧+ರ ಮೇಲ್ಪಟ್ಟ | ೧ | ೦ | ೧ |
| ಒಟ್ಟು | ೨೨ | ೨೧ | ೪೩ |

ಸಮೀಕ್ಷೆಗೊಳಪಟ್ಟವರಲ್ಲಿ ೦-೫ರ ವಯಸ್ಸಿನವರು ಶೇ.೨.೪ರಷ್ಟು ಪ್ರಮಾಣದಲ್ಲಿ ಪುರುಷರು ಮಾತ್ರ ಇದ್ದಾರೆ. ೬ ರಿಂದ ೧೭ರ ವಯಸ್ಸಿನವರು ಶೇ.೧೮.೬ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೧೧.೬ ರಷ್ಟು ಮತ್ತು ಮಹಿಳೆಯರು ಶೇ.೭ ರಷ್ಟು ಪ್ರಮಾಣದಲ್ಲಿದ್ದಾರೆ. ೧೮ ರಿಂದ ೪೦ರ ವಯಸ್ಸಿನವರು ಶೇ.೪೧.೮ ರಷ್ಟಿದ್ದು, ಅದರಲ್ಲಿ ಪುರುಷರು ಶೇ.೧೮.೬ ರಷ್ಟು ಮತ್ತು ಮಹಿಳೆಯರು ಶೇ.೨೩.೨ ರಷ್ಟು ಪ್ರಮಾಣದಲ್ಲಿದ್ದಾರೆ. ಇಲ್ಲಿ ಮಹಿಳೆಯರು ಹೆಚ್ಚಿದ್ದಾರೆ. ೪೧ ರಿಂದ ೬೦ ರ ವಯಸ್ಸಿನವರು ಶೇ.೩೪.೮ ರಷ್ಟಿದ್ದು, ಅದರಲ್ಲಿ ಪುರುಷರು ಶೇ. ೧೬.೨ ರಷ್ಟು ಮತ್ತು ಮಹಿಳೆಯರು ಶೇ.೧೮.೬ ರಷ್ಟಿದ್ದಾರೆ. ೬೧ ಕ್ಕಿಂತ ಹೆಚ್ಚು ವಯಸ್ಸಿನವರು ಶೇ.೨.೪ ರಷ್ಟಿದ್ದು. ಅದರಲ್ಲಿ ಶೇ.೨.೪ ರಷ್ಟು ಪುರುಷರು ಮಾತ್ರ ಇದ್ದಾರೆ.

**ಕೋಷ್ಟಕ ೩.೩೨: ಸಮೀಕ್ಷೆಗೊಳಪಟ್ಟ ಚಪ್ಪರ್‌ಬಂದ್ ಒಟ್ಟು ಕುಟುಂಬಗಳಲ್ಲಿ ಗುಂಪುಗಳ ಪ್ರಮಾಣ**

| ಗುಂಪುಗಳು | ಕುಟುಂಬಗಳು |
|---|---|
| ಬಡೇ ಭಾಯಿ | ೪೦೮ |
| ಛೋಟೆ ಭಾಯಿ | ೨೩೬ |
| ಒಟ್ಟು | ೬೪೪ |

ಸಮೀಕ್ಷೆಗೊಳಪಟ್ಟ ಒಟ್ಟು ಕುಟುಂಬಗಳಲ್ಲಿ ಶೇ.೬೩.೪ ರಷ್ಟು ಪ್ರಮಾಣದಲ್ಲಿ ಬಡೇ ಭಾಯಿ ಗುಂಪಿದ್ದರೆ, ಶೇ.೩೬.೬ ರಷ್ಟು ಪ್ರಮಾಣದಲ್ಲಿ ಛೋಟೆ ಭಾಯಿ ಗುಂಪಿನವರಿದ್ದಾರೆ. ಇಲ್ಲಿ ಬಡೇ ಭಾಯಿ ಗುಂಪಿನವರ ಪ್ರಮಾಣ ಛೋಟೆ ಭಾಯಿ ಗುಂಪಿಗಿಂತ ಹೆಚ್ಚಿರುವುದನ್ನು ಕಾಣಬಹುದಾಗಿದೆ.

**ಕೋಷ್ಟಕ ೩.೩೩: ೩೧ ಮಾರ್ಚ್ ೧೯೩೪ರಲ್ಲಿ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಸೆಟ್ಲ್‌ಮೆಂಟ್‌ಗಳು | ಜನಸಂಖ್ಯೆ |
|---|---|
| ಸೋಲಾಪುರ | ೦೬ |
| ಬಿಜಾಪುರ | ೦೧ |
| ಹುಬ್ಬಳ್ಳಿ | ೦೨ |
| ನೀರಾ ಪ್ರಾಜೆಕ್ಟ್ ಕ್ಯಾಂಪ್ | ೦೪ |
| ಒಟ್ಟು | ೧೩ |

(Annual Report on the working of the Criminal Tribes Act in the Bombay Presidency (Bombay: Govt. Central Press: 1934)

**ಕೋಷ್ಟಕ ೩.೩೪: ೩೧ ಮಾರ್ಚ್ ೧೯೩೪ರಲ್ಲಿ ಫ್ರೀ ಕಾಲೋನಿಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಫ್ರೀ ಕಾಲೋನಿಗಳು | ಜನಸಂಖ್ಯೆ |
|---|---|
| ಸೋಲಾಪುರ | ೨೯೬ |
| ಹೋಟ್ಗಿ | ೨೯ |
| ಬಿಜಾಪುರ | ೧೧ |
| ಗದಗ | ೧೬೪ |
| ಹುಬ್ಬಳ್ಳಿ | ೬೦ |
| ಅಮ್ಬರ್‌ನಾಥ್ | ೦೯ |
| ಒಟ್ಟು | ೫೬೯ |

(Annual Report on the working of the Criminal Tribes Act in the Bombay Presidency (Bombay: Govt. Central Press: 1934)

**ಕೋಷ್ಟಕ ೩.೩೫: ೩೧ ಮಾರ್ಚ್ ೧೯೩೬ರಲ್ಲಿ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಸೆಟ್ಲ್‌ಮೆಂಟ್‌ಗಳು | ಜನಸಂಖ್ಯೆ |
|---|---|
| ಹುಬ್ಬಳ್ಳಿ | ೦೧ |
| ಸೋಲಾಪುರ | ೦೬ |
| ನೀರಾ ಪ್ರಾಜೆಕ್ಟ್ ಕ್ಯಾಂಪ್ | ೦೩ |
| ಒಟ್ಟು | ೧೦ |

(Annual Report on the working of the Criminal Tribes Act in the Bombay Presidency (Bombay: Govt. Central Press: 1936)

**ಕೋಷ್ಟಕ ೩.೩೬: ೩೧ ಮಾರ್ಚ್ ೧೯೩೬ರಲ್ಲಿ ಫ್ರೀ ಕಾಲೋನಿಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಫ್ರೀ ಕಾಲೋನಿಗಳು | ಜನಸಂಖ್ಯೆ |
|---|---|
| ಸೋಲಾಪುರ | ೩೩೯ |
| ಹೋಟ್ಗಿ | ೩೮ |
| ಬಿಜಾಪುರ | ೦೩ |
| ಬಾಗಲಕೋಟೆ | ೨೮ |
| ಗದಗ | ೧೬೭ |
| ಹುಬ್ಬಳ್ಳಿ | ೪೬ |
| ಅಮ್ಬರ್‌ನಾಥ್ | ೦೯ |
| ಒಟ್ಟು | ೬೩೦ |

(Annual Report on the working of the Criminal Tribes Act in the Bombay Presidency (Bombay: Govt. Central Press: 1936)

**ಕೋಷ್ಟಕ ೩.೩೭: ೩೧ ಮಾರ್ಚ್ ೧೯೩೭ರಲ್ಲಿ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಸೆಟ್ಲ್‌ಮೆಂಟ್‌ಗಳು | ಜನಸಂಖ್ಯೆ |
|---|---|
| ಸೋಲಾಪುರ | ೦೭ |
| ನೀರಾ ಪ್ರಾಜೆಕ್ಟ್ ಕ್ಯಾಂಪ್ | ೦೩ |
| ಒಟ್ಟು | ೧೦ |

(Annual Report on the working of the Criminal Tribes Act in the Bombay Presidency (Bombay: Govt. Central Press: 1937)

**ಕೋಷ್ಟಕ ೩.೩೮: ೩೧ ಮಾರ್ಚ್ ೧೯೩೭ರಲ್ಲಿ ಫ್ರೀ ಕಾಲೋನಿಗಳಲ್ಲಿ ನೆಲೆಸಿದ್ದ ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ**

| ಫ್ರೀ ಕಾಲೋನಿಗಳು | ಜನಸಂಖ್ಯೆ |
|---|---|
| ಹುಬ್ಬಳ್ಳಿ<br>೪೪ | |
| ಗದಗ | ೧೬೯ |
| ಸೋಲಾಪುರ | ೩೩೭ |
| ಹೋಟ್ಗಿ | ೪೧ |
| ಬಾಗಲಕೋಟೆ | ೨೭ |
| ಬಿಜಾಪುರ | ೦೩ |
| ಒಟ್ಟು | ೬೨೧ |

(Annual Report on the working of the Criminal Tribes Act in the Bombay Presidency (Bombay: Govt. Central Press: 1937)

**ಆಧಾರಗಳು**

ಮಲ್ಲಿಕಾರ್ಜುನ ಬಿ ಮಾನ್ಪಡೆ, *ತಂತಿಬೇಲಿಯೊಳಗಿನ ಜಗತ್ತು* (ಶಿವಮೊಗ್ಗ: ಗೀತಾಂಜಲಿ ಪ್ರಕಾಶನ: ೨೦೧೪)

ವೆಂಕಟರಂಗೋ ಕಟ್ಟಿ, ಗೆಝೆಟಿಯರ್; ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು (ಮುಂಬೈ: ಗೌವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೋ: ೧೮೯೩)

Annual Reports on the working of the Criminal Tribes Act in the Bombay Presidency (Bombay: Govt. Central press: 1934, 1936, 1937)

Bradley Hawkins, *Asian Religions* (Newyork: Pearson Longman: 2004)

Edgar Thurston, *Castes and Tribes of Southern India* (Chennai: MJP publishers: 2014: vol-2)

Enthoven R E, *The Tribes and Castes of Bombay* (New delhi: Asian Educational Services: 1990: vol-1)

Gayer G W, *Some Criminal Tribes of India* (Nagpur: Govt. press: 1906)

Gayer G W, *Lectures on some Criminal Tribes of India and Religions Mendicants* (www.General-Books.net)

Huddar M G, ''Anthropo-Criminological study of Chapparband of Bijapur and Dharwad Districts'' (Unpublished ph.D thesis, Dhrwad: Karnatak University: 1995)

Kennedy M, *Criminal classes in the Bombay Presidency* (Bombay: Govt.central press: 1908)

Singh K S (G.E), *People of India-Karnataka* (New Delhi: Affialiated East-West press Ltd: 2003: vol-26)

**ಅಂತರ್ಜಾಲ ಮಾಹಿತಿ**

https://kn.wikipedia.org/w/index.php?title=ಗದಗ&oldid=583652

https://en.wikipedia.org/w/index.php?title=Hubli&oldid=751372292

https://kn.wikipedia.org/w/index.php?title=ವಿಜಯಪುರ&oldid=591180

https://kn.wikipedia.org/w/index.php?title=ಬಾಗಲಕೋಟೆ&oldid=531030

https://kn.wikipedia.org/w/index.php?title=ಧಾರವಾಡ&oldid=530930

https://kn.wikipedia.org/w/index.php?title=ದಾವಣಗೆರೆ&oldid=731206

ಅಧ್ಯಾಯ – ೪

# ಚಪ್ಪರ್‌ಬಂದರ ಸಾಮಾಜಿಕ ಜೀವನ

ಚಪ್ಪರ್‌ಬಂದರ ಕೌಟುಂಬಿಕ ಪದ್ಧತಿ

ಚಪ್ಪರ್‌ಬಂದರ ಗುಂಪುಗಳು ಮತ್ತು ಬೆಡಗುಗಳು

ಜೀವನಾವರ್ತನ ಆಚರಣೆಗಳು

ಆಹಾರ ಪದ್ಧತಿ

ಉಡುಗೆ–ತೊಡುಗೆ

ನ್ಯಾಯ ಪದ್ದತಿ

ಧರ್ಮ ಮತ್ತು ಹಬ್ಬಗಳು

ಭಾಷೆ ಮತ್ತು ಸಾಹಿತ್ಯ

ಸ್ತ್ರೀಯರ ಸ್ಥಾನಮಾನ

## ಅಧ್ಯಾಯ ನಾಲ್ಕು

# ಚಪ್ಪರ್‌ಬಂದ್ ಸಮುದಾಯದ ಸಾಮಾಜಿಕ ಜೀವನ

ಮಾನವನು ಸಮಾಜ ಜೀವಿ ಹಾಗೂ ಸಮೂಹ ಜೀವಿ. ಅವನು ಒಂಟಿಯಾಗಿ ಜೀವಿಸಲಾರ, ಇನ್ನಿತರ ವ್ಯಕ್ತಿಗಳ ಒಡನಾಟದಿಂದ ಜೀವಿಸುವನು. ಅವನ ಬೇಡಿಕೆಗಳು ಸಮೂಹದಲ್ಲಿ ಜೀವಿಸಲು ಪ್ರೇರೆಪಿಸುತ್ತವೆ. ಸಮೂಹದಲ್ಲಿ ಇನ್ನಿತರರ ಜೊತೆಯಲ್ಲಿ ಕೂಡಿ ಬಾಳುವುದರಿಂದ ಸಂತೋಷ, ಸುಖ ಹಾಗೂ ನೆಮ್ಮದಿ ದೊರೆಕುತ್ತದೆ. ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಲು ಸಮೂಹಗಳ ಸಂಪರ್ಕವು ಸಹಾಯ ಮಾಡುವುದು. ಕುಟುಂಬ, ನೆರೆಹೊರೆ, ಗೆಳೆಯರ ಬಳಗ, ಆರ್ಥಿಕತೆ, ಉದ್ಯೋಗ ಇತ್ಯಾದಿ ಸಮೂಹಗಳು ಮಾನವನ ವಿಕಾಸದಲ್ಲಿ ನೆರವಾಗುವವು. ಸಾಮಾನ್ಯ ಆಸಕ್ತಿಗಳು ಜನರನ್ನು ಒಂದುಗೂಡಿಸಿ ಸಮೂಹ ಕಟ್ಟಲು ಪ್ರೇರೆಪಿಸುವವು ಹೀಗೆ ಜನರು ಒಂದುಗೂಡಿದಾಗ ಅವರಲ್ಲಿ ಏಕತಾ ಮನೋಭಾವನೆ, ನಾವು, ನಮ್ಮವರೆಂಬ ಭಾವನೆಗಳು ಕಂಡುಬರುತ್ತವೆ.

ವ್ಯಕ್ತಿ ಸಮೂಹಗಳ ಒಡನಾಟ ಬಹಳ ಮುಖ್ಯ ಪಾತ್ರವಹಿಸುತ್ತದೆ. ಈ ಸಮೂಹಗಳಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವೆ ಸಾಮಾಜಿಕ ಕ್ರಿಯೆ ಅಂತರ್‌ಕ್ರಿಯೆಗಳ ಕ್ರಮಗಳಿಂದ ಸಮಾಜ ರಚನೆಯಾಗಿರುತ್ತದೆ. ಹೀಗಾಗಿ ಮಾನವನು ತನ್ನದೆ ಆದಂತಹ ಸಾಮುದಾಯಿಕ ಭಾವನೆಗಳಿಗೆ ಸ್ಪಂದಿಸುವ ಜನ ಸಮೂಹಗಳ ಚೌಕಟ್ಟಿನಲ್ಲಿ ಸುಖ ಸಂತೋಷದಿಂದ ಜೀವನ ಮಾಡಲು ನಾಗರಿಕ ವ್ಯವಹಾರವನ್ನು ಮಾಡಿಕೊಂಡಿರುವನು.

ಮಾನವ ಸಮಾಜವು ಸಾಮಾಜಿಕ ಸಂಬಂಧಗಳ ಬಲೆ. ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧವೇರ್ಪಡಿಸುವ ಪ್ರಕ್ರಿಯೆಯು ವ್ಯವಸ್ಥೆಯೊಂದನ್ನು ಹೋಲುತ್ತಿದ್ದು, ಅಂತಹ ವ್ಯವಸ್ಥೆಯನ್ನು

'ಸಾಮಾಜಿಕ ವ್ಯವಸ್ಥೆ' ಎಂದು ಕರೆಯಲಾಗುತ್ತದೆ. ಇದೊಂದು ಸಮಾಜದ ಘಟಕಗಳಾದ ಅಥವಾ ಭಾಗಗಳಾದ ಸಾಮಾಜಿಕ ಸಂಬಂಧಗಳ ಕ್ರಮಬದ್ಧ ವ್ಯವಸ್ಥೆಯಾಗಿದೆ.

ಜೀವನ ವಿಧಾನ ಸಾಮಾಜಿಕ ವ್ಯವಸ್ಥೆಯ ಕುರಿತು ಟಾಲ್ಕಾಟ್ ಪಾರ್ಸನ್ಸ್‌ರವರು "ಸಾಮಾಜಿಕ ವ್ಯವಸ್ಥೆಯು ಸದಸ್ಯರ ಅಂತರ ಕ್ರಿಯೆಗಳನ್ನೊಳಗೊಂಡಿದೆ. ಈ ಅಂತರ ಕ್ರಿಯೆಯಲ್ಲಿ ಭಾಗವಹಿಸುವ ಸದಸ್ಯರು ಪರಸ್ಪರ ಹಂಚಿಕೊಳ್ಳಲ್ಪಡುವ ರಚನಾತ್ಮಕವಾದ ಚಿಹ್ನೆ ಹಾಗೂ ಪರಸ್ಪರ ಅಪೇಕ್ಷಣೀಯ ಮಾಧ್ಯಮಗಳ ಮೂಲಕ ಸಂಧಿಸುತ್ತಾರೆ, ಸಾಮಾಜಿಕ ವ್ಯವಸ್ಥೆಯು ಒಂದು ನಿರ್ಧಿಷ್ಟ ಭೌತಿಕ ಪರಿಸರದಲ್ಲಿ ಪರಸ್ಪರ ಅಂತರ್ ಕ್ರಿಯೆ ನಡೆಸುವ ಹಾಗೂ ಸಾಂಸ್ಕೃತಿಕ ಮಾಧ್ಯಮಗಳ ಮೂಲಕ ಸಂಪರ್ಕಿಸುವ ವ್ಯಕಿಗಳ ಸಮೂಹವನ್ನು ಹೊಂದಿರುತ್ತದೆ" ಎಂದು ಹೇಳಿದ ಮಾತುಗಳಲ್ಲಿ ಸಾಮಾಜಿಕ ವ್ಯವಸ್ಥೆಯ ಸಮಗ್ರ ಚಿತ್ರಣ ಕಂಡುಬರುತ್ತದೆ. ಸಾಮಾಜಿಕ ವ್ಯವಸ್ಥೆಯು ಪರಿಸರ, ಕಾಲ ಮತ್ತು ಸ್ಥಳಗಳನ್ನಾಧರಿಸಿರುವುದು. ಆದ್ದರಿಂದ ಅದು ಕಾಲದಿಂದ ಕಾಲಕ್ಕೆ, ಸಮೂಹದಿಂದ ಸಮೂಹಕ್ಕೆ ಭಿನ್ನವಾಗಿರುತ್ತದೆ. ಸಮಾಜದಲ್ಲಿನ ಸದಸ್ಯರುಗಳ ಅಂತರ್ ಸಂಬಂಧಗಳು ಮತ್ತು ಅಂತರ್ ಕ್ರಿಯೆಗಳು, ಸ್ವರೂಪ ಹಾಗೂ ವ್ಯಾಪ್ತಿಗಳು ಪ್ರಚಲಿತ ಸಂಸ್ಕೃತಿಯಿಂದ ನಿರ್ಧರಿಸಲ್ಪಡುತ್ತವೆ. ಮಾನವನ ಸಾಮಾಜಿಕ ಜೀವನದಲ್ಲಿ ಸಾಮಾಜೀಕರಣ ಮತ್ತು ಸಾಮಾಜಿಕ ನಿಯಂತ್ರಣ ಸಾಮಾಜಿಕ ವ್ಯವಸ್ಥೆಗೆ ಸಹಾಯಕವಾಗಿರುವ ಪ್ರಮುಖ ಅಂಶಗಳು. ಒಟ್ಟಿನಲ್ಲಿ 'ವ್ಯವಸ್ಥೆ' ಎಂದರೆ ಕ್ರಮಬದ್ಧತೆ ಎಂದರ್ಥ. ವ್ಯವಸ್ಥೆಯಲ್ಲಿರುವ ವಿವಿಧ ಭಾಗಗಳು ಒಂದಕೊಂದು ಸಂಬಂಧಿಸಿರುತ್ತವೆ.

ಚಪ್ಪರ್‌ಬಂದ್ ಸಮುದಾಯದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯು ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಕಾರ, ವಿವಿಧ ನಿಯಮಗಳು, ವರ್ಗಗಳು, ಉಡುಗೆ-ತೊಡುಗೆ, ಆಹಾರ, ವಸತಿ, ವೃತ್ತಿ, ಬೆಡಗುಗಳು, ವಿವಾಹ, ಕುಟುಂಬ, ನ್ಯಾಯಪದ್ಧತಿ ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ವ್ಯವಸ್ಥೆಯಾಗಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಇತರ ಹಲವಾರು ಉಪ ವ್ಯವಸ್ಥೆಗಳಿದ್ದು, ಇವೆಲ್ಲವೂ ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಈ ಕಾರ್ಯ ನಿರ್ವಹಣೆಯಲ್ಲಿ ಕ್ರಮಬದ್ಧತೆ ಇರುತ್ತದೆ. ಸೆಟ್ಲ್‌ಮೆಂಟ್ ಒಳಗೆ ಹಾಗೂ ಸೆಟ್ಲ್‌ಮೆಂಟ್ ಹೊರಗೆ ವಾಸಿಸುವ ಚಪ್ಪರ್‌ಬಂದ್ ಸಮುದಾಯದ ಸಾಮಾಜಿಕ ಜೀವನದಲ್ಲಿ ನಾವು ಸ್ವಲ್ಪ ಭಿನ್ನತೆಯನ್ನು ಕಾಣಬಹುದು. ಇವರು ಬುಡಕಟ್ಟು ಮೂಲವನ್ನು ಹೊಂದಿರುವುದರಿಂದ ಇವರ ಪ್ರತಿಯೊಂದು ಆಚರಣೆಯಲ್ಲೂ ನಾವು ಬುಡಕಟ್ಟು ಸಂಸ್ಕೃತಿಯನ್ನು ಕಾಣುತ್ತೇವೆ. ಆದರೆ ಇವರು 'ಸ್ವಾಂಗೀಕರಣ' ಪ್ರಕ್ರಿಯೇಗೊಳಗಾಗಿರುವುರಿಂದ, ಇವರು ಇತರೆ ಸಂಸ್ಕೃತಿಯನ್ನು ಸಹ ಅಳವಡಿಸಿಕೊಂಡಿರುವುದರಿಂದ, ಇವರ ಮೂಲ ಆಚರಣೆಗಳಲ್ಲಿ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ.

**ಚಪ್ಪರ್‌ಬಂದ್ ಸಮುದಾಯದ ಕೌಟುಂಬಿಕ ಪದ್ಧತಿ**

ಸಮಾಜದಲ್ಲಿ ಕುಟುಂಬ ಕೇಂದ್ರ ಬಿಂದುವಾಗಿದೆ. ಕುಟುಂಬವು ಮುಖ್ಯವಾಗಿ ಲೈಂಗಿಕತೆ, ಸಂತಾನೋತ್ಪತ್ತಿ, ಮಕ್ಕಳ ಲಾಲನೆ-ಪಾಲನೆ, ಶಿಕ್ಷಣ, ಆರೋಗ್ಯ, ಮನೋರಂಜನೆ, ಇತ್ಯಾದಿಗಳನ್ನು ನೀಡುವ ಹಾಗೂ ವ್ಯಕ್ತಿಯನ್ನು ಉತ್ತಮ ಪ್ರಜೆಯನ್ನಾಗಿ ರೂಪಿಸುವ ಕಾರ್ಯ ಹೊಂದಿದೆ. ಕುಟುಂಬ ಸಮಾಜದ ನಿರಂತರ ಚಲನೆಗೆ ಕಾರಣವಾಗಿರುತ್ತದೆ. ಕುಟುಂಬವು ಒಂದು ಸಾರ್ವತ್ರಿಕವಾದ ಸಂಸ್ಥೆಯಾಗಿದೆ. ಅದು ಅತ್ಯಂತ ಸರಳವಾದ ಹಾಗೂ ಸೂಕ್ಷ್ಮವಾದ ಸಮಾಜವಿದ್ದಂತೆ. ಕುಟುಂಬವಿಲ್ಲದೆ ಸಮಾಜವಿಲ್ಲ. ಅದು ಮಾನವನ ಸಾಮಾಜಿಕ ಜೀವನದ ತಳಹದಿಯಾಗಿದೆ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ಕೊಡುವುದು ಕುಟುಂಬವೇ, ಉಳಿದೆಲ್ಲ ಸಂಸ್ಥೆಗಳಿಗಿಂತ ಇದು ಹೆಚ್ಚು ಶಾಶ್ವತವೂ, ಪ್ರಭಾವಿಯೂ ಆಗಿರುತ್ತದೆ. ತಾಯಿ-ತಂದೆ-ಮಕ್ಕಳ ನಡುವಣ ಜೈವಿಕ ಸಂಬಂಧ, ಕುಟುಂಬ ರಚನೆಗೆ ಪ್ರೇರಣೆ ಎನ್ನಲಾಗಿದೆ. ಮಗುವಿನ ಸಾಮಾಜೀಕರಣ ಕ್ರಿಯೆಯಲ್ಲಿ ಕುಟುಂಬ ಪ್ರಧಾನ ಪಾತ್ರ ವಹಿಸುತ್ತದೆ. ಸಾಮಾಜೀಕರಣವು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುವ ಕ್ರಿಯೆಯಾಗಿದೆ. ಹಿರಿಯರನ್ನು ಗೌರವಿಸುವುದು, ರೂಢಿ-ಸಂಪ್ರದಾಯಬದ್ಧತೆ, ಆಚಾರ-ವಿಚಾರಗಳನ್ನು ಪಾಲಿಸುವುದು, ನೈತಿಕ ನಿಯಮಗಳನ್ನು ಪರಿಚಯ ಮಾಡಿಕೊಳ್ಳುವುದು ಮುಂತಾದ ಕ್ರಿಯೆಗಳನ್ನು ಕುಟುಂಬ ಅತ್ಯಂತ ಸರಳವಾಗಿ, ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತದೆ. ಇದು ಜೈವಿಕ ಘಟಕವಾಗಿದ್ದು, ವಿಶ್ವವ್ಯಾಪಕತ್ವದ ಗುಣಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲಾ ಪ್ರಕಾರಗಳಲ್ಲೂ 'ಸಂಸ್ಥೆ'ಯಾಗಿ ಕಾರ್ಯನಿರ್ವಹಿಸುತ್ತದೆ. ಇದು ವ್ಯಕ್ತಿಯ ಹುಟ್ಟಿನಿಂದ ಹಿಡಿದು ಮರಣದವರೆಗೆ ಸಂಬಂಧಿಸಿದ್ದಾಗಿದೆ.

'ಕುಟುಂಬ' ಎಂಬ ಪದ Family ಎಂಬ ಆಂಗ್ಲ ಪದದಿಂದ ಬಂದಿದೆ. Family ಎಂಬುದು Famulus ಎಂಬ ಲ್ಯಾಟಿನ್ ಭಾಷೆಯ ಮೂಲದಿಂದ ಬಂದಿದೆ. Famulus ಎಂದರೆ 'ಆಳು/ಸೇವಕ' ಎಂದರ್ಥ. ರೋಂ ದೇಶದಲ್ಲಿ ಹಿಂದಿನ ಕಾಲದಲ್ಲಿ ಆಳುಗಳನ್ನೂ ಕೂಡ ಕುಟುಂಬದ ಸದಸ್ಯರೆಂದು ಪರಿಗಣಿಸುತ್ತಿದ್ದರೆಂದು ಇದರಿಂದ ತಿಳಿದುಬರುತ್ತದೆ.

ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬಕ್ಕೆ ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

- **ಸಮ್ನರ್ ಮತ್ತು ಕೆಲ್ಲರ್:** "ರಕ್ತ ಸಂಬಂಧಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ".
- **ಈಲಿಯಟ್ ಮತ್ತು ಮೆರಿಲ್:** "ಗಂಡ, ಹೆಂಡತಿ ಮತ್ತು ಮಕ್ಕಳುಗಳನ್ನೊಳಗೊಂಡಿರುವ ಜೈವಿಕ-ಸಾಮಾಜಿಕ ಘಟಕವೇ ಕುಟುಂಬ".

• **ಮೆಕೈವರ್ ಮತ್ತು ಪೇಜ್:** "ಸಂತತಿಯ ಉತ್ಪತ್ತಿ ಮತ್ತು ಶಿಶುಗಳ ಪಾಲನೆ-ಪೋಷಣೆಯ ಕಾರ್ಯಗಳನ್ನು ನಿರ್ವಹಿಸುವುದರ ಸಲುವಾಗಿ, ಲೈಂಗಿಕ ಸಂಬಂಧದ ಆಧಾರದ ಮೇಲೆ ರಚಿತವಾದ, ಸಾಕಷ್ಟು ಖಚಿತವಾದ ಮತ್ತು ಧೀರ್ಘಕಾಲ ಬಾಳುವ ಸಮೂಹವೇ ಕುಟುಂಬ".

ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ಗುರುತಿಸಿದ್ದಾರೆ. ಅವು-

೧. **ವಿಭಕ್ತ ಕುಟುಂಬ**- ಇದು ಪ್ರೌಢರಾದ ತಾಯ್ತಂದೆಯರು ಅಥವಾ ಗಂಡ-ಹೆಂಡಿರು ಮತ್ತು ಅವರ ಅವಿವಾಹಿತರಾದ ಹಾಗೂ ಅವಲಂಬಿತರಾದ ಮಕ್ಕಳನ್ನು ಒಳಗೊಂಡಿರುವುದು. ಈ ಬಗೆಯ ಕುಟುಂಬವು ಜಗತ್ತಿನ ಬಹುತೇಕ ಆಧುನಿಕ ಸಮಾಜಗಳಲ್ಲಿ, ಅದರಲ್ಲೂ ಕೈಗಾರಿಕೀಕರಣ, ನಗರೀಕರಣ ಹಾಗು ಆಧುನೀಕರಣಗಳ ಸುಳಿಗೆ ಒಳಗಾದ ಸಮಾಜಗಳಲ್ಲಿ ಬಹಳ ಸಾಮಾನ್ಯವಾಗಿ ಎಂಬಂತೆ ಕಂಡುಬರುತ್ತಿದೆ.

೨. **ಅವಿಭಕ್ತ ಕುಟುಂಬ**- ಈ ಮೊದಲಿನ ಕುಟುಂಬದ ಪ್ರಕಾರಕ್ಕೆ ವ್ಯತಿರಿಕ್ತವಾಗಿ ಎಂಬಂತೆ ಇದರಲ್ಲಿ ತಾಯ್ತಂದೆಯರು ಅಥವಾ ಗಂಡ-ಹೆಂಡಿರು, ಮಕ್ಕಳು, ಸಹೋದರ-ಸಹೋದರಿಯರು, ಚಿಕ್ಕಪ್ಪ-ಚಿಕ್ಕಮ್ಮ, ದೊಡ್ಡಪ್ಪ-ದೊಡ್ಡಮ್ಮ, ಅವರ ಮಕ್ಕಳು, ಅಜ್ಜ-ಅಜ್ಜಿ ಸೇರಿದಂತೆ ಕನಿಷ್ಠ ಎರಡು ಅಥವಾ ಮೂರು ತಲೆಮಾರಿನವರು ಒಟ್ಟಾಗಿ ವಾಸಿಸುವರು. ಈ ಬಗೆಯ ಕುಟುಂಬವು ಕೃಷಿ ಪ್ರಧಾನ ಸಮಾಜಗಳಲ್ಲಿ, ಹೆಚ್ಚು ಮುಂದುವರಿಯದೇ ಇರುವ ಸಮಾಜಗಳಲ್ಲಿ ಹಾಗು ಬೆಳವಣಿಗೆಯ ಪಥದಲ್ಲಿರುವ ದೇಶಗಳಲ್ಲಿ ಕಾಣಬರುತ್ತದೆ ಎನ್ನಬಹುದು.

ಇಂದಿನ ಆಧುನಿಕ ಜಗತ್ತಿನ ಹಿನ್ನೆಯಲ್ಲಿ ಹೇಳುವುದಾದರೆ, ಹೆಚ್ಚಿನ ಸಮಾಜಗಳು ಕೇಂದ್ರ ಕುಟುಂಬವನ್ನು ಪ್ರಮುಖವಾದ 'ಸಾಮಾಜಿಕ ಘಟಕ' ವೆಂದು ಗುರುತಿಸುವರು. ಆದರೆ 'ಸಾಮಾಜಿಕ ಸಂಬಂಧ'ಗಳ ಮೂಲಭೂತ ನೆಲೆಯಾಗಿ ವಿಸ್ತೃತ ಕುಟುಂಬವಿದೆ ಎಂಬ ವಿಚಾರದ ಬಗ್ಗೆ ಮಾತ್ರ ಬೇರೆ ಬೇರೆ ಸಮಾಜಗಳಲ್ಲಿನ ಜನರ ಮನೋಭಾವನೆಯು ಬೇರೆ ಬೇರೆಯಾಗಿರುವುದು. ಕುಟುಂಬದಲ್ಲಿ 'ಪಿತೃ ಪ್ರಧಾನ ಕುಟುಂಬ' ಮತ್ತು 'ಮಾತೃ ಪ್ರಧಾನ ಕುಟುಂಬ' ಎಂಬ ವಿಧಗಳನ್ನೂ ಸಹ ಕಾಣಬಹುದು. ಇವು ಕುಟುಂಬದ ಯಜಮಾನಿಕೆ ಯಾರ ಕೈಯಲ್ಲಿದೆ ಎಂಬುದನ್ನು ಸೂಚಿಸುತ್ತವೆ. ಬಹುತೇಕ ಸಮಾಜಗಳಲ್ಲಿ ಪಿತೃ ಪ್ರಧಾನ ಕುಟುಂಬ ಪದ್ಧತಿಯನ್ನು ಕಾಣಬಹುದು. ಕೆಲ ಆದಿವಾಸಿ ಸಮುದಾಯಗಳಲ್ಲಿ ಮಾತ್ರ ಮಾತೃ ಪ್ರಧಾನ ಕುಟುಂಬ ಪದ್ಧತಿಯನು ಕಾಣಬಹುದಾಗಿದೆ.

ಚಪ್ಪರ್‌ಬಂದ್ ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬ ಪದ್ಧತಿ ಕಂಡುಬರುತ್ತದೆ. ಕುಟುಂಬದಲ್ಲಿ ತಂದೆ ಯಜಮಾನನಾಗಿರುವನು. ಮನೆ, ಆಸ್ತಿ ಹಾಗೂ ವಂಶದ ಹೆಸರು

ಗಂಡುಮಕ್ಕಳ ಪಾಲಾಗುತ್ತದೆ. ಹೆಣ್ಣು ಮದುವೆಯಾಗಿ ಗಂಡನ ಮನೆಗೆ ಹೋಗುವಳು. ಮನೆಯ ಎಲ್ಲಾ ಜವಾಬ್ದಾರಿಗಳನ್ನು, ಅಧಿಕಾರಗಳನ್ನು ತಂದೆಯೇ ನಿರ್ವಹಿಸುವನು. ಈ ಸಮುದಾಯದ ಕುಟುಂಬದಲ್ಲಿ ಹೆಣ್ಣು ಉತ್ತಮವಾದ ಸ್ಥಾನ-ಮಾನ ಹೊಂದಿದ್ದಾಳೆ. ಕುಟುಂಬದ ನಿರ್ವಹಣೆಯಲ್ಲಿ, ನಿರ್ಣಯಗಳಲ್ಲಿ ಅವಳ ಅಭಿಪ್ರಾಯ ಸಹ ಪಡೆಯಲಾಗುತ್ತದೆ. ಈ ಸಮುದಾಯವು ಬುಡಕಟ್ಟು ಮೂಲದ್ದಾಗಿರುವುದರಿಂದ, ಇವರು ಹೆಣ್ಣಿಗೆ ಉತ್ತಮ ಸ್ಥಾನ-ಮಾನ ನೀಡಿರುವುದು ಕಂಡುಬರುತ್ತದೆ.

ಚಪ್ಪರ್‌ಬಂದ್ ಸಮುದಾಯದಲ್ಲಿ ಹಿಂದೆ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಕಂಡು ಬರುತ್ತಿದ್ದವು. ಈ ಆಧುನಿಕ ಯುಗದ ಪ್ರಭಾವದಿಂದಾಗಿ, ಕೆಲಸ ಹುಡುಕಿಕೊಂಡು ವಲಸೆ ಹೋಗುತ್ತಿರುವುದರಿಂದ ಇವರಲ್ಲಿ ಇತ್ತೀಚಿನ ದಿನಗಳಲ್ಲಿ ವಿಭಕ್ತ ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿರುವುದನ್ನು ಕಾಣಬಹುದಾಗಿದೆ. ಕುಟುಂಬದಲ್ಲಿ ಜನನ, ಮದುವೆ, ಹಬ್ಬಗಳು ಮುಂತಾದ ಕಾರ್ಯಕ್ರಮಗಳು ಯಜಮಾನನ ಮೂಲಕವೇ ನಡೆಯುತ್ತವೆ. ಏನೇ ನಿರ್ಣಯಗಳಾಗಲಿ ಕುಟುಂಬದ ಎಲ್ಲಾ ಸದಸ್ಯರ ಸಲಹೆಗಳನ್ನು, ಅಭಿಪ್ರಾಯಗಳನ್ನು ಪಡೆದು ಕುಟುಂಬದ ಹಿರಿಯರು ಅಂತಿಮ ನಿರ್ಣಯಗಳನ್ನು ಹೇಳುತ್ತಾರೆ. ಅದನ್ನು ಎಲ್ಲಾ ಕಿರಿಯರು ಪಾಲಿಸುತ್ತಾರೆ. ಕುಟುಂಬದ ಪ್ರತಿಯೊಬ್ಬ ಸದಸ್ಯರು ತಮ್ಮ ತಮ್ಮ ಕೆಲಸಗಳನ್ನು ಜವಾಬ್ದಾರಿಯುತವಾಗಿ ನಿರ್ವಹಿಸಿಕೊಂಡು ಹೋಗುತ್ತಿರುವುದನ್ನು ಕಾಣಬಹುದು.

**ಚಪ್ಪರ್‌ಬಂದ್ ಸಮುದಾಯದ ಗುಂಪುಗಳು**

ಚಪ್ಪರ್‌ಬಂದ್ ಸಮುದಾಯದಲ್ಲಿ ಎರಡು ವಿಭಿನ್ನ ಗುಂಪುಗಳು ಕಾಣಸಿಗುತ್ತವೆ. 'ಇವರಲ್ಲಿ 'ಬಾರಾಗಂಡ (ಬಡೇಭಾಯಿ) ಮತ್ತು ಛೇಗಂಡ (ಛೋಟೆಭಾಯಿ)' ಎಂಬೆರಡು ಗುಂಪುಗಳಿವೆ' (ವೆಂಕಟರಂಗೋ ಕಟ್ಟಿ:೧೯೮೮:೨೪೦). 'ಬಡೇ ಭಾಯಿ' ಗುಂಪು ಈ ಸಮುದಾಯದ ಮೂಲ ಗುಂಪಾಗಿದೆ. ಚಪ್ಪರ್‌ಬಂದ್ ಸಮುದಾಯದವರು ಈ ಹಿಂದೆ ನಕಲಿ ನಾಣ್ಯಗಳನ್ನು ಚಲಾವಣೆ ಮಾಡುವ ಸಂದರ್ಭದಲ್ಲಿ ತಮ್ಮ ಸಹಾಯಕ್ಕೆಂದು ಕೆಲವು ವೇಳೆ ಚಿಕ್ಕ ಹೆಣ್ಣು-ಗಂಡು ಮಕ್ಕಳನ್ನು ಅಪಹರಿಸುತ್ತಿದ್ದರು. ಆ ಮಕ್ಕಳನ್ನು ತಾವೇ ಸಾಕಿ-ಸಲುಹಿ, ಅವರು ದೊಡ್ಡವರಾದ ಮೇಲೆ, ಆ ಅಪಹರಿಸಿದ ಹೆಣ್ಣು-ಗಂಡಿಗೆ ಮದುವೆ ಮಾಡುತ್ತಿದ್ದರು. ಹಾಗೇ ಮದುವೆಯಾದ ಆ ದಂಪತಿ ಹಾಗೂ ಅವರಿಂದ ಜನಿಸಿದ ಮಕ್ಕಳು 'ಛೋಟೆ ಭಾಯಿ' ಗುಂಪಿನಿಂದ ಕರೆಯಲ್ಪಟ್ಟರು. ಜೊತೆಗೆ 'ಬಡೇಭಾಯಿ' ಗುಂಪಿನ ಗಂಡು ಅನ್ಯ ಜಾತಿಯ ಹೆಣ್ಣನ್ನು ವಿವಾಹವಾಗಿ ಮಕ್ಕಳನ್ನು ಪಡೆದರೆ, ಆ ಮಕ್ಕಳು 'ಛೋಟೆ ಭಾಯಿ' ಗುಂಪಿಗೆ ಸೇರುತ್ತಾರೆ. ಆ ಮಕ್ಕಳು ಕೇವಲ 'ಛೋಟೆ ಭಾಯಿ' ಗುಂಪಿನೊಂದಿಗೆ ಸಂಬಂಧ ಬೆಳೆಸಬೇಕಾಗುತ್ತದೆ ಎಂದು ಸಮುದಾಯದ ಹಿರಿಯರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಸಿದರು. 'ಬಡೇ

ಭಾಯಿ' ಗುಂಪು 'ಭೋಟೆ ಭಾಯಿ' ಗುಂಪಿಗಿಂತ ಸಾಮಾಜಿಕವಾಗಿ ಉನ್ನತ ಸ್ಥಾನವನ್ನು ಪಡೆದಿದೆ.

ಕ್ಷೇತ್ರಕಾರ್ಯದಲ್ಲಿ ಮತ್ತೊಬ್ಬ ವಕ್ತೃ ಹೇಳಿದ ಪ್ರಕಾರ, 'ಈ 'ಗಂಡ' ಎಂಬ ಪದವು ವಿವಾಹದ ವೇಳೆ ಗಂಡಿನ ಕಡೆಯವರು ಮದುಮಗಳಿಗೆ ಕೊಡುವ ಭೇಂಡ್(ತೆರ)ನ ಮೌಲ್ಯವನ್ನು ಸೂಚಿಸುತ್ತದೆ. ೧ ಗಂಡ ೬ ರೂ.ಗೆ ಸಮವಿರುತ್ತದೆ. ಅದರ ಪ್ರಕಾರ ಬಾರ ಗಂಡ ಅಂದರೆ ೧೨ ಗಂಡ ಎಂದರ್ಥ. ಈ ಗುಂಪಿನವರು ವಿವಾಹದ ವೇಳೆ ೧೨ ಗಂಡ ಮೊತ್ತದ ಹಣ ಮದುಮಗಳಿಗೆ ಕೊಡಬೇಕು. ಅಂದರೆ ೧೨ X ೬=೭೨ ರೂ. ಮದುಮಗಳಿಗೆ ಕೊಡಬೇಕು. ಅದರಂತೆಯೆ ಛೇ ಗಂಡ ಅಂದರೆ ೦೬ ಗಂಡ ಎಂದರ್ಥ. ಈ ಗುಂಪಿನವರು ವಿವಾಹದ ವೇಳೆ ೦೬ ಗಂಡ ಮೊತ್ತದ ಹಣ ಮದುಮಗಳಿಗೆ ಕೊಡಬೇಕು. ಅಂದರೆ ೬ X ೬=೩೬ ರೂ. ಮದುಮಗಳಿಗೆ ಕೊಡಬೇಕು. ಇದು ಅಯಾ ಗುಂಪಿನ ಆರ್ಥಿಕ ಪರಿಸ್ಥಿತಿಯನ್ನು ಸೂಚಿಸುತ್ತದೆ". ಆದರೆ ಮದುವೆಯಲ್ಲಿ ಮದುಮಗಳಿಗೆ ನಿಖಾದ ವೇಳೆ ಕೊಡುವ 'ಮಹರ್' (ಕನ್ಯಾಶುಲ್ಕ) ಹಾಗೂ ಮದುವೆ ನಿಶ್ಚಯವಾದ ಮೇಲೆ ಕೊಡುವ 'ಭೇಂಡ್' (ತೆರ) ಇವು ಎರಡು ಬೇರೆ ಬೇರೆಯಾಗಿವೆ. ಎರಡೂ ಗುಂಪುಗಳ ನಡುವೆ ವೈವಾಹಿಕ ಸಂಬಂಧ ನಿಷಿದ್ಧವಿದೆ. ಸಮುದಾಯದ ಹಿರಿಯರು ಹೇಳುವಂತೆ, 'ಬಡೇಭಾಯಿ ಗುಂಪು ಈ ಸಮುದಾಯದ ಮೂಲ ಗುಂಪಾಗಿರುವುದರಿಂದ, ಅದು ತನ್ನ ಪರಿಶುದ್ಧತೆಯನ್ನು ಉಳಿಸಿಕೊಳ್ಳುವುದಕ್ಕಾಗಿ, ಭೋಟೆಭಾಯಿ ಗುಂಪಿನೊಂದಿಗೆ ವೈವಾಹಿಕ ಸಂಬಂಧಕ್ಕೆ ಅವಕಾಶ ನೀಡುವುದಿಲ್ಲ ಹಾಗೂ ಭೋಟೆ ಭಾಯಿ ಗುಂಪನ್ನು ತನಗಿಂತ ಕೆಳಮಟ್ಟದ ಸ್ಥಾನವನ್ನು ನೀಡಿದೆ'. ಸಗುಂಪುಗಳ ಮಧ್ಯೆ ವಿವಾಹ ನಿಷೇಧವಿರುವುದು ಬುಡಕಟ್ಟಿನ ಒಂದು ಲಕ್ಷಣವಾಗಿದೆ.

ಎರಡೂ ಗುಂಪಿನ ಪ್ರತಿಯೊಬ್ಬರ ಹೆಸರಿನ ಮುಂದೆ 'ಚಪ್ಪರ್‌ಬಂದ್' ಎಂಬುದು ಸಾಮಾನ್ಯ ಹೆಸರಾಗಿ ಸೇರಿಕೊಳ್ಳುತ್ತದೆ. ಜೊತೆಗೆ ಅವರು ಪಿತ್ರಾರ್ಜಿತವಾಗಿ ಬಂದಿರುವಂತಹ ಹೆಸರನ್ನು, ಅವರ ಹೆಸರಿನ ಮುಂದೆ ಸೇರಿಸಿಕೊಂಡಿರುತ್ತಾರೆ. ಅವರ ಮನೆತನದ ಹೆಸರು ಅವರ ಪೂರ್ವಜರು ವಾಸಿಸುತ್ತಿದ್ದ ಊರನ್ನು ಸೂಚಿಸುತ್ತದೆ.

ಬಹುಸಂಖ್ಯಾತ ಚಪ್ಪರ್‌ಬಂದರು ವಿವಿಧ ಹಳ್ಳಿಗಳಿಂದ ಹುಬ್ಬಳ್ಳಿ, ಧಾರವಾಡ, ಗದಗ, ವಿಜಯಪುರ, ಬಾಗಲಕೋಟೆ ಮುಂತಾದ ನಗರಗಳಿಗೆ ವಲಸೆ ಬಂದಿದವರಾಗಿದ್ದಾರೆ. ಜನಗಣತಿ, ಮತದಾನ ಗುರುತು ಚೀಟಿ ಮತ್ತು ಇತರೆ ಕೆಲಸಗಳಿಗೆ ಪರವಾನಿಗೆ ಪಡೆಯುವ ಮತ್ತು ಇತರೆ ದಾಖಲೆಗಳಲ್ಲಿ ಅವರು ಯಾವ ಹಳ್ಳಿಗಳಿಂದ ವಲಸೆ ಬಂದಿರುತ್ತಾರೋ ಆ ಹಳ್ಳಿಗಳ ಹೆಸರನ್ನು ತಮ್ಮ ಮನೆತನದ ಹೆಸರಾಗಿ ದಾಖಲಿಸುತ್ತಿದ್ದರು. ಹೀಗೆ ಇವರ ಮನೆತನದ ಹೆಸರುಗಳು ರೂಪುಗೊಂಡವು.

**ಉದಾ:** ಬಳಬಟ್ಟಿ, ಕಿರ್‌ಶಾಳ್, ಅಬ್ಬಿಹಾಳ್, ಸಿಂದಗಿ, ಬ್ಯಾಕೋಡ್, ಸಿಕ್ಲೋಡಿ ಇತ್ಯಾದಿ ಮನೆತನದ ಹೆಸರುಗಳನ್ನು ಕಾಣಬಹುದು. ಇವೆಲ್ಲವೂ ಹಳ್ಳಿಗಳ ಹೆಸರುಗಳಾಗಿವೆ.

**ಚಪ್ಪರ್‌ಬಂದ್ ಸಮುದಾಯದ ಬೆಡಗುಗಳು**

ಚಪ್ಪರ್‌ಬಂದ್ ಸಮುದಾಯವು ಇಸ್ಲಾಂ ಧರ್ಮದ ಸಮುದಾಯವಾದರೂ ನಾವು ಈ ಸಮುದಾಯದಲ್ಲಿ 'ಬೆಡಗು'ಗಳನ್ನು ಕಾಣುತ್ತೇವೆ. ಇದು ಬುಡಕಟ್ಟು ಮೂಲವನ್ನು ಹೊಂದಿರುವುದರಿಂದ ಇದು ಸಾಧ್ಯವಾಗಿದೆ. ಹಾಗಾಗಿ ಇದು ತನ್ನಲ್ಲಿ ಇನ್ನೂ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ಒಂದೇ ಬೆಡಗಿನ ಮಧ್ಯೆ ವಿವಾಹ ನಿಷಿದ್ಧವಿದೆ. ಇವರು ಬೆಡಗು ಪದ್ಧತಿಯನ್ನು ಉಳಿಸಿಕೊಂಡಿರುವುದು ಬುಡಕಟ್ಟಿನ ಒಂದು ಲಕ್ಷಣವಾಗಿದೆ. ಈ ಎರಡೂ ಗುಂಪುಗಳ ನಡುವೆ ನಾವು ಏಕ ಪ್ರಕಾರದ ಬೆಡಗುಗಳನ್ನು ಕಾಣುತ್ತೇವೆ. ಅಂದರೆ ಬಡೇ ಭಾಯಿ ಗುಂಪಿನಲ್ಲಿ ಕಂಡುಬರುವ ಬೆಡಗುಗಳೇ, ಛೋಟೆ ಭಾಯಿ ಗುಂಪಿನಲ್ಲೂ ಕಂಡುಬರುತ್ತವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೆಡಗುಗಳು ವೃತ್ತಿಯ ಮೂಲವಾಗಿ ಅಥವಾ ವಾಸಿಸುವ ಪರಿಸರದ ಮೂಲವಾಗಿ ಬಂದಿರಬಹುದು ಎಂಬ ಅನುಮಾನವನ್ನು ವಕ್ತೃಗಳು ವ್ಯಕ್ತಪಡಿಸಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಎರಡೂ ಗುಂಪುಗಳಲ್ಲೂ ಪ್ರಸ್ತುತದಲ್ಲಿ ೨೩ ಬೆಡಗುಗಳು ಕಂಡುಬಂದಿವೆ.

**ಕೋಷ್ಟಕ ೪.೧: ಚಪ್ಪರ್‌ಬಂದ್ ಸಮುದಾಯದಲ್ಲಿ ಪ್ರಸ್ತುತ ಇರುವ ಬೆಡಗುಗಳು**

| | | | |
|---|---|---|---|
| ೧ | ಅಡ್‌ಗಾರೆವಾಲೆ | ೨ | ಕಾರಾವಾಲೆ |
| ೩ | ಕೇಡಗಿವಾಲೆ | ೪ | ಗಾರೆವಾಲೆ |
| ೫ | ಗುಡುವಾಲೆ | ೬ | ಗೋರಿವಾಲೆ |
| ೭ | ಜಬಲ್‌ಪುರಿವಾಲೆ | ೮ | ಜಾದೂವಾಲೆ |
| ೯ | ಟಿಟಿವಾಲೆ | ೧೦ | ತಿಗಡೆವಾಲೆ |
| ೧೧ | ತಿಗಳೆವಾಲೆ | ೧೨ | ಧಾತೋರವಾಲೆ |
| ೧೩ | ಪೀರ್‌ಜಾದೆ | ೧೪ | ಪುಂಗಿವಾಲೆ |
| ೧೫ | ಬಕ್ಕವಾಲೆ | ೧೬ | ಬಳ್ಳಾರಿವಾಲೆ |
| ೧೭ | ಬಿರದಿವಾಲೆ | ೧೮ | ಮತೋಡೆವಾಲೆ |
| ೧೯ | ಮಾಲಾವಾಲೆ | ೨೦ | ರಾವುತ್‌ವಾಲೆ |
| ೨೧ | ಲಂಬೂವಾಲೆ | ೨೨ | ಸತಿಬಾವಾಲೆ |
| ೨೩ | ಸೂಜಿವಾಲೆ | | |

ಇನ್ನೂ ಕೆಲವು ಬೆಡಗುಗಳು ನಶಿಸಿರುವ ಶಂಕೆಯನ್ನು ವಕ್ತೃಗಳು ವ್ಯಕ್ತಪಡಿಸಿದರು. ಈ ಬೆಡಗುಗಳಲ್ಲಿ ಸಜಾತಿ ಬೆಡಗಿನವರು ವಿವಾಹವಾಗುವುದಿಲ್ಲ. ವಿಜಾತಿ ಬೆಡಗಿನೊಂದಿಗೆ ಮಾತ್ರ ಮದುವೆಗೆ ಅವಕಾಶವಿದೆ. ಮದುವೆಗೆ ಮುಂಚೆಯೇ ಗುಂಪು, ಬೆಡಗು ಯಾವುದೆಂದು ವಿಚಾರಿಸಿ, ನಂತರ ಸಂಬಂಧ ಮುಂದುವರೆಸುತ್ತಾರೆ. ಆದರೆ ಬೆಡಗುಗಳ ಹಿನ್ನೆಲೆಯ ಬಗ್ಗೆ ನಮಗೆ ಯಾವುದೇ ನಿಖರವಾದ ಮಾಹಿತಿ ಸಿಕ್ಕಿರುವುದಿಲ್ಲ. ಒಂದು ವಿಪರ್ಯಾಸವೆಂದರೆ ಪ್ರಸ್ತುತದಲ್ಲಿ ಎಷ್ಟೋ ಯುವಜನತೆಗೆ ತಮ್ಮ ಬೆಡಗು ಯಾವುದೆಂದೇ ಗೊತ್ತಿಲ್ಲ. ಕಾರಣ ಕೇಳಿದರೆ ತಾವು ಎಂದೂ ಇದರ ಬಗ್ಗೆ ತಿಳಿದುಕೊಳ್ಳುವ ಗೋಜಿಗೆ ಹೋಗಿಲ್ಲ ಎಂದು ಹೇಳುತ್ತಾರೆ. ಒಂದು ವೇಳೆ ಹೀಗೆಯೇ ಬೆಡಗುಗಳು ಸಂಪೂರ್ಣವಾಗಿ ನಶಿಸಿ ಹೋದರೆ, ಈ ಸಮುದಾಯದ ಅಸ್ಮಿತತೆ ಕೂಡ ನಶಿಸಿ ಹೋಗುತ್ತದೆ. ಏಕೆಂದರೆ ಮುಸ್ಲಿಂ ಇತರೆ ಸಮುದಾಯಗಳಿಗಿಂತ ಈ ಸಮುದಾಯ ಭಿನ್ನವಾಗಿದೆ ಮತ್ತು ಇದೊಂದೂ ಬುಡಕಟ್ಟು ಮೂಲವನ್ನು ಹೊಂದಿದೆ ಎಂದು ಹೇಳಲು ಇರುವ ಕೆಲ ಅಂಶಗಳಲ್ಲಿ ಬೆಡಗು ಪದ್ಧತಿ ಕೂಡ ಒಂದು. ಈಗಾಗಲೇ ಈ ಸಮುದಾಯ ಸ್ವಾಂಗೀಕರಣ ಪ್ರಕ್ರಿಯೆಗೆ ಒಳಗಾಗಿದೆ. ಹೀಗಿರುವಾಗ ಈ ಸಮುದಾಯವನ್ನು ಗುರುತಿಸಲು ಇರುವ ಅಂಶಗಳೇ ನಾಶವಾದರೆ, ನಂತರ ಈ ಸಮುದಾಯ ತನ್ನ ಅಸ್ಮಿತತೆಯನ್ನು ಕಳೆದುಕೊಂಡು, ಬೇರೆ ಸಮುದಾಯದೊಂದಿಗೆ ಸಂಪೂರ್ಣವಾಗಿ ವಿಲೀನವಾಗಬೇಕಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ.

**ಜೀವನಾವರ್ತನ ಆಚರಣೆಗಳು**

ಸಾಮಾಜಿಕ ಜೀವನದಲ್ಲಿ ಸಂಪ್ರದಾಯ ಆಚರಣೆಗಳು ಪ್ರಮುಖ ಪಾತ್ರವಹಿಸುತ್ತವೆ. ಅವು ಮಾನವನ ಬಾಳಿನ ಅವಿಭಾಜ್ಯ ಅಂಗಗಳಾಗಿವೆ. ಬಾಳೆಂಬ ಕಲೆಯ ಬಗ್ಗೆ ಸದಾ ಎಚ್ಚರವಾಗಿದ್ದು ಅದನ್ನು ಸಂಸ್ಕರಿಸಿ ಉತ್ತಮವಾಗಿಸಬೇಕೆಂಬುದೇ ನಮ್ಮ ಪೂರ್ವಜರ ಆಶಯ ವಾಗಿದೆ. ಸಂಪ್ರದಾಯ ಆಚರಣೆಗಳ ಮೂಲಕ ಮೂರ್ತರೂಪ ಪಡೆದು ಉತ್ತಮ ಸಂಸ್ಕಾರದಂಥ ವ್ಯಕ್ತಿಯಾಗಿ ಜೀವನ ನಡೆಸುವಂತೆ ಮಾಡುವುದೇ ಈ ಸಂಪ್ರದಾಯ ಆಚರಣೆಗಳ ಮುಖ್ಯ ಉದ್ದೇಶವಾಗಿರುತ್ತದೆ. ಬೇರೆ-ಬೇರೆ ಸಮುದಾಯಗಳಲ್ಲಿ, ಬೇರೆ-ಬೇರೆ ಸಮಾಜಗಳಲ್ಲಿ, ಬೇರೆ-ಬೇರೆ ಭೌಗೋಳಿಕ ಪರಿಸರದಲ್ಲಿ ವಿಭಿನ್ನವಾದ ಸಂಪ್ರದಾಯಗಳು ಉಗಮಗೊಳ್ಳುತ್ತವೆ. ಮಾನವನ ಹುಟ್ಟಿನಿಂದ ಸಾಯುವವರೆಗೂ ಅನೇಕ ಆಚರಣೆಗಳು ಇರುತ್ತವೆ. ಕೆಲವು ಆಚರಣೆಗಳು ವ್ಯಕ್ತಿ ಸತ್ತ ನಂತರವೂ ನಡೆಯುತ್ತವೆ. ಕೆಲ ಆಚರಣೆಗಳು ಕೌಟುಂಬಿವಾಗಿದ್ದರೆ, ಕೆಲ ಆಚರಣೆಗಳು ಸಾಮುದಾಯಿಕ ಮತ್ತು ಸಾಮಾಜಿಕವಾಗಿ ಆಚರಿಸುವಂತಹುಗಳಾಗಿರುತ್ತವೆ. ಈ ಆಚರಣೆಗಳು ವ್ಯಕ್ತಿಯ ಜೀವನದಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ವಹಿಸುತ್ತವೆ ಎಂದು ಹೇಳಬಹುದು.

Genep opines that "Man's life comes to be made up of a Succession of stages with similar ends and beginnings; birth, social puberty, marriage, fatherhood, advancement to a higher class, occupational specialization and death. For everyone of these events there are Ceremonies whose essential purpose is to ennoble the individual to pass from one defined position to another which is equally well defined" (ಹುದ್ದಾರ್:1995"65) .

**ಶಾದಿ (ವಿವಾಹ)**

ಮುಸ್ಲಿಮರು ವಿವಾಹವನ್ನು 'ಶಾದಿ' ಎನ್ನುತ್ತಾರೆ. ವಿವಾಹವು ಪ್ರಪಂಚದ ಎಲ್ಲೆಡೆ ಒಂದಲ್ಲ ಒಂದು ವಿಧದಲ್ಲಿ ಕಂಡು ಬರುವ ಸಾಮಾಜಿಕ ವ್ಯವಸ್ಥೆಯಾಗಿದೆ. ಪ್ರತಿಯೊಂದು ಸಮಾಜದಲ್ಲಿಯೂ ಇರುವ, ಸಮಾಜಮಾನ್ಯ ಸುವ್ಯವಸ್ಥಿತ ಗಂಡು ಹೆಣ್ಣುಗಳ ಲೈಂಗಿಕ ಸಂಯೋಗವೇ ವಿವಾಹ. ವಿಭಿನ್ನ ಲಿಂಗಗಳ ವ್ಯಕ್ತಿಗಳು ಗಂಡ-ಹೆಂಡತಿಯಾಗಿ ಒಂದುಗೂಡಿ ಹೊಸ ಕುಟುಂಬ ಜೀವನ ಏರ್ಪಡುವ ಸ್ಥಿತಿ ಅಥವಾ ಅಂತಸ್ಥೇ ವಿವಾಹ. ವಿವಾಹದಿಂದ ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀ ಸಮಾಜದಲ್ಲಿ ಗೃಹಸ್ಥ ಮತ್ತು ಗೃಹಿಣಿಯ ಸ್ಥಾನ ಹೊಂದುವರು. ಇದರಿಂದ ಮನೆತನದ ಸಂತಾನಾಭಿವೃದ್ಧಿ ಸಾಧ್ಯವಾಗುತ್ತದೆ. ಪುರುಷ ಮತ್ತು ಸ್ತ್ರೀ ಆರ್ಥಿಕ ವ್ಯವಸ್ಥೆಯಲ್ಲಿ ಸಹಕರಿಸಲು ಅನುಕೂಲವಾಗುತ್ತದೆ. ವಿವಾಹವಾದಲ್ಲಿ ಮಾತ್ರ ಪುರುಷ ಮತ್ತು ಸ್ತ್ರೀ ಆರ್ಥಿಕ ಹಾಗೂ ಲೈಂಗಿಕ ಜೀವನದಲ್ಲಿ ಸಹಭಾಗಿಗಳಾಗುತ್ತಾರೆ. ವಿವಾಹವು ಸರ್ವ ವ್ಯಾಪಿಯಾಗಿರುವ ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಕುಟುಂಬ ಎಂಬ ಸಾಮಾಜಿಕ ಸಂಸ್ಥೆ ಶಾಶ್ವತವಾಗಿರಬೇಕಾದರೆ ವಿವಾಹವು ತುಂಬ ಪ್ರಮುಖವಾದುದು. ಈ ಎರಡೂ ಸಂಸ್ಥೆಗಳು ಈ ಪ್ರಪಂಚವನ್ನು ಮುನ್ನಡೆಸುತ್ತಿವೆ ಎಂದರೆ ತಪ್ಪಾಗಲಾರದು. ವಿವಾಹಕ್ಕೆ ಸಂಬಂಧಿಸಿ ದಂತೆ ಅನೇಕ ಸಮಾಜಶಾಸ್ತ್ರಜ್ಞರು ಅನೇಕ ವ್ಯಾಖ್ಯಾನಗಳನ್ನು ನೀಡಿದ್ದಾರೆ, ಅವುಗಳಲ್ಲಿ ಕೆಲವನ್ನು ಈ ಕೆಳಗೆ ತಿಳಿಸಲಾಗಿದೆ.

• ವೆಸ್ಟರ್ ಮಾರ್ಕ್ "ಪ್ರಜೋತ್ಪಾದನೆಯ ಕ್ರಿಯೆಯಾದ ಶಿಶುವಿನ ಜನನದವರೆಗೆ ಮಾತ್ರ ಮುಂದುವರಿಯದೆ ಅನಂತರವೂ ಸಾಮಾನ್ಯವಾಗಿ ಹೆಚ್ಚು ಕಾಲ ಮುಂದುವರಿಯುವ ಗಂಡು-ಹೆಣ್ಣುಗಳ ನಡುವಿನ ಸಂಬಂಧಕ್ಕೆ ವಿವಾಹ" ಎನ್ನಬಹುದು.

• ಮ್ಯಾಲಿ ನೌಸ್ಕಿ "ವಿವಾಹವು ಸ್ತ್ರೀ-ಪುರುಷರ ನಡುವೆ ಲೈಂಗಿಕ ಹಾಗೂ ಮಾನಸಿಕ ಸಂಬಂಧವನ್ನು ದೃಢೀಕರಿಸುವ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶಪೂರ್ವಕವಾಗಿ ಏರ್ಪಡಿಸಿ ಕೊಂಡ ಒಪ್ಪಂದವಾಗಿದೆ".

• ರಾಬರ್ಟ್ ಹೆಚ್ ಲೌವಿ "ಅನುಮತಿ ನೀಡುಬಹುದಾದ ಸಂಗಾತಿಗಳ ನಡುವಿನ ಶಾಶ್ವತ ಸಂಯೋಗವೇ ವಿವಾಹ".

ಮೇಲಿನ ಹೇಳಿಕೆಗಳ ಮೂಲಕವೇ ನಾವು ವಿವಾಹದ ಉದ್ದೇಶ ಮತ್ತು ಕಾರ್ಯಗಳನ್ನು ಅರ್ಥಮಾಡಿಕೊಳ್ಳಬಹುದು.

ಕಾಲ ದೇಶ ಮತ್ತು ಪರಿಸ್ಥಿತಿಗಳಿಗನುಸಾರವಾಗಿ ವಿವಾಹದ ಪದ್ಧತಿ ಮತ್ತು ಪ್ರಕಾರಗಳಲ್ಲಿ ವೈವಿಧ್ಯತೆ ಕಾಣಬರುವುದು. ಆದಾಗ್ಯೂ ಹಲವಾರು ಅಧ್ಯಯನಗಳ ಹಾಗೂ ಸಮೀಕ್ಷೆಗಳ ಆಧಾರದ ಮೇಲೆ ವಿವಾಹವು ಬಹುಪತ್ನಿತ್ವ, ಏಕಪತ್ನಿತ್ವ, ಬಹುಪತಿತ್ವ ಹಾಗೂ ಸಮೂಹ ವಿವಾಹ ಎಂಬ ನಾಲ್ಕು ಮುಖ್ಯ ಪ್ರಕಾರಗಳಲ್ಲಿ ಆಚರಣೆಯಲ್ಲಿದೆ ಎನ್ನಬಹುದು. ಬಹುಪತಿತ್ವ ಹಾಗೂ ಸಮೂಹ ವಿವಾಹ ಈ ಪದ್ಧತಿಗಳು ಕೆಲವೇ ಕೆಲವು ಆದಿವಾಸಿ ಸಮುದಾಯಗಳಲ್ಲಿ ಕಂಡುಬರುತ್ತದೆ. ಏಕಪತ್ನಿತ್ವ ಮತ್ತು ಬಹುಪತ್ನಿತ್ವ ಈ ಪದ್ಧತಿಗಳು ಸಾರ್ವತ್ರಿಕವಾಗಿ ಕಂಡುಬರುವ ವಿವಾಹ ಪದ್ಧತಿಗಳಾಗಿವೆ.

ಪ್ರತಿಯೊಂದು ಸಮಾಜದಲ್ಲಿಯೂ ವಿವಾಹದ ಸಂದರ್ಭದಲ್ಲಿ ಅನೇಕ ವಿಧಿ ಕ್ರಿಯೆಗಳಿರುತ್ತವೆ. ವಿವಾಹ ಪೂರ್ಣವಾಗುವುದು ಈ ವಿಧಿಕ್ರಿಯೆಗಳು ಮುಗಿದಾಗ ಮಾತ್ರ. ವಿವಾಹ ಸಾಧಾರಣವಾಗಿ ಹಿರಿಯರ ಆರ್ಶೀವಾದಗಳೊಂದಿಗೆ ಪ್ರಾರಂಭವಾಗಿ ಕ್ರಮೇಣ ಧಾರ್ಮಿಕ ಕ್ಷೇತ್ರದ ಕರ್ಮಗಳನೊಳ ಗೊಂಡು ಸಂಪೂರ್ಣವಾಗುತ್ತದೆ. ಸಮಾಜ ಆಚರಿಸುವ ವೈವಾಹಿಕ ವಿಧಿಕ್ರಿಯೆಗಳಲ್ಲಿ ವೈವಿಧ್ಯ ಗಳಿರುತ್ತವೆ.

ಚಪ್ಪರ್‌ಬಂದರು ಬುಡಕಟ್ಟು ಮೂಲವನ್ನು ಹೊಂದಿದ್ದು, ನಂತರ ಸ್ವಾಂಗೀಕರಣ ಪ್ರಕ್ರಿಯೆ ಗೊಳಗಾಗಿದ್ದು, ಇವರು ಭಾರತೀಯ ಇತರೆ ಸಮುದಾಯಗಳ ಮತ್ತು ಇಸ್ಲಾಂ ಎರಡರ ಆಚರಣೆಗಳನ್ನು ಆಚರಿಸುತ್ತಿದ್ದರು. ಹಾಗಾಗಿ ಇವರ ವಿವಾಹ ಕ್ರಮದಲ್ಲಿ ಈ ಎರಡೂ ಸಂಸ್ಕೃತಿಯ ಆಚರಣೆಗಳು ಸಾಮಾನ್ಯವಾಗಿದ್ದವು. ಆದರೆ ಕಾಲಾ ಬದಲಾದಂತೆ ಕೆಲ ಪ್ರಬಲ ಶಕ್ತಿಗಳ ಒತ್ತಡದಿಂದಾಗಿ ಇವರು ತಮ್ಮನ್ನು ಸಂಪೂರ್ಣವಾಗಿ ಇಸ್ಲಾಂ ಧರ್ಮಕ್ಕನುಗುಣವಾಗಿ ಬದಲಾಯಿಸಿಕೊಂಡರು. ಹಾಗಾಗಿ ಈಗ ಇವರು ಇಸ್ಲಾಂ ನಿಯಮಗಳ ಪ್ರಕಾರವೇ ವಿವಾಹವನ್ನು ಮಾಡುತ್ತಿದ್ದಾರೆ. ಆದರೂ ಕೂಡ ಈಗಲೂ ಹಳೆಯ ಸಂಪ್ರದಾಯಗಳನ್ನು ಉಳಿಸಿಕೊಂಡಿದ್ದಾರೆ.

ಮಾನವ ಸಮಾಜಗಳಲ್ಲಿ ವಿವಾಹ ಹೇಗೆ ಸರ್ವವ್ಯಾಪಿಯೋ ಹಾಗೆಯೇ ವಿವಾಹದಲ್ಲಿ ನಿರ್ಬಂಧಗಳೂ, ನಿಷೇಧಗಳೂ ಇರುತ್ತವೆ. ಕೇವಲ ಲೈಂಗಿಕ ವ್ಯತ್ಯಾಸಗಳನ್ನು ಮಾತ್ರ ಗಣನೆಗೆ ತಾರದೆ, ವಿವಾಹವಾಗುವವರ ಮೇಲೆ ಸಮಾಜ ಅನೇಕ ನಿಷೇಧಗಳನ್ನು ವಿಧಿಸಿದೆ. ಈ ಸಮುದಾಯದಲ್ಲೂ ಸಹ ವಿವಾಹಕ್ಕೆ ಸಂಬಂಧಿಸಿದಂತೆ ಕೆಲವು ನಿಷೇಧಗಳಿವೆ. ಇವರು ಒಂದೇ ಬೆಡಗಿನವರ ನಡುವೆ ವಿವಾಹವನ್ನು ನಿಷೇಧಿಸಿದ್ದಾರೆ. ಜೊತೆಗೆ ಬಡೇಭಾಯಿ ಗುಂಪು ಮತ್ತು ಪೋಟೆಭಾಯಿ ಗುಂಪುಗಳ ನಡುವೆ ಸಹ ವಿವಾಹಕ್ಕೆ ಅವಕಾಶವಿಲ್ಲದಿರುವುದು ಕಂಡುಬರುತ್ತದೆ.

**ಹರಿಬೇಲ್ (ಹುಡುಗಿ ನೋಡುವ ಶಾಸ್ತ್ರ)**

ಮೊದಲು ಗಂಡಿನ ಕಡೆಯವರು ಹೋಗಿ ಹುಡುಗಿಯನ್ನು ನೋಡಿ, ಎಲ್ಲರಿಗೂ ಒಪ್ಪಿಗೆಯಾದ ಮೇಲೆ ಮದುವೆಗೆ ಒಪ್ಪಿಗೆ ಸೂಚಿಸುತ್ತಾರೆ. ನಂತರ ಹುಡುಗಿಗೆ ಉಡಿ ತುಂಬಿ ಮದುವೆ ನಿಶ್ಚಯ ಮಾಡಿಕೊಳ್ಳುತ್ತಾರೆ. ಇದನ್ನು ಇವರು "ಹರಿಬೇಲ್" ಎಂದು ಕರೆಯುತ್ತಾರೆ.

**ಭೇಂಡ್ (ನಿಶ್ಚಿತಾರ್ಥ)**

ನಿಶ್ಚಿತಾರ್ಥ ಸಮಾರಂಭ ಹುಡುಗಿಯ ಮನೆಯಲ್ಲಿ ನಡೆಯುತ್ತದೆ. ಅವರವರ ಆರ್ಥಿಕತೆಗೆ ತಕ್ಕಂತೆ ವಿಜೃಂಭಣೆಯಿಂದ ಮಾಡುತ್ತಾರೆ. ಹುಡುಗನ ಮನೆಯವರು ತಮ್ಮ ಸಂಬಂಧಿಗಳೊಂದಿಗೆ ಹುಡುಗಿಯ ಮನೆಗೆ ಬರುತ್ತಾರೆ. ಹುಡುಗಿಯ ಕಡೆಯವರು ಹುಡುಗನಿಗೆ, ಹುಡುಗನ ಕಡೆಯವರು ಹುಡುಗಿಗೆ ಹೊಸ ಬಟ್ಟೆ, ಹೂ, ಸುಗಂಧ ದ್ರವ್ಯ, ಸಾಧ್ಯವಾದರೆ ಬಂಗಾರದ ಉಂಗುರ ತರುತ್ತಾರೆ. ಹುಡುಗಿ ನಿಶ್ಚಿತಾರ್ಥಕ್ಕೆ ಹುಡುಗನ ಕಡೆಯವರು ತಂದ ಸೀರೆ ಉಡುತ್ತಾಳೆ. ನಂತರ ಅವಳನ್ನು ಅಲಂಕರಿಸಿ ಅವಳಿಗೆ ಬಟ್ಟೆ, ಬಳೆ, ಎಲೆ ಅಡಿಕೆ, ಹೂ, ಸಿಹಿ ಇತ್ಯಾದಿಗಳನ್ನು ಉಡಿತುಂಬುತ್ತಾರೆ. ಹುಡುಗ ಮತ್ತು ಹುಡುಗಿಗೆ ಬೇರೆ-ಬೇರೆಯಾಗಿ ಕೂರಿಸಿ ಶಾಸ್ತ್ರ ಮಾಡುತ್ತಾರೆ. ಇದರೊಂದಿಗೆ ನಿಶ್ಚಿತಾರ್ಥ ಮುಗಿಯುತ್ತದೆ. ನಂತರ ಎಲ್ಲರಿಗೂ ಮಾಂಸದೂಟ ಮತ್ತು ಸಿಹಿಯನ್ನು ಬಡಿಸುತ್ತಾರೆ. ನಂತರ ಹುಡುಗನ ಕಡೆಯವರು ಒಂದು ದಿನ ಹುಡುಗಿಯ ಮನೆಗೆ ಹೋಗಿ ಮದುವೆಯ ದಿನಾಂಕವನ್ನು ನಿಗದಿ ಮಾಡಿಕೊಂಡು ಬರುತ್ತಾರೆ. ಮೊದಲು ಇವರಲ್ಲಿ ವರದಕ್ಷಿಣೆ(ದಹೇಜ್) ಪದ್ಧತಿ ಇರಲಿಲ್ಲ. ಆದರೆ ಆಧುನಿಕ ಜಗತ್ತಿನ ಪ್ರಭಾವಕ್ಕೊಳಗಾಗಿ ಈಗ ಇವರೂ ಕೂಡ ವರದಕ್ಷಿಣೆ ಪದ್ಧತಿಗೆ ಒಳಗಾಗಿದ್ದಾರೆ. ಆದರೆ ಅಲ್ಪ ಪ್ರಮಾಣದಲ್ಲಿ ಇದನ್ನು ಕಾಣಬಹುದು. ಇವರಲ್ಲಿ ಮಹರ್(ವಧುದಕ್ಷಿಣೆ) ಕೊಡುವ ಪದ್ಧತಿ ಇದೆ. ಎರಡೂ ಕಡೆಯಲ್ಲೂ ಮದುವೆಯ ತಯಾರಿ ಸಂಭ್ರಮದಿಂದ ಆರಂಭವಾಗುತ್ತದೆ. ಮದುವೆಗೆ ಒಂದು ವಾರ ಬಾಕಿ ಇರುವಂತೆ ಶಾಸ್ತ್ರಗಳು ಶುರುವಾಗುತ್ತವೆ.

**ಮಂಡವಾ ಕಾ ರಸ್ಮ್ (ಹಂದರ ಹಾಕುವ ಶಾಸ್ತ್ರ)**

ಹುಡುಗಿ-ಹುಡುಗ ಎರಡೂ ಮನೆಗಳ ಮುಂದೆ ಬಿದಿರನ್ನು ಬಳಸಿ ಹಂದರ ಹಾಕುತ್ತಾರೆ. ಹಂದರ ಹಾಕುವುದರ ಮೂಲಕ ಮದುವೆ ಕಾರ್ಯಗಳು ಆರಂಭವಾಗುತ್ತವೆ. ಈಗಲೂ ಇವರು ಈ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

**ಮೆಹಂದಿ ಕಾ ರಸ್ಮ್**

ಮೆಹಂದಿ ಶಾಸ್ತ್ರ ತುಂಬ ಸಂಭ್ರಮದಿಂದ ರಾತ್ರಿ ಶುರುವಾಗುತ್ತದೆ. ಮೊದಲು ಮೆಹಂದಿಯನ್ನು ಮದುಮಗಳಿಗೆ ಹಚ್ಚುವ ಮೂಲಕ ಈ ಶಾಸ್ತ್ರ ನಡೆಯುತ್ತದೆ. ನಂತರ ಮದುವೆಗೆ ಬಂದ ಎಲ್ಲಾ ಹೆಣ್ಣು ಮಕ್ಕಳು ತಮ್ಮ ಕೈಕಾಲುಗಳಿಗೆ ಮೆಹಂದಿಯನ್ನು ಹಚ್ಚಿಕೊಳ್ಳುತ್ತಾರೆ. ಡೋಲಕ್ ಬಾರಿಸುತ್ತಾ ಹಾಡುಗಳನ್ನು ಹಾಡುತ್ತಾ ರಾತ್ರಿಯಿಡಿ ಸಂಭ್ರಮಿಸುತ್ತಾರೆ.

**ಚೂರಿಯಾ ಕಾ ರಸ್ಮ್ (ಬಳೆ ಶಾಸ್ತ್ರ)**

ಬಳೆಗಾರನನ್ನು ಕರೆಸಿ ಮೊದಲು ಮದುಮಗಳಿಗೆ ಹಸಿರು ಬಳೆ ತೊಡಿಸಿ, ನಂತರ ಮದುವೆಗೆ ಬಂದ ಎಲ್ಲಾ ಹೆಣ್ಣುಮಕ್ಕಳಿಗೂ ಹಸಿರು ಬಳೆ ತೊಡಿಸಿ ಸಂಭ್ರಮಿಸುತ್ತಾರೆ. ಚಿಕ್ಕ ಮಕ್ಕಳಿಂದ ಹಿಡಿದು ಮುದುಕಿಯರೂ ಸಹ ಸಂಭ್ರಮದಿಂದ ಬಳೆಯನ್ನು ತೊಡಿಸಿಕೊಳ್ಳುತ್ತಾರೆ. ನಂತರ ಬಳೆಗಾರನಿಗೆ ಅಕ್ಕಿ, ಬೇಳೆ, ಬೆಲ್ಲ, ಕೊಬ್ಬರಿ, ಖರ್ಜೂರ, ಹಿಟ್ಟು ಇತ್ಯಾದಿಗಳನ್ನು ಕೊಟ್ಟು ಕಳುಹಿಸುತ್ತಾರೆ. ಇದನ್ನು 'ಊಳ್ಫಿ' ಕೊಡುವುದು ಎನ್ನುತ್ತಾರೆ. ಈಗಲೂ ಇವರಲ್ಲಿ ಈ ಪದ್ಧತಿ ಜೀವಂತವಾಗಿರುವುದನ್ನು ಕಾಣಬಹುದು.

**ಚಾಕಿ ಪೂಜಾ (ಒರಳು, ಒನಕೆ, ಬೀಸುಕಲ್ಲು ಶಾಸ್ತ್ರ)**

ಎರಡೂ ಮನೆಗಳಲ್ಲಿ ವೈಯಕ್ತಿಕವಾಗಿ ಈ ಶಾಸ್ತ್ರ ನಡೆಯುತ್ತದೆ. ಒರಳೊಳಗೆ(ಒಕ್ಲಿ) ಗೋದಿಯನ್ನು ಹಾಕಿ ಒನಕೆ(ಸಬ್ಬಲ್)ಯಿಂದ ಮುತ್ತೈದೆಯರು ಮತ್ತು ಮದುಮಗಳು ಸೇರಿ ಕಟ್ಟುವ ಮೂಲಕ ಶಾಸ್ತ್ರ ಮಾಡುತ್ತಾರೆ. ಹಾಗೆಯೇ ಬೀಸುವ ಕಲ್ಲಿಗೆ ಸ್ವಲ್ಪ ಧಾನ್ಯವನ್ನು ಹಾಕಿ ಮದುಮಗಳ ಕೈಯಿಂದ ಬೀಸುವ ಶಾಸ್ತ್ರ ಮಾಡಿಸುತ್ತಾರೆ.

**ಪಾನಬೀಡಾ ಕಾ ರಸ್ಮ್ (ವೀಳ್ಯ ಶಾಸ್ತ್ರ)**

ನಿಖಾದ ಹಿಂದಿನ ರಾತ್ರಿ ಈ ಶಾಸ್ತ್ರ ನಡೆಯುತ್ತದೆ. ಮದುಮಗನ ಮನೆಯವರೆಲ್ಲಾ ಸಂಬಂಧಿಕರೊಂದಿಗೆ ಮದುಮಗಳ ಊರಿಗೆ ಬರುತ್ತಾರೆ. ಅವರಿಗೆ ಮದುಮಗಳ ಕಡೆಯವರು ಉಳಿಯಲು ವಸತಿ ವ್ಯವಸ್ಥೆಯನ್ನು ಮಾಡಿರುತ್ತಾರೆ. ಮದುಮಗನಿಗೆ, ಮದುಮಗಳ ಅಣ್ಣ ಅಥವಾ ತಮ್ಮ ಗಂಧ ಹಚ್ಚಿ ಹಾರ ಹಾಕಿ ಸ್ವಾಗತಿಸುತ್ತಾರೆ. ರಾತ್ರಿ ಊಟದ ನಂತರ ಈ ಶಾಸ್ತ್ರ ನಡೆಯುತ್ತದೆ. ಮದುಮಗನ ಕಡೆಯವರು ಬೆಲ್ಲ, ಕೊಬ್ಬರಿ, ಸಕ್ಕರೆ, ಖರ್ಜೂರ, ಎಲೆ–ಅಡಿಕೆ, ಸಿಹಿ ಇತ್ಯಾದಿಗಳನ್ನು ತಂದಿರುತ್ತಾರೆ. ಜೊತೆಗೆ ಮದುಮಗಳಿಗೆಂದು ಬಟ್ಟೆ, ಆಭರಣ, ಬಳೆ, ಹೂ, ಸುಗಂಧ ದ್ರವ್ಯ ಇತರೆ ಅಲಂಕಾರಿಕ ವಸ್ತುಗಳು ಇತ್ಯಾದಿಗಳನ್ನು ತಂದಿರುತ್ತಾರೆ. ಅರಿಶಿಣ ಶಾಸ್ತ್ರದ ಮೊದಲು ಮದುಮಗಳಿಗೆ ಎಣ್ಣೆ ಹಚ್ಚಿ, ತಲೆಗೆ ದಾರ ಕಟ್ಟಿರುತ್ತಾರೆ. ನಂತರ ವರನ ಕಡೆಯ ಮುತ್ತೈದೆಯರು ಹೋಗಿ, ಆ ದಾರವನ್ನು ಬಿಚ್ಚಿ ಮದುಮಗಳ ಮುಖ ನೋಡಿ, ಉಂಗುರ ಅಥವಾ ಬಳೆಯನ್ನು ತೊಡಿಸುತ್ತಾರೆ. ನಂತರ ಎಲ್ಲರಿಗೂ ಎಲೆ–ಅಡಿಕೆ ಹಂಚುತ್ತಾರೆ.

**ಹಲ್ದಿ ಕಾ ರಸ್ಮ್ (ಅರಿಶಿಣ ಹಚ್ಚುವ ಶಾಸ್ತ್ರ)**

ಅದೇ ರಾತ್ರಿ ಈ ಶಾಸ್ತ್ರ ಕೂಡ ನಡೆಯುತ್ತದೆ. ಮೊದಲು ಹಂದರದ ಕೆಳಗೆ ಹೆಂಗಸರೆಲ್ಲ ಸೇರಿ ತಮ್ಮ ಭಾಷೆಯಲ್ಲಿ ಹಾಡುಗಳನ್ನು ಡೋಲಕ್ ಬಾರಿಸುತ್ತಾ ಹಾಡುತ್ತಿರುತ್ತಾರೆ. ಮದುಮಗ–ಮದುಮಗಳು ಇಬ್ಬರನ್ನು ಒಟ್ಟಿಗೆ ಕೂರಿಸಿ ಈ ಶಾಸ್ತ್ರ ಮಾಡುತ್ತಾರೆ. ವಧುವನ್ನು ವರ

ಹೊತ್ತಿಕೊಂಡು ಬಂದು ಹಂದರದ ಕೆಳಗೆ ಕೂರಿಸುತ್ತಾನೆ. ವರನನ್ನು ವಧುವಿನ ಸಹೋದರ ಹೊತ್ತಿಕೊಂಡು ಬಂದು ಕೂರಿಸುತ್ತಾನೆ. ನಂತರ ಮುತ್ತೈದೆಯರು ಮದುಮಗ-ಮದುಮಗಳಿಬ್ಬರ ಮುಖಕ್ಕೆ, ಕೈ-ಕಾಲುಗಳಿಗೆ ಅರಿಶಿಣವನ್ನು ಹಚ್ಚುತ್ತಾರೆ. ನಂತರ ಎಲ್ಲರೂ ಒಬ್ಬರಿಗೊಬ್ಬರು ಅರಿಶಿಣವನ್ನು ಹಚ್ಚಿಕೊಳ್ಳುತ್ತಾ ಸಂಭ್ರಮಿಸುತ್ತಾರೆ.

**ಟಟೋಲ್‌ನ (ಡಾಲಿಶಾಸ್ತ್ರ)**

ಡಾಲಿ ಎಂದರೆ ಒಂದು ಬಿದಿರಿನ ಪುಟ್ಟನಲ್ಲಿ ಮದುಮಗಳಿಗೆ ಬೇಕಾದ ಬಳೆ, ಕನ್ನಡಿ, ಕಾಡಿಗೆ, ಬಟ್ಟೆ, ಒಡವೆ ಇತ್ಯಾದಿ ಅಲಂಕಾರಿಕ ವಸ್ತುಗಳನ್ನು ಇರಿಸುತ್ತಾರೆ. ಈ ಪುಟ್ಟಿಯನ್ನು ಡಾಲಿ ಎನ್ನುತ್ತಾರೆ. ಮದುಮಗನ ಕಡೆಯ ಡಾಲಿಯನ್ನು ಮುತ್ತೈದೆಯರು ಹೊತ್ತುಕೊಂಡು ಮದುಮಗಳ ಮನೆಗೆ ಹೋಗಿ ಕೊಡುತ್ತಾರೆ. ಡಾಲಿಯನ್ನು ಮೆರವಣಿಗೆಯ ಮೂಲಕ ತೆಗೆದುಕೊಂಡು ಹೋಗಿ ಕೊಡುತ್ತಾರೆ. ಡಾಲಿ ಹೋರುವವರ ಮೇಲೆ ಕೆಲವು ನಿರ್ಬಂಧನೆಗಳಿವೆ. ಅವು-

೧. ಡಾಲಿ ಹೋರುವವರು ಅಂಗವಿಕಲರಾಗಿರಬಾರದು.

೨. ಪಾವಿತ್ರ್ಯತೆಯನ್ನು ಕಾಪಾಡಿಕೊಂಡಿರಬೇಕು.

೩. ಮತ್ತೈದೆಯಾಗಿರಬೇಕು.

೪. ಯಾವುದೇ ರೀತಿಯ ಕಳಂಕವನ್ನು ಹೊಂದಿರಬಾರದು.

೫. ಅಂತರ್ ಜಾತಿ ವಿವಾಹವಾಗಿರಬಾರದು.

೬. ಯಾವುದೇ ಜಗಳದಲ್ಲಿ ಹೆಂಗಸಿನ ಸೆರಗು ಹರಿದಿದ್ದರೆ, ಅವರು ಡಾಲಿ ಹೋರುವಂತಿಲ್ಲ

೭. ಡಾಲಿಯನ್ನು ಒಂದು ಬಾರಿ ತೆಗೆದುಕೊಂಡವರು ಮತ್ತು ಪಡೆದವರು ಇನ್ನೊಂದು ಬಾರಿ ಡಾಲಿಯನ್ನು ಹೋರುವಂತಿಲ್ಲ.

ಆದರೆ ಇತ್ತೀಚಿನ ದಿನಗಳಲ್ಲಿ ಈ ಶಾಸ್ತ್ರದಲ್ಲಿ ಕೆಲವು ಬದಲಾವಣೆಗಳಾಗಿವೆ. ಡಾಲಿಯಲ್ಲಿ ಬಿದಿರಿನ ಪುಟ್ಟಿಗಳ ಜಾಗವನ್ನು ಅಲಂಕಾರಿಕ ಪೆಟ್ಟಿಗೆಗಳು ಪಡೆದುಕೊಂಡಿವೆ. ಈ ಆಧುನಿಕತೆಗೆ ತಕ್ಕಂತೆ ಡಾಲಿಶಾಸ್ತ್ರ ಎಂಬುದು ಹೊಸ ರೂಪ ಪಡೆದಿದೆ ಎನ್ನಬಹುದು.

**ನಿಖಾ (ತಾಳಿಶಾಸ್ತ್ರ/ಮೂಹೂರ್ತ)**

ಮದುವೆಯ ಅತ್ಯಂತ ಪ್ರಮುಖ ಹಂತ ಇದು. ಈ ಶಾಸ್ತ್ರವಾದರೆ ಮದುವೆ ಆದಂತೆ. ಈ ಶಾಸ್ತ್ರದ ಮೂಲಕ ಮದುಮಗ ಮದುಮಗಳಿಬ್ಬರು ಸತಿ-ಪತಿಗಳಾಗುತ್ತಾರೆ. ಬೆಳಿಗ್ಗೆ ಮದುಮಗಳ ಮನೆಯವರು ಮದುಮಗನಿಗೆ ಹೊಸ ಬಟ್ಟೆ, ಸುಗಂಧ ದ್ರವ್ಯ, ಇತ್ಯಾದಿ

ವಸ್ತುಗಳನ್ನು ತೆಗೆದುಕೊಂಡು ಹೋಗಿ ಕೊಡುತ್ತಾರೆ. ನಂತರ ಮದುಮಗಳಿಗೆ ಮುತ್ತೈದೆಯರು ಸೇರಿ ಹಾಲು-ತುಪ್ಪ-ಎಣ್ಣೆ ತಲೆ ಮೇಲೆ ಹಾಕಿ ಸ್ನಾನ ಮಾಡಿಸುತ್ತಾರೆ. ನಂತರ ಮದುಮಗ ಮತ್ತು ಮದುಮಗಳು ಇಬ್ಬರಿಗೂ ಅಲಂಕರಿಸುತ್ತಾರೆ. ಮದುಮಗಳನ್ನು ಮುತ್ತೈದೆಯರು ಕರೆದುಕೊಂಡು ಬರುತ್ತಾರೆ. ಮದುಮಗ-ಮದುಮಗಳನ್ನು ಬೇರೆ ಬೇರೆ ಸ್ಥಳದಲ್ಲಿ ಕೂರಿಸುತ್ತಾರೆ. ನಿಖಾದ ಜವಾಬ್ದಾರಿಯನ್ನು ಸಮಾಜದ ಹಿರಿಯರೊಬ್ಬರು ವಹಿಸಿಕೊಂಡಿರುತ್ತಾರೆ. ಮಸೀದಿಯ ಮೌಲ್ವಿ ಬಂದು ಅದನ್ನು ನಡೆಸಿಕೊಡುತ್ತಾರೆ. ಇವರು ದೇವರ ಹೆಸರಿನಲ್ಲಿ ನಿಖಾ ಓದುವುದು ಶುರು ಮಾಡುತ್ತಾರೆ. ಇಂಥ ಮನೆಯ ಹುಡುಗಿಯನ್ನು ಇಂಥವರ ಮನೆಯ ಹುಡುಗನಿಗೆ ಕೊಟ್ಟು ಮದುವೆ ಮಾಡಲಾಗುತ್ತಿದೆ. ಇನ್ನು ಮೇಲೆ ಅವರಿಬ್ಬರು ಸತಿ-ಪತಿಯೆಂದು ಅಲ್ಲಾಹ್ ಒಪ್ಪಿಕೊಂಡಿದ್ದಾನೆ. ಅವರು ಕೊನೆಯವರೆಗೂ ಮಕ್ಕಳೊಂದಿಗೆ ಸುಖ-ಸಂತೋಷ-ನೆಮ್ಮದಿಯಿಂದ ಇರಲಿ ಎಂದು ಹಾರೈಸಿ ಮದುಮಗಳ ಒಪ್ಪಿಗೆ ಇದೆಯೇ ಎಂದು ಕೇಳಿ ಮಸೀದಿಯ ಶಾದಿ ರಿಜಿಸ್ಟ್ರರ್‌ನಲ್ಲಿ ಮದುಮಗಳ ಸಹಿಯನ್ನು ಪಡೆಯುತ್ತಾರೆ. ನಂತರ ಮದುಮಗನಿಗೆ ಒಪ್ಪಿಗೆ ಇದೆಯೇ ಎಂದು ಮೂರು ಬಾರಿ ಕೇಳುತ್ತಾರೆ. ಆಗ ಮದುಮಗ ಮೂರು ಬಾರಿ **"ಅಲಹಮ್ದುಲಿಲ್ಲಾ ಮುಜೆ ಕುಬೂಲ್ ಹೈ"** ಎಂದು ಹೇಳಿ ಸಹಿ ಮಾಡಬೇಕು. ನಂತರ ಮದುಮಗ ಮತ್ತು ಮದುಮಗಳ ಕಡೆಯಿಂದ ಇಬ್ಬರು ಸಾಕ್ಷಿಗಳ ಸಹಿ ಪಡೆಯುತ್ತಾರೆ. ನಂತರ ಮದುಮಗ ಮದುಮಗಳಿಗೆ ಎಷ್ಟು **ಮಹರ್(ಕನ್ಯಾಶುಲ್ಕ)** ಕೊಡುತ್ತಾನೆ ಎಂದು ಹೇಳುತ್ತಾನೆ. ಕೆಲವರು ಮಹರನ್ನು ನಗದು ರೂಪದಲ್ಲಿ ಅಥವಾ ಆಭರಣ ರೂಪದಲ್ಲಿ ಕೊಟ್ಟರೆ, ಕೆಲವರು ಇಷ್ಟು ಹಣ ಕೊಡುತ್ತೇವೆ ಎಂದು ಬರೆಸಿರುತ್ತಾರೆ. ಜೊತೆಗೆ ಸಮುದಾಯ ನಿಗದಿ ಮಾಡಿದ ಹಣವನ್ನು ಸಹ ಮದುಮಗಳ ಮನೆಯವರಿಗೆ ಕೊಡುತ್ತಾರೆ. ಇದನ್ನು **'ಭೇಂಡ್'** ಎನ್ನುತ್ತಾರೆ. ಇಲ್ಲಿಗೆ ನಿಖಾ ಮುಗಿಯುತ್ತದೆ. ನಂತರ ಮದುವೆಗೆ ಬಂದ ಎಲ್ಲರೂ ನೂತನ ದಂಪತಿಗಳನ್ನು ಹಾರೈಸುತ್ತಾರೆ. ನಂತರ ಮದುಮಗಳಿಗೆ ಅವಳ ಅತ್ತೆ ಅಥವಾ ಸೋದರತ್ತೆ **"ಲಚ್ಚಾ"**(ಕರಿಮಣಿ)ಯನ್ನು ಕಟ್ಟುತ್ತಾಳೆ. ನಂತರ ಮದುವೆಗೆ ಬಂದವರೆಲ್ಲಾ ನೂತನ ದಂಪತಿಗಳಿಗೆ ಉಡುಗೊರೆಯನ್ನು ಕೊಡುತ್ತಾರೆ. ನಂತರ ಎಲ್ಲರಿಗೂ ಮಾಂಸದೂಟ ಮತ್ತು ಸಿಹಿಯನ್ನು ಬಡಿಸುತ್ತಾರೆ. ನಂತರ ನೂತನ ದಂಪತಿಗಳಿಂದ ಕೊಬ್ಬರಿ ಮುರಿಸುವ ಉಂಗುರ ಹುಡುಕುವ ಶಾಸ್ತ್ರಗಳನ್ನು ಮಾಡುತ್ತಾರೆ. ನಂತರ ಮದುಮಗಳು ಅವಳ ಗಂಡನ ಮನೆಗೆ ಹೋಗುತ್ತಾಳೆ. ಅತ್ತೆ ಮನೆಗೆ ಹೋದ ಹೊಸ ಸೊಸೆ ಮತ್ತು ಮಗನನ್ನು ಬಾಗಿಲ ಮುಂದೆ ನಿಲ್ಲಿಸಿ ದೃಷ್ಟಿ ತೆಗೆದು ಕೆಲ ತಮಾಷೆಯ ಪ್ರಶ್ನೆಗಳನ್ನು ಕೇಳಿ ಒಳಗೆ ಕರೆದುಕೊಂಡು ಹೋಗುತ್ತಾರೆ.

**ವಲೀಮಾ (ಬೀಗರೂಟ)**

ಮೊದಲು ಇವರು ಈ ಶಾಸ್ತ್ರವನ್ನು ಮಾಡುತ್ತಿರಲಿಲ್ಲ. ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾದ ಮೇಲೆ ಇದನ್ನು ಮಾಡುತ್ತಿದ್ದಾರೆ. ವಲೀಮಾ ಶಾಸ್ತ್ರವನ್ನು ಮದುಮಗನ ಮನೆಯಲ್ಲಿ 'ನಿಖಾ'

ಆದ ಮರು ದಿನ ಮಾಡುತ್ತಾರೆ. ಇದಕ್ಕೆ ಮದುಮಗಳ ಮನೆಯವರು ತಮ್ಮ ಸಂಬಂಧಿಕರೊಂದಿಗೆ ಮದುಮಗನ ಮನೆಗೆ ಬರುತ್ತಾರೆ. ಊಟದ ನಂತರ ಈ ಶಾಸ್ತ್ರ ನಡೆಯುತ್ತದೆ. ಮೊದಲ ಬಾರಿಗೆ ಮದುಮಗ ಮತ್ತು ಮದುಮಗಳನ್ನು ಒಟ್ಟಿಗೆ ಕೂರಿಸಿ ಶಾಸ್ತ್ರ ಮಾಡುತ್ತಾರೆ. ಇಲ್ಲಿ ಕೂಡ ಕೆಲವರು ನೂತನ ದಂಪತಿಗಳಿಗೆ ಉಡುಗೊರೆಗಳನ್ನು ಕೊಡುತ್ತಾರೆ. ಕೆಲವರು ಅದೇ ದಿನ ನೂತನ ದಂಪತಿಗಳನ್ನು ಮದುಮಗಳ ಮನೆಗೆ ಕರೆದುಕೊಂಡು ಹೋಗುತ್ತಾರೆ. ಕೆಲವರು ಮದುಮಗನ ಮನೆಯಲ್ಲಿಯೇ ಬಿಟ್ಟು ಹೋಗುತ್ತಾರೆ.

ನಂತರ ಐದು ಶುಕ್ರವಾರಗಳು **"ಪಾಂಚ್ ಜುಮಾಗಿ"** ಎಂಬ ಶಾಸ್ತ್ರ ಮಾಡುತ್ತಾರೆ. ಎರಡು ಶುಕ್ರವಾರ ಹುಡುಗನ ಮನೆಯಲ್ಲಿ, ಮೂರು ಶುಕ್ರವಾರ ಹುಡುಗಿಯ ಮನೆಯಲ್ಲಿ ಈ ಶಾಸ್ತ್ರ ಮಾಡುತ್ತಾರೆ. ನೂತನ ದಂಪತಿಗಳನ್ನು ಕೂರಿಸಿ, ಮದುಮಗಳ ಉಡಿ ತುಂಬುತ್ತಾರೆ. ಅಂದು ಎಲ್ಲರಿಗೂ ಊಟದ ವ್ಯವಸ್ಥೆ ಇರುತ್ತದೆ. ಈ ಎಲ್ಲಾ ಶಾಸ್ತ್ರಗಳೊಂದಿಗೆ ಮದುವೆ ಮುಗಿಯುತ್ತದೆ. ಮದುವೆಯಾದ ಒಂದು ವಾರದ ನಂತರ ಮಸೀದಿಯವರು ನಿಖಾ ಆದ ಪ್ರಮಾಣ ಪತ್ರ ಅಂದರೆ "ನಿಖಾ ನಾಮಾ"(ಮದುವೆ ದಾಖಲೆ ಪತ್ರ) ವನ್ನು ಕೊಡುತ್ತಾರೆ. ಸರ್ಕಾರ ಮದುವೆಯನ್ನು ದಾಖಲು ಮಾಡುವ ಪದ್ಧತಿಯನ್ನು ನಾವು ಇತ್ತೀಚೆಗೆ ಕಾಣುತ್ತೇವೆ. ಆದರೆ ಇಸ್ಲಾಂನಲ್ಲಿ ಈ ಪದ್ಧತಿ ಬಹು ಹಿಂದಿನಿಂದಲೂ ಇರುವುದನ್ನು ಕಾಣುತ್ತೇವೆ. ಮಸ್ಜೀದ್‌ನ ಖಾಜಿ ತಮ್ಮ ಮಸ್ಜೀದ್‌ನ ನಿಖಾ ದಾಖಲು ಪುಸ್ತಕದಲ್ಲಿ ಮದುವೆಯನ್ನು ದಾಖಲು ಮಾಡಿಕೊಂಡು ಒಂದು ವಾರದ ನಂತರ ಮದುಮಗ ಮತ್ತು ಮದುಮಗಳು ಕಡೆಯ ಇಬ್ಬರಿಗೂ ನಿಖಾ ನಾಮಾವನ್ನು ಕೊಡುತ್ತಾರೆ. ಹಾಗಾಗಿ ಈ ಮದುವೆಯನ್ನು ದಾಖಲು ಮಾಡುವುದು ಇಸ್ಲಾಂನ ಕೊಡುಗೆಯಾಗಿದೆ.

ಮದುವೆಯ ಎಲ್ಲಾ ಆಚರಣೆಗಳಲ್ಲೂ ನಾವು ಬುಡಕಟ್ಟು ಮತ್ತು ಇಸ್ಲಾಂ ಎರಡರ ಸಂಮಿಶ್ರಣವನ್ನು ಕಾಣಬಹುದು ಏಕೆಂದರೆ ಭಾರತದಲ್ಲಿ ಹೆಚ್ಚಿನ ಮುಸ್ಲಿಮರು ಇತರೆ ಸಮುದಾಯ ಗಳಿಂದ ಮತಾಂತರಗೊಂಡವರಾದ್ದರಿಂದ ಅವರೆಲ್ಲರೂ ಎರಡೂ ಸಂಸ್ಕೃತಿಗಳ ಆಚರಣೆಗಳನ್ನು ಆಚರಿಸುತ್ತಿದ್ದಾರೆ. ಆದರೆ ಇತ್ತೀಚಿಗೆ ಮುಸ್ಲಿಂರಲ್ಲಿ ಅನೇಕ ಹಳೆಯ ಆಚರಣೆಗಳು ಕಣ್ಮರೆ ಯಾಗುತ್ತಿರುವುದನ್ನು ಕಾಣಬಹುದು.

ಚಪ್ಪರ್‌ಬಂದ್ ಸಮುದಾಯದವರೂ ಸಹ ಸಂಪೂರ್ಣವಾಗಿ ಇಸ್ಲಾಂ ಧರ್ಮದ ಪ್ರಕಾರ ಜೀವನ ನಡೆಸುತ್ತಿದ್ದಾರೆ. ಕೆಲವರಲ್ಲಿ ಮಾತ್ರ ಕೆಲವೇ ಕೆಲವು ಆಚರಣೆಗಳು ಉಳಿದುಕೊಂಡಿವೆ. ಇವರು ಮೊದಲು ಮದುವೆಯನ್ನು ಐದರಿಂದ ಏಳು ದಿನಗಳವರೆಗೆ ಮಾಡುತ್ತಿದ್ದರು. ಆದರೆ ಈ ಆಧುನಿಕತೆ ಪ್ರಭಾವಕ್ಕೊಳಗಾಗಿ ಇವರು ಸಹ ಒಂದು ಅಥವಾ ಎರಡು ದಿನಗಳಲ್ಲಿ ಮದುವೆ ಮುಗಿಸುತ್ತಿದ್ದಾರೆ. ಅನೇಕರು ಕೇವಲ 'ನಿಖಾ' ಮತ್ತು 'ವಲಿಮಾ' ಶಾಸ್ತ್ರಗಳನ್ನು ಮಾತ್ರ ಮಾಡುತ್ತಾರೆ. ಇದಕ್ಕೆಲ್ಲ ಕಾರಣವೆಂದರೆ ಈ ಬಿಡುವಿಲ್ಲದ ಜೀವನದಲ್ಲಿ ಯಾರಿಗೂ

ಸಮಯವಿಲ್ಲದೇ ಇರುವುದರಿಂದ ಎಲ್ಲರೂ ಕಡಿಮೆ ಸಮಯದಲ್ಲಿ ಎಲ್ಲಾ ಕೆಲಸ ಕಾರ್ಯಗಳು ಆಗ ಬೇಕು ಎಂದು ಬಯಸುತ್ತಾರೆ. ಜೊತೆಗೆ ಈ ಸಮುದಾಯ ಆರ್ಥಿಕವಾಗಿ ಹಿಂದುಳಿದಿರು ವುದರಿಂದ ಆರ್ಥಿಕ ಹೊರೆ ಕಡಿಮೆ ಮಾಡಿಕೊಳ್ಳಲು ಮದುವೆಯನ್ನು ತುಂಬಾನೆ ಸರಳವಾಗಿ ಮಾಡುತ್ತಿದ್ದಾರೆ. ಜೊತೆಗೆ ಇತ್ತೀಚೆಗೆ ಈ ಸಮುದಾಯದವರು ಮುಸ್ಲಿಂ ಇತರೆ ಸಮುದಾಯ ಗಳೊಂದಿಗೆ ಕೂಡ ವೈವಾಹಿಕ ಸಂಬಂಧ ಬೆಳೆಸುತ್ತಿದ್ದಾರೆ. ಒಟ್ಟಿನಲ್ಲಿ ಚಪ್ಪರ್‌ಬಂದ್ ಸಮುದಾಯ ದವರು ಸಾಮಾಜಿಕ ಬದಲಾವಣೆಗೆ ಒಳಗಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಮುಸ್ಲಿಂ ಸಮುದಾಯದ ಒಂದು ಒಳ ಪಂಗಡವಾಗಿದ್ದುಕೊಂಡೇ ತಮ್ಮ ಮೂಲ ಚಹರೆ/ಅಸ್ಮಿತೆ/ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಇವರ ವಿವಾಹದ ಪ್ರತಿಯೊಂದು ಆಚರಣೆಯಲ್ಲೂ ಬುಡಕಟ್ಟು ಸಂಸ್ಕೃತಿಯನ್ನು ಕಾಣಬಹುದಾಗಿದೆ. ಈ ಸಮುದಾಯ ಸ್ವಾಂಗೀಕರಣಕ್ಕೆ ಒಳಗಾಗಿರುವುದರಿಂದ ಇತರೆ ಸಮುದಾಯಗಳ ಸಂಸ್ಕೃತಿಯನ್ನು ಸಹ ತನ್ನ ಆಚರಣೆಗಳಲ್ಲಿ ಅಳವಡಿಸಿಕೊಂಡಿದೆ.

**ಬಾಲ್ಯವಿವಾಹ**

ಚಪ್ಪರ್‌ಬಂದರಲ್ಲಿ ಮೊದಲಿನಿಂದಲೂ ಬಾಲ್ಯವಿವಾಹ ಪದ್ಧತಿ ಇದೆ. ಮೊದಲಿಗಿಂತ ಈಗ ಅದರ ಪ್ರಮಾಣ ಕಡಿಮೆಯಾಗಿದೆ. ಈಗ ಕೆಲವರು ಹುಡುಗಿಗೆ ೧೬-೧೭ ವರ್ಷ ವಯಸ್ಸಿನಲ್ಲಿ ಹುಡುಗನಿಗೆ ೧೮-೧೯ ವರ್ಷ ವಯಸ್ಸಿನಲ್ಲಿ ವಿವಾಹ ಮಾಡುತ್ತಿದ್ದಾರೆ. ಸಂವಿಧಾನದ ಪ್ರಕಾರ ಹುಡುಗಿಗೆ ೧೮, ಹುಡುಗನಿಗೆ ೨೧ ವರ್ಷಕ್ಕಿಂತ ಮುಂಚೆ ಮದುವೆ ಮಾಡಿದರೆ ಅದನ್ನು ಬಾಲ್ಯ ವಿವಾಹ ಎನ್ನುತ್ತಾರೆ. ಇದು ಕಾನೂನ ಬಾಹಿರ ಕೂಡ. ಆದರೆ ಬುಡಕಟ್ಟುಗಳಲ್ಲಿ ಇದು ಸಾಮಾನ್ಯವಾದುದಾಗಿದೆ. ಆದರೆ ಇತ್ತೀಚೆಗೆ ಅಲ್ಪ ಪ್ರಮಾಣದಲ್ಲಿ ಶಿಕ್ಷಣವನ್ನು ಪಡೆದವರು ತಮ್ಮ ವಿವಾಹದ ವಯಸ್ಸನ್ನು ಮುಂದೂಡುತ್ತಿದ್ದಾರೆ.

**ಬಹುಪತ್ನಿತ್ವ**

ಬುಡಕಟ್ಟು ಸಂಸ್ಕೃತಿಯಲ್ಲಿ ಮತ್ತು ಇಸ್ಲಾಂ ಧರ್ಮ ಎರಡರಲ್ಲೂ ಬಹುಪತ್ನಿತ್ವ ಪದ್ಧತಿ ಇದೆ. ಹಾಗಾಗಿ ಇವರಲ್ಲಿ ಬಹುಪತ್ನಿತ್ವ ಪದ್ಧತಿಯನ್ನು ಕಾಣಬಹುದಾಗಿದೆ. ಕೆಲವರು ಮೊದಲ ಪತ್ನಿಗೆ ಮಕ್ಕಳಾಗದೇ ಇದ್ದುದ್ದಕ್ಕೆ ಎರಡನೇ ವಿವಾಹ ಮಾಡಿಕೊಂಡಿದ್ದಾರೆ. ಕೆಲವರು ಮೊದಲ ಪತ್ನಿಗೆ ಮಕ್ಕಳಿದ್ದೂ ಎರಡನೇ ಮದುವೆ ಮಾಡಿಕೊಂಡಿರುವುದು ಕಂಡುಬಂದಿದೆ. ಅದರ ಪ್ರಮಾಣ ತುಂಬಾನೆ ಕಡಿಮೆ ಎನ್ನಬಹುದು.

**ವಿಧವಾ ವಿವಾಹ/ವಿಧುರ ವಿವಾಹ**

ಚಪ್ಪರ್‌ಬಂದರಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಚಿಕ್ಕ ವಯಸ್ಸಿನಲ್ಲಿ ಗಂಡ ಕಳೆದು ಕೊಂಡಿದ್ದರೆ ಅಂತಹ ಹೆಣ್ಣಿಗೆ ಮರು ಮದುವೆಗೆ ಅವಕಾಶವಿದೆ. ಇವರಲ್ಲಿ ವಿಧುರ ವಿವಾಹಕ್ಕೂ

ಅವಕಾಶವಿದೆ. ಹೆಂಡತಿ ಸತ್ತ ನಂತರ ಬೇರೆ ಹೆಂಗಸನ್ನು ವಿವಾಹವಾಗಬಹುದು. ಆದರೆ ಅಂತಹ ಮದುವೆ ತುಂಬಾನೆ ಸರಳವಾಗಿ ನಡೆಯುತ್ತದೆ.

**ಅಂತರ್‌ಜಾತಿ ವಿವಾಹ**

ಅಂತರ್‌ಜಾತಿ ವಿವಾಹವನ್ನು ಇವರು ಬೆಂಬಲಿಸುವುದಿಲ್ಲ. ಒಂದು ವೇಳೆ ತಮ್ಮ ಸಮುದಾಯದ ಹುಡುಗ ಬೇರೆ ಸಮುದಾಯದ ಹುಡುಗಿಯನ್ನು ವಿವಾಹವಾಗಿ ಕರೆತಂದರೆ, ಆ ಹುಡುಗಿಯನ್ನು ತಮ್ಮ ಕುಲದೊಳಗೆ ತೆಗೆದುಕೊಂಡು ಮರು ವಿವಾಹ ಮಾಡುತ್ತಾರೆ. ಅಂದರೆ ಹುಡುಗನ ಸೋದರತ್ತೆ/ಸೋದರಮಾವ ಆ ಹುಡುಗಿಯನ್ನು ತಮ್ಮ ಮಗಳೆಂದು ಮಡಿಲು ತುಂಬಿಸಿಕೊಂಡು, ತಮ್ಮ ಕುಲಕ್ಕೆ ಸೇರಿಸಿಕೊಳ್ಳುತ್ತಾರೆ. ಬಡೇಭಾಯಿ ಗುಂಪಿನ ಹುಡುಗ ಅಂತರ್‌ಜಾತಿ ವಿವಾಹವಾಗಿದ್ದು, ಒಂದು ವೇಳೆ ಆ ಹುಡುಗಿ ವಿವಾಹಕ್ಕಿಂತ ಮೊದಲು ಗರ್ಭವತಿಯಾಗಿ ಹುಟ್ಟಿದ ಮಗು ಛೋಟೆಭಾಯಿ ಗುಂಪಿಗೆ ಸೇರುತ್ತದೆ. ತಮ್ಮ ಕುಲದೊಳಗೆ ಸೇರಿಸಿಕೊಂಡ ನಂತರ ಹುಟ್ಟಿದ ಮಗು ಬಡೇಭಾಯಿ ಗುಂಪಿಗೆ ಸೇರುತ್ತದೆ. ಆದರೆ ತಮ್ಮ ಸಮುದಾಯದ ಹುಡುಗಿ ಅಂತರ್‌ಜಾತಿ ವಿವಾಹವಾದರೆ, ಅವಳನ್ನು ಮತ್ತೆ ಎಂದೂ ಮನೆಗೆ ವಾಪಸ್ಸು ಕರೆದುಕೊಳ್ಳುವುದಿಲ್ಲ. ಆದರೆ ಇವರಲ್ಲಿ ಅಂತರ್‌ಜಾತಿ ವಿವಾಹಗಳ ಪ್ರಮಾಣ ತುಂಬಾನೆ ಕಡಿಮೆ ಎನ್ನಬಹುದು.

**ಗೋದ್ ಭರಾಯಿ/ ಚೋಲಿ ಕಾ ರಸ್ಮ್ (ಸೀಮಂತ ಕಾರ್ಯ)**

ಚಪ್ಪರ್‌ಬಂದ್ ಸಮುದಾಯದವರು ಹುಡುಗಿ ಗರ್ಭಿಣಿಯಾದ ಐದು ಅಥವಾ ಏಳು ತಿಂಗಳಲ್ಲಿ ಸೀಮಂತ ಕಾರ್ಯ ಮಾಡುತ್ತಾರೆ. ಅದಕ್ಕೆ 'ಚೋಲಿ ಕರ್ನ' ಎನ್ನುತ್ತಾರೆ. ಹುಡುಗಿ ಮನೆಯವರು ಓಳಿಗೆ, ಅನ್ನ, ಸಾರು, ಇತ್ಯಾದಿಗಳನ್ನು ತಯಾರಿಸಿಕೊಂಡು ಹುಡುಗನ ಮನೆಗೆ ಹೋಗುತ್ತಾರೆ. ಗಂಡ–ಹೆಂಡತಿಯನ್ನು ಶಾಸ್ತ್ರ ಮಾಡಿ, ಗರ್ಭಿಣಿಯ ಉಡಿ ತುಂಬುತ್ತಾರೆ. ನಂತರ ಹೊಸ ಬಟ್ಟೆ ಕೊಡುತ್ತಾರೆ. ಸೀಮಂತ ಕಾರ್ಯಕ್ಕೆ ಬಂದ ಸಂಬಂಧಿಕರು ಸಹ ಗರ್ಭಿಣಿಗೆ ಕುಪ್ಪಸ ಅಥವಾ ಸೀರೆಯನ್ನು ಕೊಡುತ್ತಾರೆ. ಮರು ದಿನ ಗಂಡನ ಮನೆಯವರೂ ಸಹ ಇದೇ ರೀತಿ ಸೀಮಂತ ಕಾರ್ಯ ಮಾಡುತ್ತಾರೆ. ನಂತರ ಮರುದಿನ ಗರ್ಭಿಣಿಯನ್ನು ತವರು ಮನೆಯವರು ಕರೆದುಕೊಂಡು ಹೋಗುತ್ತಾರೆ. ಗಂಡನ ಮನೆಯವರು ಸಹ ಹುಡುಗಿ ತವರು ಮನೆಗೆ ಹೋಗಬೇಕಾದರೆ ಬುತ್ತಿಯನ್ನು ಕೊಡುತ್ತಾರೆ. ಅದನ್ನು ಸಂಬಂಧಿಕರಿಗೆ, ನೆರೆಹೊರೆಯವರಿಗೆ ಹಂಚುತ್ತಾರೆ.

**ಜನನ**

ಹುಡುಗಿಗೆ ಮೊದಲ ಹೆರಿಗೆಗೆ ತವರು ಮನೆಗೆ ಕಳುಹಿಸಲಾಗುತ್ತದೆ. ಮೊದಲು ಹೆರಿಗೆಯನ್ನು ಮನೆಯಲ್ಲೇ ಮಾಡುತ್ತಿದ್ದರು. ಹೆರಿಗೆಯ ನಂತರ ಇವರೂ ಸಹ ಮೈಲಿಗೆ ಆಚರಣೆ ಆಚರಿಸುತ್ತಾರೆ.

ಮನೆಯ ಹಿರಿಯ ಹೆಂಗಸು ಅಥವಾ ಸೂಲಗಿತ್ತಿಯ ಸಹಾಯದಿಂದ ಹೆರಿಗೆ ಮಾಡಿಸಲಾಗುತ್ತಿತ್ತು. ಹೆರಿಗೆಯಾದ ನಂತರ ಮಗುವಿನ ಹೊಕ್ಕುಳ ಬಳ್ಳಿಯನ್ನು ಕತ್ತರಿಸಿ, ಭೂಮಿಯಲ್ಲಿ ಹೂಳುತ್ತಿದ್ದರು. ಹೆರಿಗೆ ಮಾಡಿದ ಸೂಲಗಿತ್ತಿ ಧಾನ್ಯವನ್ನು ನೀಡಿ ಕಳುಹಿಸುತ್ತಿದ್ದರು. ನಂತರ ತಾಯಿ–ಮಗು ಇಬ್ಬರಿಗೂ ಸ್ನಾನ ಮಾಡಿಸಲಾಗುತ್ತಿತ್ತು. ಆದರೆ ಈ ಆಧುನಿಕ ಕಾಲದಲ್ಲಿ ಹೆಚ್ಚಾಗಿ ಹೆರಿಗೆಗಳು ಆಸ್ಪತ್ರೆಯಲ್ಲಿಯೇ ನಡೆಯುತ್ತವೆ. ಹಾಗಾಗಿ ಹೊಕ್ಕುಳ ಬಳ್ಳಿ ಹೂಳುವ ಪದ್ಧತಿ ಕೂಡ ಕಂಡುಬರುವುದಿಲ್ಲ. ಮಗು ಹುಟ್ಟಿದ ನಂತರ ಅದಕ್ಕೆ ಸ್ನಾನ ಮಾಡಿಸಿ ಅದರ ಕಿವಿಯಲ್ಲಿ ಅಝೂನ್ ಕೂಗಿ ನಂತರ ಮನೆಯ ಹಿರಿಯ ಗಂಡಸು ಅಥವಾ ಸಮುದಾಯದ ಹಿರಿಯ ಗಂಡಸು ಹೆಸರನ್ನು ಕೂಗುತ್ತಾರೆ. ಸಾಮಾನ್ಯವಾಗಿ ಈ ವೇಳೆ ಕುಟುಂಬದ ಹಿರಿಯರ ಅಥವಾ ಮನೆ ದೇವರ ಹೆಸರನ್ನು ಕೂಗುತ್ತಾರೆ. ಇವರೂ ಸಹ ಹೆರಿಗೆಯಾದ ಮನೆಯನ್ನು ಮೈಲಿಗೆ ಎಂದೇ ಭಾವಿಸುತ್ತಾರೆ. ನಲವತ್ತು ದಿನಗಳವರೆಗೆ ಮೈಲಿಗೆ ಆಚರಿಸುತ್ತಾರೆ. ಈ ನಲವತ್ತು ದಿನಗಳವರೆಗೆ ಬಾಣಂತಿಯಾದವಳು ಯಾವುದೇ ರೀತಿಯ ಧಾರ್ಮಿಕ ಕಾರ್ಯಗಳನ್ನು ಮಾಡುವಂತಿಲ್ಲ. ನಲವತ್ತು ದಿನಗಳ ನಂತರ ಸ್ನಾನ ಮಾಡಿದ ನಂತರ ಅವಳ ಮೈಲಿಗೆ ಕಳೆಯುತ್ತದೆ.

**ಛಟ್ಟಿ**

ಮಗು ಹುಟ್ಟಿದ ೬ನೇ ದಿನಕ್ಕೆ ಈ ಶಾಸ್ತ್ರ ಮಾಡುತ್ತಾರೆ. ಒಂದು ಮರದೊಳಗೆ ಎಲೆ–ಅಡಿಕೆ, ಮಗುವಿನ ಬಟ್ಟೆ, ದಾರ, ಪಾಟಿ–ಪಸ್ತಕ, ಕಾಡಿಗೆ, ೫ ಚಿಕ್ಕ ರೊಟ್ಟಿಗಳು, ಅನ್ನದ ೫ ಉಂಡೆ ಇಟ್ಟು ಅದನ್ನು ಮಗುವಿಗೆ ಮುಟ್ಟಿಸುತ್ತಾರೆ. ಈ ವೇಳೆ ೨ ದೀಪಗಳನ್ನು ಹಚ್ಚಿರುತ್ತಾರೆ. ಅವುಗಳ ಬೆಳಕು ತಾಯಿ–ಮಗುವಿನ ಮೇಲೆ ಬೀಳಬಾರದು ಎಂದು ಇಬ್ಬರಿಗೂ ಹೊದಿಕೆ ಹೊಚ್ಚಿರುತ್ತಾರೆ. ಈ ದಿನ ಕಡ್ಡಾವಾಗಿ ಒಂದು ಹುಂಜವನ್ನು ಕೊಯ್ಯಬೇಕು. ಎಲ್ಲಾ ಸಂಬಂಧಿಕರಿಗೆ ಊಟ ಹಾಕಿಸುತ್ತಾರೆ. ಈ ದಿನ ಛಟ್ಟಿ ಅಮ್ಮ ಮಗುವಿನ ಹಣೆಬರಹ ಬರೆಯುತ್ತಾಳೆ ಎಂಬ ನಂಬಿಕೆ ಇದೆ.

**ನಾಮಕರಣ**

ಮಗು ಹುಟ್ಟಿದ ನಲವತ್ತನೇ ದಿನಕ್ಕೆ ನಾಮಕರಣ ಕಾರ್ಯಕ್ರಮ ಇಟ್ಟುಕೊಳ್ಳುತ್ತಾರೆ. ಹುಡುಗಿಯ ಗಂಡನ ಮನೆಯವರು ಕೆಲ ಸಂಬಂಧಿಕರೊಂದಿಗೆ ಹುಡುಗಿಯ ತವರು ಮನೆಗೆ ಬರುತ್ತಾರೆ. ಎಲ್ಲರಿಗೂ ಹಂಚಲು ಲಾಡು ತಂದಿರುತ್ತಾರೆ. ಮಗುವಿಗೆ ಹೊಸ ಬಟ್ಟೆ ಉಡಿಸಿ, ಸಿಂಗರಿಸಿದ ತೊಟ್ಟಿಲಲ್ಲಿ ಮಲಗಿಸುತ್ತಾರೆ. ಮಗುವಿನ ಸೋದರತ್ತೆ ಹೆಸರಿಡುತ್ತಾಳೆ. ಮಗುವಿನ ಕಿವಿಯಲ್ಲಿ 'ಕನಾನನ ಕುರ್' ಎಂದು ಹೇಳಿ, ಮೊದಲೇ ನಿಶ್ಚಯಿಸಿದ ಹೆಸರನ್ನು ಇಡುತ್ತಾಳೆ. ಹೆಸರಿಡಬೇಕಾದರೆ ಚುರುಮುರಿ ಜೊತೆ ೧೧ ಅಥವಾ ೨೫ ರೂಪಾಯಿ ಇಟ್ಟಿರುತ್ತಾರೆ.

ಅದನ್ನು ಸೋದರತ್ತೆಗೆ ಕೊಡುತ್ತಾರೆ. ನಂತರ ಎಲ್ಲರಿಗೂ ಎಲೆ-ಅಡಿಕೆ, ಲಾಡು ಹಂಚುತ್ತಾರೆ ನಾಮಕರಣಕ್ಕೆ ಬಂದ ಸಂಬಂಧಿಕರು ಮಗುವಿಗೆ ಬಟ್ಟೆ, ದುಡ್ಡು ಇತ್ಯಾದಿ ಉಡುಗೊರೆ ನೀಡುತ್ತಾರೆ. ಮೊದಲೆಲ್ಲಾ ಮಗುವಿಗೆ ಹಿರಿಯರ ಅಥವಾ ಮನೆ ಪೀರ್‌ಗಳ ಹೆಸರನ್ನು ಇಡುತ್ತಿದ್ದರು. ಆದರೆ ಈಗ ಆಧುನಿಕ ಹೆಸರುಗಳನ್ನು ಇಡುತ್ತಿರುವುದು ಕಾಣಬಹುದಾಗಿದೆ.

**ಬಾಲ್ ಕಾಟ್‌ತೆ (ಕೂದಲು ತೆಗೆಯುವ ಶಾಸ್ತ್ರ)**

ಕೆಲವರು ಮಗು ಹುಟ್ಟಿದ ೪೦ನೇ ದಿನಕ್ಕೆ ಕೂದಲು ತೆಗೆಯುವ ಶಾಸ್ತ್ರ ಮಾಡುತ್ತಾರೆ ಇದಕ್ಕೆ **'ಬಾಲ್ ಕಾಟ್‌ತೆ'** ಎಂದು ಕರೆಯುತ್ತಾರೆ. ಮಗುವಿನ ಸೋದರ ಮಾವನು ಶಾಸ್ತ್ರವತ್ತಾಗಿ ಬಲಗಡೆ ಮೂರು ಬಾರಿ, ಎಡಗಡೆ ಎರಡು ಬಾರಿ ಕೂದಲನ್ನು ಕತ್ತರಿಸಿದ ನಂತರ, ಕ್ಷೌರಿಕನನ್ನು ಕರೆಸಿ ಗುಂಡು ಮಾಡಿಸುತ್ತಾರೆ. ಆ ಕೂದಲನ್ನು ಅಳತೆ ಮಾಡಿ ಅಷ್ಟೇ ತೂಕದ ಬೆಳ್ಳಿ ಅಥವಾ ಅದಕ್ಕೆ ಹೊಂದುವಂತೆ ಹಣವನ್ನು ಸೋದರತ್ತೆಗೆ ಅಥವಾ ಬಡವರಿಗೆ ನೀಡುತ್ತಾರೆ. ಕೂದಲು ಕತ್ತರಿಸಿದ ಸೋದರ ಮಾವನಿಗೆ ಬಟ್ಟೆ ಕೊಡುತ್ತಾರೆ. ಗುಂಡು ಮಾಡಿದ ಕ್ಷೌರಿಕನಿಗೆ ಅಕ್ಕಿ, ಬೆಲ್ಲ, ಕೊಬ್ಬರಿ, ಬೇಳೆ, ಸಿಹಿ ಮತ್ತು ಹಣವನ್ನು ನೀಡುತ್ತಾರೆ. ಕೆಲವರು ಈ ಶಾಸ್ತ್ರವನ್ನು ತಮಗೆ ಅನುಕೂಲವಾದಾಗ ಸಹ ಮಾಡುತ್ತಾರೆ.

**ಬಡಿ ಬೆಗಿ/ಶ್ಯಾಣೆ ಮಿಲಿ (ಋತುಮತಿ)**

ಪ್ರಕೃತಿ ಸಹಜವಾಗಿ ಹೆಣ್ಣು ಹುಡುಗಿಯೊಬ್ಬಳು ವಯಸ್ಸಿಗೆ ಬಂದಾಗ ಋತುಚಕ್ರ ಶುರುವಾಗುತ್ತದೆ. ಆ ಸಂದರ್ಭವನ್ನು ದೊಡ್ಡವಳಾದಳು, ಮೈ ನೆರೆದಳು ಹಾಗೂ ಋತುಮತಿಯಾದಳು ಎನ್ನುತ್ತಾರೆ. ಹೆಣ್ಣು ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಪಡೆದುಕೊಳ್ಳುವ ಹೆಣ್ತನದ ಶಾಸ್ತ್ರವೇ ಋತುಮತಿಶಾಸ್ತ್ರ. ಇವರೂ ಸಹ ಮೊದಲು ಹುಡುಗಿ ಋತುಮತಿಯಾದಗ ೫ದಿನ ಪ್ರತ್ಯೇಕ ಸ್ಥಳದಲ್ಲಿ ಇರಲು ಬಿಡುತ್ತಿದ್ದರಂತೆ. ಆದರೆ ಈಗ ಬದಲಾದ ಪರಿಸ್ಥಿತಿಗಳಿಗೆ ತಕ್ಕಂತೆ ಮನೆಯಲ್ಲಿಯೇ ಒಂದು ಸ್ಥಳದಲ್ಲಿ ಕೂರಿಸಲಾಗುತ್ತದೆ. ಏಳು ದಿನಗಳವರೆಗೆ ಋತುಮತಿಯಾದ ಹುಡುಗಿ ಯಾವುದೇ ರೀತಿಯ ಧಾರ್ಮಿಕ ಕಾರ್ಯಗಳನ್ನು ಮಾಡುವಂತಿಲ್ಲ. ಈ ಸಮಯದಲ್ಲಿ ಹುಡುಗಿಗೆ ಪೌಷ್ಠಿಕ ಆಹಾರವನ್ನು ನೀಡುತ್ತಾರೆ. ಹಣ್ಣು-ಹಂಪಲು, ಒಣದ್ರಾಕ್ಷಿ, ಬಾದಾಮಿ, ಖರ್ಜೂರ, ಕೊಬ್ಬರಿ, ಬೆಲ್ಲ ಹೆಚ್ಚಾಗಿ ನೀಡುತ್ತಾರೆ. ಹತ್ತಿರದ ಸಂಬಂಧಿಕರು ಅಡುಗೆ ಮಾಡಿಕೊಂಡು ಬಂದು ಹುಡುಗಿಗೆ ತಿನ್ನಿಸಿ ಬಟ್ಟೆ, ಹಣ ನೀಡಿ ಹೋಗುತ್ತಾರೆ. ಏಳು ದಿನಗಳ ನಂತರ ಮುತ್ತೈದೆಯರನ್ನು ಕರೆಸಿ ಅರಿಶಿಣ ಹಚ್ಚಿ, ಸ್ನಾನ ಮಾಡಿಸುತ್ತಾರೆ. ಅಂದು ಅವಳನ್ನು ಹೂ ಮುಡಿಸಿ ಅಲಂಕರಿಸಿ ಶಾಸ್ತ್ರ ಮಾಡುತ್ತಾರೆ. ಡೋಲಕ್ ಬಾರಿಸಿ ಹಾಡುಗಳನ್ನು ಹಾಡುತ್ತಾರೆ. ಇದಕ್ಕೆ ಬಂದ ಸಂಬಂಧಿಕರು ಹುಡುಗಿಗೆ ಮುಯ್ಯಿ ಕೊಡುತ್ತಾರೆ. ನಂತರ ಕೆಲವರು ಹುಡುಗಿಗೆ ದರ್ಗಾಗಳಿಗೆ ಕರೆದುಕೊಂಡು ಹೋಗುತ್ತಾರೆ. ಆದರೆ ಈ ಆಧುನಿಕ

ಕಾಲದಲ್ಲಿ ಯಾರೂ ಸಹ ಈ ಶಾಸ್ತ್ರವನ್ನು ಮೊಡಲು ಬಯಸುವುದಿಲ್ಲ. ಈಗ ಹುಡುಗಿ ಋತುಮತಿಯಾದರೆ ಕುಟುಂಬದವರು ಹೊರಗೆ ಯಾರಿಗೂ ತಿಳಿಸುವ ಗೋಜಿಗೆ ಹೋಗುವುದಿಲ್ಲ.

**ಖತ್ನಾ (ಸುನ್ತಿಶಾಸ್ತ್ರ)**

ಗಂಡು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ಸುನ್ನಿಶಾಸ್ತ್ರ ಮಾಡುತ್ತಾರೆ. ಇದನ್ನು 'ಖತ್ನಾ' ಎಂದು ಕರೆಯುತ್ತಾರೆ. ಇದೊಂದು ಧಾರ್ಮಿಕವಾದ ಶಾಸ್ತ್ರವಾಗಿದೆ. ಇಸ್ಲಾಂ ಧರ್ಮದಲ್ಲಿ ಇದನ್ನು ಕಡ್ಡಾಯವಾಗಿ ಮಾಡಿಸಲೇಬೇಕು. ಮೊದಲು ಇದನ್ನು ಧಾರ್ಮಿಕ ವ್ಯಕ್ತಿ ಮಾಡುತ್ತಿದ್ದರು. ಅವರಿಗೆ ಅವರ ಶಕ್ತ್ಯನುಸಾರ ಹಣ ನೀಡುತ್ತಾರೆ. ಆದರೆ ಈಗ ಇದನ್ನು ವೈದ್ಯರ ಬಳಿ ಮಾಡಿಸುತ್ತಾರೆ. ಇದನ್ನು ಮಾಡಿಸಿದ ೨೧ ದಿನಗಳವರೆಗೆ ಮಗುವನ್ನು ಹೊರಗೆ ಕಳುಹಿಸುವುದಿಲ್ಲ. ಮಗುವನ್ನು ತುಂಬಾ ಜಾಗ್ರತೆಯಿಂದ ನೋಡಿಕೊಳ್ಳುತ್ತಾರೆ. ಈ ೨೧ ದಿನಗಳವರೆಗೆ ಮಗುವಿಗೆ ಪೌಷ್ಠಿಕ ಆಹಾರವನ್ನು ನೀಡುತ್ತಾರೆ ಹಣ್ಣು-ಹಂಪಲು, ಒಣದ್ರಾಕ್ಷಿ, ಬಾದಾಮಿ, ಖರ್ಜೂರ, ಕೊಬ್ಬರಿ, ಬೆಲ್ಲ ಹೆಚ್ಚಾಗಿ ನೀಡುತ್ತಾರೆ. ಹತ್ತಿರದ ಸಂಬಂಧಿಕರು ಮಗುವಿಗೆ ಅಡುಗೆ ಮಾಡಿಕೊಂಡು ಬಂದು ಮಗುವಿಗೆ ತಿನ್ನಿಸಿ ಬಟ್ಟೆ, ಹಣ ನೀಡಿ ಹೋಗುತ್ತಾರೆ. ೨೧ನೇ ದಿನ ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ಹಾಕಿ ಶಾಸ್ತ್ರ ಮಾಡುತ್ತಾರೆ. ಅಂದು ಎಲ್ಲರಿಗೂ ಊಟವನ್ನು ಹಾಕಿಸುತ್ತಾರೆ.

**ಶರ್‌ಗತ್ ಆಚರಣೆ**

ಹುಡುಗ ಮದುವೆ ವಯಸ್ಸಿಗೆ ಬಂದ ಎಂದು ಈ ಆಚರಣೆ ಮಾಡುತ್ತಾರೆ. ಈ ಆಚರಣೆ ಮಾಡದೇ ಹುಡುಗನಿಗೆ ಮದುವೆ ಮಾಡುವುದಿಲ್ಲ. ಮದುವೆಯಲ್ಲಿ ಯಾವ ಯಾವ ಶಾಸ್ತ್ರಗಳನ್ನು ಮಾಡುತ್ತಾರೋ, ಆ ಎಲ್ಲಾ ಶಾಸ್ತ್ರಗಳನ್ನು ಮಾಡುತ್ತಾರೆ. ಇದು ಮದುವೆಯ ರೀತಿಯಲ್ಲಿಯೆ ನಡೆಯುತ್ತದೆ. ಆದರೆ ಮದುಮಗಳು ಮಾತ್ರ ಇರುವುದಿಲ್ಲ. ದೊಡ್ಡ ಮಕ್ಕಳ ಮದುವೆ ವೇಳೆ ಚಿಕ್ಕ ಹುಡುಗರಿದ್ದರೆ, ಆ ಮದುವೆಯಲ್ಲಿ ಅವರ ಶರ್‌ಗತ್ ಮಾಡುತ್ತಾರೆ. ಒಂದು ವೇಳೆ ಮದುವೆ ವಯಸ್ಸಿನವರು ಯಾರೂ ಇಲ್ಲದಿದ್ದರೆ, ಮಕ್ಕಳ ಶರ್‌ಗತ್ ಅನ್ನು ಪ್ರತ್ಯೇಕವಾಗಿಯೇ ತುಂಬಾ ವಿಜೃಂಭಣೆಯಿಂದ ಮಾಡುತ್ತಾರೆ. ಒಟ್ಟಿನಲ್ಲಿ ಇದನ್ನು ಈಗಲೂ ಸಹ ಕಡ್ಡಾಯವಾಗಿ ಮಾಡುತ್ತಾರೆ.

**ಮೌತ್ (ಮರಣ)**

ಮರಣ ಎಂಬುದು ಮನುಷ್ಯನ ಬದುಕಿನ ಕೊನೆಯ ಘಟ್ಟವಾಗಿದೆ. ಇದು ಪ್ರತಿಯೊಬ್ಬರಿಗೂ ಸಂಭವಿಸುತ್ತದೆ. ಹುಟ್ಟು ಅನಿಶ್ಚಿತ ಸಾವು ನಿಶ್ಚಿತ ಎಂಬ ಗಾದೆಯೇ ಇದೆ. ಹುಟ್ಟಿದ ಪ್ರತಿಯೊಬ್ಬ ಮನುಷ್ಯ ಸಾಯಲೇಬೇಕು. ಮಾನವನ ಹುಟ್ಟಿನಿಂದ ಹಲವಾರು ಹಂತಗಳನ್ನು ದಾಟಿಕೊಂಡು ಕರ್ಮಾದಿಗಳು ಮುಗಿದ ನಂತರ ಬರುವುದು ಮರಣ. ಮರಣ ಸಂದರ್ಭದಲ್ಲಿ ಪ್ರತಿಯೊಂದು

ಸಮುದಾಯದವರು ಸಂಪ್ರದಾಯ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿರುವರು. ಮರಣ ಒಂದು ಪ್ರಕೃತಿ ದತ್ತವಾದ ಕ್ರಿಯೆ. ಮಾನವ ಬದುಕಿರುವಾಗ ಸಮಾಜದ ಒಂದು ಅಂಗವಾಗಿ ರುತ್ತಾನೆ. ಅಲ್ಲಿ ಸಾಮಾಜಿಕ ಸಂಬಂಧಗಳನ್ನು ಹೊಂದಿ, ಏರಿಳಿತಗಳನ್ನು ಅನುಭವಿಸುತ್ತಾನೆ. ವ್ಯಕ್ತಿ ಸತ್ತರೂ ಅವು ಹಾಗೆಯೇ ಜೀವಂತಿಕೆಯ ತಳೆಯುಳಿಕೆಗಳಾಗಿ ಉಳಿದುಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಮರಣಕ್ಕೆ ಸಂಬಂಧಿಸಿದಂತೆ ಮಾಡಲಾಗುವ ವಿಧಿವಿಧಾನಗಳನ್ನೇ ಮರಣ ಸಂಸ್ಕಾರ ಎಂದು ಕರೆಯಲಾಗುವುದು.

ಚಪ್ಪರ್‌ಬಂದರು ಇಸ್ಲಾಂ ಧರ್ಮವನ್ನು ಅನುಸರಿಸಿರುವುದರಿಂದ ಇವರಲ್ಲಿ ಶವವನ್ನು ಹೂಳುವ ಪದ್ಧತಿ ಇದೆ. ಸಾವಿನ ಸುದ್ದಿ ಕೇಳಿದ ನಂತರ ಸ್ನೇಹಿತರು, ಸಂಬಂಧಿಕರು, ಸಮಾಜದವರು ಬಂದು ಸೇರುತ್ತಾರೆ. ಮೃತ ದೇಹವನ್ನು ಮನೆಯಲ್ಲಿಯೇ ಪೂರ್ವಾಭಿಮುಖವಾಗಿ ಮಲಗಿಸಿ, ಬಿಳಿ ಬಟ್ಟೆಯನ್ನು ಹೊದಿಸುತ್ತಾರೆ. ಮಸೀದಿಯ 'ಖಾಜಿ' ಒಂದು ಸಾವಿನ ಸಂಸ್ಕಾರಗಳನ್ನು ಪೂರೈಸುತ್ತಾರೆ. ಶವವನ್ನು ಹೊರಗೆ ತಂದು, ಒಂದು ಹಲಗೆಯ ಮೇಲೆ ಮಲಗಿಸಿ, ಪರದೆಯನ್ನು ಕಟ್ಟಿ ಉಗುರು ಬೆಚ್ಚಗಿನ ನೀರಿನಲ್ಲಿ ಸ್ನಾನ ಮಾಡಿಸುತ್ತಾರೆ. ನಂತರ ಮೃತ ದೇಹದ ಕಣ್ಣಿಗೆ 'ಸುರ್ಮಾ' ಮತ್ತು ದೇಹಕ್ಕೆ "ಅತ್ತರ/ಸುಗಂಧದ್ರವ್ಯ" ಹಚ್ಚುತ್ತಾರೆ. ಮೃತ ವ್ಯಕ್ತಿ ಗಂಡಾದರೆ ಹಸಿರು ಬಣ್ಣದ ೩ ತುಂಡು ಬಟ್ಟೆಯಿಂದ, ಹೆಣ್ಣಾದರೆ ಕೆಂಪು ಬಣ್ಣದ ೫ ತುಂಡು ಬಟ್ಟೆಯಿಂದ ಶರೀರವನ್ನು ಮುಚ್ಚಲಾಗುತ್ತದೆ. ನಂತರ ಶವವನ್ನು "ಜನಾಝ"(ಶವ ಪೆಟ್ಟಿಗೆ)ದಲ್ಲಿ ಮಲಗಿಸುತ್ತಾರೆ. ನಂತರ ಎಲ್ಲರೂ ಅಂತಿಮ ದರ್ಶನ ಪಡೆದ ನಂತರ, ಜನಾಝವನ್ನು ಗಂಡಸರು ಹೊತ್ತಿಕೊಂಡು ಮಸೀದಿಗೆ ಹೋಗುತ್ತಾರೆ. ಅಲ್ಲಿ ಮೃತ ವ್ಯಕ್ತಿಯ ಸಲುವಾಗಿ ವಿಶೇಷ ಪ್ರಾರ್ಥನೆ ಮಾಡಿ, ಅಲ್ಲಿಂದ ಖಬರಸ್ಥಾನ್(ಸ್ಮಶಾನ)ಗೆ ತೆಗೆದುಕೊಂಡು ಹೋಗುತ್ತಾರೆ. ದಾರಿಯುದ್ದಕ್ಕೂ ಪ್ರತಿಯೊಬ್ಬರೂ ಶವಕ್ಕೆ ಹೆಗಲು ನೀಡುತ್ತಾರೆ. ಹೆಣ್ಣಿಗೆ ಸ್ಮಶಾನಕ್ಕೆ ಹೋಗಲು ಅವಕಾಶವಿಲ್ಲ.

ಸ್ಮಶಾನದಲ್ಲಿ ಮೊದಲೇ ೨ ೧/೨ ಅಡಿ ಅಗಲ, ೬ ೧/೨ ಅಡಿ ಉದ್ದ ಮತ್ತು ೫ ಅಡಿ ಆಳ ಇರುವ ಗುಂಡಿಯನ್ನು ತೆಗೆಸಿರುತ್ತಾರೆ. ಗುಂಡಿನ ಕೆಳ ಭಾಗದಲ್ಲಿ ಒಂದು ಬಂಡೆಯನ್ನು ಗುಂಡಿ ಅಕ್ಕ ಪಕ್ಕದಲ್ಲಿ ಎರಡು ಬಂಡೆಗಳನ್ನು ನಿಲ್ಲಿಸಿರುತ್ತಾರೆ, ಗುಂಡಿಯೊಳಗೆ ಚಾಪೆಯನ್ನು ಹಾಕಿ ಅದರ ಮೇಲೆ ಶವವನ್ನು ಪಶ್ಚಿಮಕ್ಕೆ ಮುಖ ಮಾಡಿ ಮಲಗಿಸುತ್ತಾರೆ, ಪಶ್ಚಿಮಕ್ಕೆ ಮುಖ ಮಾಡುವ ಉದ್ದೇಶವೆಂದರೆ ಮಕ್ಕಾದಲ್ಲಿ 'ಖಿಬ್ಲಾ' ಪಶ್ಚಿಮ ದಿಕ್ಕಿನಲ್ಲಿದೆ. ಹಾಗಾಗಿ ಮುಸ್ಲಿಮರು ನಮಾಝ್ ಕೂಡ ಪಶ್ಚಿಮ ದಿಕ್ಕಿಗೆ ನಿಂತು ಮಾಡುತ್ತಾರೆ. ಶವವನ್ನು ಮಲಗಿಸಿದ ಮೇಲೆ ಸ್ಮಶಾನಕ್ಕೆ ಹೋದ ಎಲ್ಲರು ಸೇರಿ ಮಣ್ಣು ಹಾಕಿ ಗುಂಡಿಯನ್ನು ಮುಚ್ಚುತ್ತಾರೆ, ನಂತರ ತಲೆಯ ಕಡೆ ಹಾಗು ಕಾಲಿನಕಡೆ ಚಿಕ್ಕ ಕಲ್ಲಿನ ತುಂಡನ್ನು ಇಡುತ್ತಾರೆ. ಸಮಾಧಿಯ ಮೇಲೆ

ಕರ್ಪೂರದ ಪುಡಿ ಮತ್ತು ಅತ್ತರ್/ಸುಗಂಧ ದ್ರವ್ಯವನ್ನು ಹಾಕುತ್ತಾರೆ. ನಂತರ ಎಲ್ಲಾರು ಸೇರಿ ಮೃತರ ಹೆಸರಿನಲ್ಲಿ ದೇವರಲ್ಲಿ 'ದುವಾ' ಮಾಡುತ್ತಾರೆ, ಅಂದರೆ ಸತ್ತ ವ್ಯಕ್ತಿಯ ಎಲ್ಲ ಪಾಪಗಳನ್ನು ಮನ್ನಿಸಿ ಅವನಿಗೆ ಸ್ವರ್ಗದಲ್ಲಿ ಸ್ಥಾನವನ್ನು ನೀಡು ದೇವರೆ ಎಂದು ಪ್ರಾರ್ಥಿಸುತ್ತಾರೆ. ಇಲ್ಲಿಗೆ ಸಮಾಧಿ ಮಾಡುವ ಸಂಸ್ಕಾರ ಮುಗಿದಂತೆ. ಈ ದಿನ ಮೃತರ ಮನೆಯಲ್ಲಿ ಅಡುಗೆ ಮಾಡಲಾಗುವುದಿಲ್ಲ ಸಂಬಂಧಿಕರು, ನೆಂಟರು ಇವರಿಗೆ ಅಡುಗೆ ತಂದುಕೊಡುತ್ತಾರೆ, ನಂತರ ಇವರು ಮೂರು ದಿನದ ಕಾರ್ಯ ಹತ್ತು ದಿನದ ಕಾರ್ಯ ಮತ್ತು ನಾಲ್ವತ್ತು ದಿನದ ಕಾರ್ಯ ಮತ್ತು ವರ್ಷದೊಳಗಿನ ಕಾರ್ಯ ಮಾಡುತ್ತಾರೆ.

ಮೂರು ದಿನದ ಕಾರ್ಯಕ್ಕೆ ಮನೆಯವರು ಮತ್ತು ಸಂಬಂಧಿಕರು ಬೆಳಿಗ್ಗೆಯ 'ನಮಾಜ್' ಮುಗಿಸಿ ಸ್ಮಶಾನಕ್ಕೆ ಹೋಗಿ ಅವರ ಸಮಾಧಿಯ ಮುಂದೆ ಕೂತು ಅವರಿಗಾಗಿ ದೇವರಲ್ಲಿ ಪ್ರಾರ್ಥನೆ ಮಾಡುತ್ತಾರೆ. ನಂತರ ಶವ ಸಂಸ್ಕಾರದ ದಿನ ಮೃತರ ಕುಟುಂಬಕ್ಕೆ ಅಡುಗೆ ನೀಡಿದವರ ಪಾತ್ರೆಗಳಲ್ಲಿ ಮಂಡಕ್ಕಿ, ಖರ್ಜೂರ ಹಾಕಿ ಹಿಂದಿರುಗಿಸಲಾಗುತ್ತದೆ. ಸ್ಮಶಾನಕ್ಕೆ ಹೋಗಿ ಬರುವ ಈ ಕಾರ್ಯಕ್ಕೆ 'ಝಿಯಾರತ್' ಎಂದು ಕರೆಯುತ್ತಾರೆ.

ಹತ್ತು ದಿನಗಳ ಕಾರ್ಯಕ್ಕೆ 'ದಸ್ವಾಂ' ಎಂದು ಕರೆಯುತ್ತಾರೆ. ಅಂದು ಫಾತೇಹ ಮಾಡಿ ಹತ್ತಿರದ ಬಂಧುಗಳಿಗೆ ಮಾಂಸದೂಟವನ್ನು ಮಾಡಿಸುತ್ತಾರೆ. ನಲವತ್ತು ದಿನಗಳ ಕಾರ್ಯಕ್ಕೆ, 'ಚಾಲಿಸ್ವಾಂ' ಎಂದು ಕರೆಯುತ್ತಾರೆ. ಇಂದು ಸಹ ಮಾಂಸದೂಟ ಇರುತ್ತದೆ ವರ್ಷದೊಳಗಿನ ಕಾರ್ಯಕ್ಕೆ "ಬರ್ಸಿ" ಎಂದು ಕರೆಯುತ್ತಾರೆ. ಅಂದು ಮೃತರ ಹೆಸರಲ್ಲಿ ಫಾತೇಹ ಮಾಡಿ, ಬಂಧುಗಳಿಗೆ, ಸ್ನೇಹಿತರಿಗೆ ಎಲ್ಲರಿಗೂ ಕುರಿ ಕೊಯ್ದು ಮಾಂಸದೂಟವನ್ನು ಮಾಡಿಸುತ್ತಾರೆ. ಈ ಕಾರ್ಯದೊಂದಿಗೆ ಮರಣಕ್ಕೆ ಸಂಬಂಧಿಸಿ ಎಲ್ಲಾ ಸಂಸ್ಕಾರಗಳು ಮುಗಿದಂತೆ. ವ್ಯಕ್ತಿ ಸತ್ತ ೧ ವರ್ಷದೊಳಗೆ ಮನೆಯಲ್ಲಿ ಶುಭಕಾರ್ಯವನ್ನು ಮಾಡಬೇಕು. ಇಲ್ಲದಿದ್ದರೆ ೩ ವರ್ಷದವರೆಗೆ ಯಾವುದೇ ಕಾರ್ಯ ಮಾಡುವಂತಿಲ್ಲ.

**ಆಹಾರ ಪದ್ಧತಿ**

ಇವರು ಸಸ್ಯಹಾರ ಮತ್ತು ಮಾಂಸಹಾರ ಎರಡನ್ನೂ ಸೇವಿಸುತ್ತಾರೆ. ಉತ್ತರ ಕರ್ನಾಟಕದ ಜನರಂತೆಯೇ ಇವರು ಸಹ ತಮ್ಮ ಮುಖ್ಯ ಆಹಾರವಾಗಿ ಜೋಳವನ್ನು ಬಳಸುತ್ತಾರೆ. ಮೊದಲು ಅಕ್ಕಿಯನ್ನು ಸಾಂದರ್ಭಿಕವಾಗಿ ಬಳಸುತ್ತಿದ್ದರು. ಈಗ ದಿನಲೂ ಬಳಸುತ್ತಾರೆ. ತೊಗರಿ ಬೇಳೆ, ಹೆಸರು ಬೇಳೆ ಇತ್ಯಾದಿ ಧಾನ್ಯಗಳನ್ನು ಬಳಸುತ್ತಾರೆ. ಎಲ್ಲಾ ರೀತಿಯ ತರಕಾರಿಗಳನ್ನು ಸಹ ಬಳಸುತ್ತಾರೆ. ಕುರಿಮಾಂಸ, ಕೋಳಿ ಮಾಂಸ, ದನದ ಮಾಂಸ ಮತ್ತು ಮೀನು ಮಾಂಸಹಾರವಾಗಿ ಬಳಸುತ್ತಾರೆ. ಹಂದಿ ಮಾಂಸ ಇವರಲ್ಲಿ ನಿಷಿದ್ಧವಾಗಿದೆ. ಹಂದಿ ಇವರಿಗೆ ಅಪವಿತ್ರವಾದದ್ದು. ಹಂದಿಮಾಂಸವನ್ನು ಹೊರತು ಪಡಿಸಿ ಈಗ ಎಲ್ಲಾ ರೀತಿಯ

ಆಹಾರವನ್ನು, ಹಣ್ಣು ಹಂಪಲುಗಳನ್ನು, ತರಕಾರಿಗಳನ್ನು, ಸಿಹಿ ತಿನಿಸುಗಳನ್ನು ನಗರ-ಗ್ರಾಮೀಣ ಎರಡೂ ಪ್ರದೇಶಗಳಲ್ಲೂ ಬಳಸುತ್ತಾರೆ. ಇವರಿಗೆ ಬಿರಿಯಾನಿ ಅತ್ಯಂತ ಪ್ರಿಯವಾದುದು. ಇಸ್ಲಾಂ ಧರ್ಮದಲ್ಲಿ ಮದ್ಯಪಾನ ನಿಷೇಧವಿದೆ. ಆದರೂ ಇವರಲ್ಲಿ ಕೆಲವು ಜನ ಮದ್ಯಪಾನ ಮಾಡುತ್ತಾರೆ. ಮದ್ಯಪಾನ ಮಾಡುವುದು ತಂಬಾಕು ಸೇವನೆ, ಬೀಡಿ ಮತ್ತು ಸಿಗರೇಟ್ ಸೇವನೆ ಮಾಡುವುದು ನಗರ ಮತ್ತು ಗ್ರಾಮೀಣ ಎರಡೂ ಪ್ರದೇಶಗಳಲ್ಲಿ ಕಂಡುಬರುತ್ತದೆ.

**ಉಡುಗೆ-ತೊಡುಗೆ**

ಚಪ್ಪರ್‌ಬಂದ್ ಸಮುದಾಯದ ಉಡುಗೆಯ ಬಗ್ಗೆ ಹೇಳುವುದಾದರೆ, ಗ್ರಾಮೀಣ ಪ್ರದೇಶದ ಚಪ್ಪರ್‌ಬಂದರಿಗೂ, ನಗರ ಪ್ರದೇಶದ ಚಪ್ಪರ್‌ಬಂದರಿಗೂ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಚಪ್ಪರ್‌ಬಂದರು ಹಿಂದೂಗಳ ಹಾಗೆಯೇ ಉಡುಗೆ ತೊಡುತ್ತಾರೆ. ಗಂಡಸರು ಅಂಗಿ, ಧೋತಿ ಮತ್ತು ಪೇಟಾ ತೊಡುತ್ತಾರೆ. ಹೆಂಗಸರು ಸೀರೆ ಮತ್ತು ಕುಪ್ಪಸವನ್ನು ಉಡುತ್ತಾರೆ. ಜೊತೆಗೆ ಕಿವಿಗೆ, ಮೂಗಿಗೆ, ಕುತ್ತಿಗೆ ಆಭರಣಗಳನ್ನು, ಕೈಗಳಿಗೆ ಬಳೆಗಳನ್ನು ತೊಡುತ್ತಾರೆ. ಮೊದಲು ಮಹಿಳೆಯರು ಅಚ್ಚೆಗಳನ್ನು ಸಹ ಹಾಕಿಸಿ ಕೊಳ್ಳೊತ್ತಿದ್ದರು. ಆದರೆ ಈಗ ಇದು ಕಂಡುಬರುವುದಿಲ್ಲ.

ಪೈಜಾಮ, ಅಂಗಿ ಮತ್ತು ದೋತಿ ಇವು ಸಾಮಾನ್ಯವಾಗಿ ಚಪ್ಪರ್‌ಬಂದ್ ಗಂಡಸರು ಬಳಸುವ ಉಡುಪುಗಳು, ನಗರಗಳಲ್ಲಿನ ಇವರು ಇಸ್ಲಾಂ ಧರ್ಮಕ್ಕೆ ತಕ್ಕಂತೆ ಉಡುಪು ಬಳಸುತ್ತಾರೆ. ಈ ಪ್ರಸ್ತುತದಲ್ಲಿ ನಗರ-ಗ್ರಾಮೀಣ ಎರಡೂ ಪ್ರದೇಶದಲ್ಲಿನ ಚಪ್ಪರ್‌ಬಂದರು ಆಧುನಿಕ ಉಡುಪುಗಳನ್ನು ಬಳಸುತ್ತಿರುವುದು ಕಂಡುಬರುತ್ತಿದೆ. ಜೀನ್ಸ್, ಟೀಶರ್ಟ್, ಅಂಗಿಯನ್ನು ಗಂಡಸರು ಬಳಸಿದರೆ ಹೆಂಗಸರು ಪಂಜಾಬಿ ಡ್ರೆಸ್, ಕುರ್ತ, ಪೈಜಾಮ, ಲೆಹಂಗಾ ಇತ್ಯಾದಿ ಆಧುನಿಕ ಉಡುಪುಗಳನ್ನು, ಆಧುನಿಕ ಆಭರಣಗಳನ್ನು ಬಳಸುತ್ತಿರುವುದು ಕಂಡುಬರುತ್ತಿದೆ. ಈಗ ಇವರಲ್ಲಿ ನಾವು **ಬುರ್ಖಾ/ಪರದ** ಪದ್ಧತಿಯನ್ನು ಸಹ ಕಾಣಬಹುದಾಗಿದೆ. ಮೊದಲು ಇವರಲ್ಲಿ **'ಬುರ್ಖಾ'** ಪದ್ಧತಿ ಇರಲಿಲ್ಲ. ಆದರೆ ಈ ಸಮುದಾಯ ಇಸ್ಲಾಂ ಧರ್ಮದ ಆಚರಣೆಗಳನ್ನು ಅನುಸರಿಸುತ್ತಿರುವುದರಿಂದ ಇವರು ಬುರ್ಖಾ ಪದ್ಧತಿಯನ್ನು ಅನಸರಿಸುತ್ತಿದ್ದಾರೆ.

**ನ್ಯಾಯ ಪದ್ಧತಿ**

ಪ್ರತಿಯೊಂದು ಬುಡಕಟ್ಟು ಸಹ ತನ್ನದೇ ಆದ ಪಂಚಾಯಿತಿ ವ್ಯವಸ್ಥೆಯನ್ನು ಹೊಂದಿರುತ್ತದೆ. ಆ ಪಂಚಾಯಿತಿ ಮೂಲಕವೇ ತನ್ನ ಸಮುದಾಯದ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತದೆ. ತಮ್ಮ ಸಮುದಾಯದ ಹಿರಿಯ ಅದರ ಮುಖ್ಯಸ್ಥನಾಗಿರುತ್ತಾನೆ. ಇತರೆ ಕೆಲವರು ಅದರ ಸದಸ್ಯರಾಗಿರುತ್ತಾರೆ. ಇವರು ಎಲ್ಲಾ ರೀತಿಯ ವ್ಯಾಜ್ಯಗಳನ್ನು, ಸಮಸ್ಯೆಗಳನ್ನು ಕೇಳಿ, ಕೂಲಂಕುಶ ವಾಗಿ ವಿಚಾರಣೆ ಮಾಡಿ ತೀರ್ಪನ್ನು ನೀಡುತ್ತಾರೆ. ಇವರ ತೀರ್ಪಿಗೆ ಎಲ್ಲರೂ ಬದ್ಧರಾಗಿರುತ್ತಾರೆ.

ಹಾಗೆಯೇ ಇವರು ಮೊದಲು "ಚಪ್ಪರ್‌ಬಂದ್ ಜಮಾತ್" ಎಂಬ ಅವರದೇ ಆದ ಪಂಚಾಯಿತಿ ವ್ಯವಸ್ಥೆಯನ್ನು ಹೊಂದಿದ್ದರು. ಇದರಲ್ಲಿ ೫ ಜನ ಸಮುದಾಯದ ಹಿರಿಯರು ಸದಸ್ಯರಾಗಿರುತ್ತಾರೆ. ಯಾವುದೇ ರೀತಿಯ ಸಮಸ್ಯೆಗಳಾಗಲಿ, ತಕರಾರುಗಳಾಗಲಿ ಸಮುದಾಯದವರು ಇಲ್ಲಿಗೇ ತರುತ್ತಿದ್ದರು. ಬಡೇಭಾಯಿ ಗುಂಪಿನ ಕುಟುಂಬಗಳು ಹೆಚ್ಚಾಗಿರುವ ಪ್ರದೇಶದಲ್ಲಿ ಬಡೇಭಾಯಿ ಗುಂಪಿನ ಸದಸ್ಯರು ಪಂಚಾಯಿತಿಯಲ್ಲಿ ಹೆಚ್ಚಿರುತ್ತಿದ್ದರು. 'ಛೋಟೆಭಾಯಿ' ಗುಂಪಿನ ಕುಟುಂಬಗಳು ಹೆಚ್ಚಾಗಿರುವ ಪ್ರದೇಶದಲ್ಲಿ ಛೋಟೆಭಾಯಿ ಗುಂಪಿನ ಸದಸ್ಯರು ಪಂಚಾಯಿತಿಯಲ್ಲಿ ಹೆಚ್ಚಿರುತ್ತಿದ್ದರು. ತನ್ನ ಹತ್ತಿರ ಬಂದ ಎಲ್ಲಾ ರೀತಿಯ ಸಮಸ್ಯೆಗಳನ್ನು ಈ 'ಜಮಾತ್' ಬಗೆಹರಿಸುತ್ತಿತ್ತು. ಈ 'ಚಪ್ಪರ್‌ಬಂದ್ ಜಮಾತ್' ಸಾಮಾನ್ಯವಾಗಿ ಮಸೀದಿಯಲ್ಲಿ ಸೇರುತ್ತಿತ್ತು.

ಇವರು ಹೇಳುವಂತೆ ಹಿಂದಿನ ಕಾಲದಲ್ಲಿ 'ಜಮಾತ್' ಗೆ ಪರ್ಯಾಯವಾಗಿ 'ಪಂಚಾಯತ್' ಎಂಬ ಸಮೀತಿ ಇರುತ್ತಿತ್ತು. ಈ 'ಪಂಚಾಯತ್' ನಲ್ಲಿ ತುಂಬಾ ಗಂಭೀರವಾದ ಸಮಸ್ಯೆಗಳ ಬಗ್ಗೆ ಪರಿಶೀಲಿಸುತ್ತಿದ್ದರು. ಇವರು ಇಂತಹ ಎರಡು 'ಪಂಚಾಯತ್'ಗಳನ್ನು ಬಿಜಾಪುರ ಜಿಲ್ಲೆಯಲ್ಲಿ ಸ್ಥಾಪಿಸಿದ್ದರು. ಒಂದು ಮುದ್ದೇಬಿಹಾಳ ತಾಲ್ಲೂಕಿನ ವಡ್ವಡ್‌ಗಿ ಹಳ್ಳಿಯಲ್ಲಿ, ಮತ್ತೊಂದು ಬಸವನ ಬಾಗೇವಾಡಿ ತಾಲ್ಲೂಕಿನ ಹಳಯಾಳ ಹಳ್ಳಿಯಲ್ಲಿ ಸ್ಥಾಪಿಸಿದ್ದರು. ಈ ಪಂಚಾಯಿತ್‌ಗಳನ್ನು ಕಟ್ಟಿಮನಿ ಎಂದು ಕರೆಯುತ್ತಿದ್ದರು. ಛೋಟೆಭಾಯಿ ಗುಂಪಿನ ಎಲ್ಲಾ ಸಮಸ್ಯೆಗಳನ್ನು ವಡ್ವಡ್‌ಗಿಯ ಕಟ್ಟಿಮನಿಯಲ್ಲಿ, ಬಡೇಭಾಯಿ ಗುಂಪಿನ ಎಲ್ಲಾ ಸಮಸ್ಯೆಗಳನ್ನು ಹಳಯಾಳ ಕಟ್ಟಿಮನಿಯಲ್ಲಿ ಪರಿಶೀಲಿಸಲಾಗುತ್ತಿತ್ತು. ವಿವಿಧ ಹಳ್ಳಿಗಳ 'ಜಮಾತ್'ನ ಆಯ್ದ ಮುಖ್ಯಸ್ಥರು ಈ ಕಟ್ಟಿಮನಿಯ ಸದಸ್ಯರಾಗಿರುತ್ತಿದ್ದರು. ಸಮುದಾಯದ ಅನುಭವಸ್ಥ ಹಿರಿಯ ವ್ಯಕ್ತಿ ಈ ಕಟ್ಟಿಮನಿಯ ಮುಖಂಡರಾಗಿರುತ್ತಿದ್ದರು. ಆಸ್ತಿಯ ಕಲಹಗಳು, ವಯಸ್ಕರ ಸಮಸ್ಯೆಗಳು, ವಿವಾಹ ವಿಚ್ಛೇದನಕ್ಕೆ ಸಂಬಂಧಿದ ಇತ್ಯಾದಿ ಸಮಸ್ಯೆಗಳನ್ನು ಇಲ್ಲಿ ಪರಿಶೀಲಿಸಲಾಗುತ್ತಿತ್ತು.

ಆದರೆ ಇತ್ತೀಚಿನ ದಿನಗಳಲ್ಲಿ ಈ ಕಟ್ಟಿಮನಿಗಳು ಕಣ್ಮರೆಯಾಗಿವೆ. ಕೇವಲ ಚಪ್ಪರ್‌ಬಂದ್ ಜಮಾತ್ ಮಾತ್ರ ಇದೆ. ಇದು ಪ್ರತಿಯೊಂದು ಸೆಟ್ಲ್‌ಮೆಂಟ್‌ನಲ್ಲೂ ಕಂಡುಬರುತ್ತವೆ. ಯಾವುದೇ ರೀತಿಯ ಸಮಸ್ಯೆಗಳು ಬಂದಾಗ ಇಸ್ಲಾಂ ಷರಿಯತ್‌ನ ಮೂಲಕ ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇಲ್ಲಿ ಸಾಧ್ಯವಾಗದೇ ಇದ್ದಾಗ ಕಾನೂನಿನ ಮೊರೆ ಹೋಗುತ್ತಾರೆ. ಇದೊಂದು ಇವರಲ್ಲಿ ಆಗಿರುವ ಸಾಮಾಜಿಕ ಬದಲಾವಣೆ ಎಂದು ಹೇಳಬಹುದು.

### ಧರ್ಮ ಮತ್ತು ಹಬ್ಬಗಳು

ಮಾನವ ಯಾವುದನ್ನು ಪವಿತ್ರ ಭಾವನೆಯಿಂದ ನೋಡುವನೋ ಅದರೊಡನೆ ಇರಿಸಿ ಕೊಳ್ಳುವ ಸಂಬಂಧವೇ ಧರ್ಮವೆಂಬ ಶಬ್ದದ ವಿಶಾಲಾರ್ಥ. ಪವಿತ್ರವೆನಿಸತಕ್ಕದ್ದು ಅತಿಮಾನುಷವೇ ಇರಬೇಕೆಂಬ ನಿಯಮವಿಲ್ಲ. ಮಾನವಾಕೃತಿಯಲ್ಲಿಯೇ ಇರಬೇಕೆಂದೂ ಇಲ್ಲ. ವೈಯಕ್ತಿಕ

ಭಾವನೆ ಮಾತ್ರವೆಂದೂ ಅದರರ್ಥವಲ್ಲ. ದೇವರು ಎಂಬ ಶಬ್ದವನ್ನು ವೈಯಕ್ತಿಕ ಇಲ್ಲವೆ ಅತಿ ಮಾನುಷವೆಂಬ ಅಭಿಪ್ರಾಯದಲ್ಲಿ ಬಳಸುವುದಾಗಿದೆ. ಅಂಥ ದೇವತಾ ಸ್ವರೂಪಗಳೊಡನೆ ಮಾನವನ ಸಂಬಂಧ ಧರ್ಮವೆನಿಸುವಂತೆ, ಅಂಥವುಗಳಲ್ಲದ ಪವಿತ್ರ ವಸ್ತುಗಳೊಂದಿಗೆ ಅವನ ಸಂಬಂಧಕ್ಕೂ ಅನ್ವಯಿಸುವಷ್ಟು ಅದು ವಿಶಾಲವಾಗಿದೆ. ಹಾಗೆಯೇ ಪವಿತ್ರವಾದುದ ರೊಂದಿಗೆ ಸಂಬಂಧವೆಂಬುದು ಕೂಡ ನಾನಾ ಪ್ರಕಾರಗಳಲ್ಲಿರಬಹುದು. ಅವುಗಳಲ್ಲಿ ಅತಿ ಮುಖ್ಯವಾದುದು ಪ್ರಾರ್ಥನೆ. ಆದರೆ ನೀತಿನಿಷ್ಠೆ, ಸದಾಚಾರ, ಸಮ್ಯಗ್ಭಾವಾನೆ ಅಥವಾ ಸದ್ಭಕ್ತಿ, ಧಾರ್ಮಿಕ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಪಾತ್ರ ವಹಿಸುವಿಕೆ, ಧರ್ಮ ಪ್ರವಾದಿಗಳ ಭೋಧನೆಯಲ್ಲಿ, ಧರ್ಮಗ್ರಂಥಗಳಲ್ಲಿ ಶ್ರದ್ಧೆ–ಇವನ್ನೆಲ್ಲ ಧಾರ್ಮಿಕ ಮನೋವೃತ್ತಿ ಒಳಗೊಳ್ಳುತ್ತದೆ. ಧರ್ಮವು ವಿಶ್ವವ್ಯಾಪ್ತಿಯಾದುದು. ಪ್ರತಿಯೊಂದು ಸಮಾಜದಲ್ಲೂ ನಾವು ಧರ್ಮವನ್ನು ಕಾಣುತ್ತೇವೆ. ಧರ್ಮವಿಲ್ಲದ ಸಮಾಜವೇ ಇಲ್ಲ ಎನ್ನಬಹುದು.

ಧಾರ್ಮಿಕ ಕ್ರಿಯಾ ವಿಧಿಗಳಿಗೆಲ್ಲ ಹೆಚ್ಚಾಗಿ ಒಬ್ಬ ಪರಮಾತ್ಮ ಅಥವಾ ಭಗವಂತನೇ ವಿಷಯವಾಗಿರುತ್ತಾನೆ. ಅವರ ಅಧೀನದಲ್ಲಿ ಚರಾಚರಗಳೆಲ್ಲ ವರ್ತಿಸುತ್ತಿವೆ. ಏಕದೇವತಾವಾದದಂತೆ ಅನೇಕ ದೇವತಾವಾದಗಳೂ ಉಂಟು. ಯಾವುದೇ ಧರ್ಮವಿರಲಿ ಅದರಲ್ಲಿ ಪವಿತ್ರವೆನಿಸುವ ಕರ್ಮಾಂಗಗಳು ಜಪ ಮಂತ್ರಾದಿಗಳು, ಕಥಾನಕಗಳು, ತಂತ್ರಗಳು ತೀರ್ಥಕ್ಷೇತ್ರಾದಿಗಳು, ಪುಣ್ಯದಿನಗಳು, ಶುಭ–ಅಶುಭಗಳು, ಶಕುನಾದಿಗಳು, ಆಚಾರ್ಯ ಪರಂಪರೆ, ನಿತ್ಯ ತತ್ವಗಳು, ಧಾರ್ಮಿಕ ಸಾಹಿತ್ಯ, ವಿಧಿ–ನಿಷೇಧಗಳು ಮುಂತಾದುವೆಲ್ಲ ಕೂಡಿಯೇ ಇರುತ್ತವೆ.

ಭಿನ್ನ ಭಿನ್ನ ಮತಗಳಲ್ಲಿ ಇವೆಲ್ಲ ವಿಭಿನ್ನವಾಗಿಯೇ ಇದ್ದರೂ ಪವಿತ್ರ ಭಾವನೆ ಮಾತ್ರ ಸಕಲ ಮತ ಪ್ರಕ್ರಿಯೆಗಳಿಗೂ ಸಮಾನವಿರುವುದರಿಂದ ಅದು ಧರ್ಮ ಶಬ್ದದಿಂದ ವಾಚ್ಯವಾಗುತ್ತದೆ. ಹೀಗೆ ಮತವೆಂಬುದು ಧಾರ್ಮಿಕ ಆಚಾರ–ವಿಚಾರಗಳಲ್ಲಿನ ವೈಶಿಷ್ಟ್ಯದ ಸೂಚಕವಾಗಿರುವ ಸಂಕುಚಿತ ವ್ಯಾಪ್ತಿಯ ಶಬ್ದ. ಧರ್ಮ ಎಂಬುದು ಮತೀಯ ಆಚಾರ–ವಿಚಾರಗಳ ಹಿಂದಿರುವ ಸಮಾನ ಮನೋವೃತ್ತಿಯನ್ನು ಸೂಚಿಸುವ ವಿಶಾಲಾರ್ಥಕವಾದ ವ್ಯಾಪಕ ಶಬ್ದ.

Max well Eaton, opines that "Chapparband Embraced Islam in 16th and 17th centuries and they are the Sunnis of Hanafi School. They also worship some of the Hindu deities and avoid beef" (ಹುದ್ದಾರ್:೧೯೯೫:೭೫).

ಎಂಥೋವೆನ್ ತಿಳಿಸಿರುವಂತೆ, "ಇವರು ರಜಪೂತ ಮೂಲದವರು, ಇವರು ಮೇಲ್ಭಾಗದ ಬ್ರಾಹ್ಮಣರನ್ನು ತಮ್ಮ ಪುರೋಹಿತರನ್ನಾಗಿ ಮಾಡಿಕೊಂಡಿದ್ದರು" (ಎಂಥೋವೆನ್:೧೯೯೦:೨೮೬).

ಮೇಲಿನ ಹೇಳಿಕೆಗಳಿಂದ ತಿಳಿದುಬರುವುದೇನೆಂದರೆ ಇವರು ಮೂಲತಃ ಹಿಂದೂಗಳಾಗಿದ್ದು, ನಂತರ ಮೊಘಲ್ ಸೈನ್ಯದಲ್ಲಿ ಶಿಬಿರ ನಿರ್ಮಾಣ ಕೆಲಸದಲ್ಲಿ ಸೇರಿಕೊಂಡಾಗ, ಅಲ್ಲಿ ಇಸ್ಲಾಂ

ಧರ್ಮದ ಪ್ರಭಾವಕ್ಕೊಳಗಾಗಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರಬಹುದು. ಹಾಗಾಗಿ ಮೊದಲು ಇವರು ಎರಡೂ ಧರ್ಮಗಳ ದೇವರ ಮೇಲೆ ನಂಬಿಕೆ ಇಟ್ಟಿದ್ದರು, ಎರಡೂ ಧರ್ಮಗಳ ದೇವರನ್ನು ಪೂಜಿಸುತ್ತಿದ್ದರು, ಎರಡೂ ಧರ್ಮಗಳ ಹಬ್ಬಗಳನ್ನು ಆಚರಿಸುತ್ತಿದ್ದರು. ಆದರೆ ಈಗ ಪ್ರಸ್ತುತದಲ್ಲಿ ಇರುವ ಇಸ್ಲಾಂ ಧರ್ಮವನ್ನು ಮಾತ್ರ ಸಂಪೂರ್ಣವಾಗಿ ಆಚರಿಸುತ್ತಿದ್ದು, ತಾವು ಇಸ್ಲಾಂ ಧರ್ಮದ ಒಂದು ಒಳ ಪಂಗಡವಾಗಿ ತಮ್ಮ ಅಸ್ಮಿಯತೆಯನ್ನು ಉಳಿಸಿ ಕೊಂಡಿದ್ದಾರೆ.

ಇಸ್ಲಾಂ ಧರ್ಮದ ಎಲ್ಲಾ ನಿಯಮಗಳನ್ನು ಪಾಲಿಸುತ್ತಿದ್ದಾರೆ. ಇಸ್ಲಾಂ ಧರ್ಮದಲ್ಲಿ ದಿನಕ್ಕೆ ೫ ಬಾರಿ ಸಮಯಕ್ಕೆ ಸರಿಯಾಗಿ 'ನಮಾಜ'(ಪ್ರಾರ್ಥನೆ) ಮಾಡಬೇಕು ಅವು-

೧. ಫಜರ್- ಬೆಳಿಗ್ಗೆ ೫ಕ್ಕೆ

೨. ಝೊಹರ್- ಮಧ್ಯಾಹ್ನ ೧.೩೦ಕ್ಕೆ

೩. ಅಸರ್- ಸಂಜೆ ೫ಕ್ಕೆ

೪. ಮಗ್ರೀಬ್- ಇಳಿ ಸಂಜೆ ೬.೩೦ಕ್ಕೆ

೫. ಇಶಾ- ರಾತ್ರಿ ೮.೩೦ಕ್ಕೆ

ಚಪ್ಪರ್‌ಬಂದರೂ ಸಹ ೫ ವೇಳೆ ನಮಾಜ ಮಾಡುತ್ತಾರೆ, ೫ ವೇಳೆ ಸಾಧ್ಯವಾಗದೇ ಇದ್ದಾಗ, ಸಮಯ ಸಿಕ್ಕಷ್ಟು ಬಾರಿ ಮಾಡುತ್ತಾರೆ, ಪ್ರತೀ ಶುಕ್ರವಾರ ಮಧ್ಯಾಹ್ನ ವಿಶೇಷ ಪ್ರಾರ್ಥನೆ ಇರುತ್ತದೆ, ಗಂಡಸರು ಮಸ್‌ಜೀದ್‌ಗೆ ಹೋಗಿ ಪ್ರಾರ್ಥನೆ ಮಾಡುತ್ತಾರೆ, ಆದರೆ ಮಹಿಳೆಯರಿಗೆ ಮಸ್‌ಜೀದ್‌ಗೆ ಪ್ರವೇಶವಿಲ್ಲ, ಅವರು ಎಲ್ಲಾ ಪ್ರಾರ್ಥನೆಗಳನ್ನು ಮನೆಯಲ್ಲೇ ಮಾಡುತ್ತಾರೆ. ಹಬ್ಬಗಳ ದಿನದಂದು 'ಈದ್ಗಾ' ಮೈದಾನಕ್ಕೆ ಹೋಗಿ ಪ್ರಾರ್ಥನೆ ಮಾಡುತ್ತಾರೆ, ಆದರೆ ಮಹಿಳೆಯರಿಗೆ ಇಲ್ಲಿ ಸಹ ಪ್ರವೇಶ ನಿಷಿದ್ದವಿದೆ. ಅವರು ಹಬ್ಬಗಳಂದು ಸಹ ಮನೆಯಲ್ಲೆ, ಪ್ರಾರ್ಥನೆ ಮಾಡುತ್ತಾರೆ. ಈ ಸಮುದಾಯದವರು ತಮ್ಮ ಸೆಟ್ಲ್‌ಮೆಂಟ್‌ಗಳಲ್ಲಿ 'ಮಸ್‌ಜೀದ್' ಅನ್ನು ಸಹ ನಿರ್ಮಾಣ ಮಾಡಿಕೊಂಡಿದ್ದಾರೆ, ಮಸ್‌ಜೀದ್ ನಲ್ಲಿ ಕೆಲಸ ನಿರ್ವಹಿಸುವ ಮೌಲ್ವಿ ಮತ್ತು ಇತರರು ದಿನಾಲೂ ಬೆಳಿಗ್ಗೆ/ಸಂಜೆ ಮನೆ-ಮನೆಗೆ ಹೋಗಿ ನಮಾಜ್‌ಗೆ ಬರಲು ಹೇಳುತ್ತಿರುತ್ತಾರೆ.

ಚಪ್ಪರ್‌ಬಂದ್ ಸಮುದಾಯದವರು ಮಸ್‌ಜೀದ್‌ನ 'ಹಫೀಜ್ / ಮೌಲ್ವಿ / ಮೌಲಾನಾ ಮತ್ತು 'ಖಾಜಿ' ಇವರಿಗೆ ಹೆಚ್ಚಿನ ಗೌರವ ಕೊಡುತ್ತಾರೆ, ಪ್ರತಿಯೊಂದು ಧಾರ್ಮಿಕ ಕ್ರಿಯೆಗೆ ಮತ್ತು ಮದುವೆ, ನಾಮಕರಣ, ಸಾವು ಇತ್ಯಾದಿ ಕಾರ್ಯಗಳಿಗೆ ಇವರು ಅವಶ್ಯಕವಾಗಿ ಹಾಜರಿರಬೇಕಾಗುತ್ತದೆ, ಇವರುಗಳಿಲ್ಲದೆ ಆ ಕಾರ್ಯಗಳು ನಡೆಯುವುದೇ ಇಲ್ಲ. ಇವರು

ಅಲ್ಲಾಹುವಿನ ಮೇಲೆ ನಂಬಿಕೆ ಇಡುವುದು, ನಮಾಜ್ ಮಾಡುವುದು, ಖುರಾನ್ ಓದುವುದು, ರಂಜಾನ್ ತಿಂಗಳಲ್ಲಿ 'ರೋಜಾ'(ಉಪವಾಸ)ವಿರುವುದು, ದಾನ, ಧರ್ಮ, ಮಾಡುವುದು, ಸಾಧ್ಯವಾದವರು 'ಹಜ್' ಯಾತ್ರೆ ಮಾಡುವುದು ಇತ್ಯಾದಿಗಳನ್ನು ತಪ್ಪದೇ ಪಾಲಿಸುತ್ತಿದ್ದಾರೆ. ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿನಿಂದಲೇ ಈ ಎಲ್ಲವೂಗಳನ್ನು ಕಲಿಸುತ್ತಾರೆ, ಕಲಿಯಲು ಮದರಸಾಗಳಿಗೆ ಕಳುಹಿಸಿಸುತ್ತಾರೆ, ಹೆಣ್ಣುಮಕ್ಕಳಿಗೆ ಬುರ್ಖಾ ಧರಿಸಲು ತಿಳಿಸುತ್ತಾರೆ.

ಚಪ್ಪರ್‌ಬಂದ್ ಸಮುದಾಯದವರು 'ಫಕೀರ್' ಮತ್ತು 'ಪೀರ್‌ಗಳ ಮೇಲೆ ಸಹ ನಂಬಿಕೆ ಇಟ್ಟಿದ್ದಾರೆ. ಸೂಫಿಗಳ ಶಕ್ತಿಯ ಮೇಲೆ ಚಪ್ಪರ್‌ಬಂದ್ ಸಮುದಾಯದವರಿಗೆ ನಂಬಿಕೆ ಇದೆ. ಇವರು 'ದರ್ಗಾ' ಗಳಿಗೆ ಭೇಟಿ ನೀಡುತ್ತಾರೆ, ಅಲ್ಲಿರುವ ಸೂಫಿಯರ ಗೋರಿಗಳ ದರ್ಶನ ಮಾಡುತ್ತಾರೆ, ಇವರಲ್ಲಿ ಕೆಲವರು ಉರುಸ್‌ಗಳಿಗೂ ಸಹ ಹೋಗುತ್ತಾರೆ.

ಹುಲ್ಲೂರ್‌ನಲ್ಲಿ ನಡೆಯುವ 'ಹಜರತ್ ಶಹ ಖಾದ್ರಿ' ಮತ್ತು ಯಮನೂರಿನಲ್ಲಿ ನಡೆಯುವ 'ರಾಜೀಹ್ ಬಾಗ್ ಸವಾರ್' ಉರುಸ್‌ಗಳಿಗೆ ಹೋಗುತ್ತಾರೆ, ಈ ಉರುಸ್‌ಗಳಲ್ಲಿ ಹಿಂದೂ ಮುಸ್ಲಿಮರಿಬ್ಬರೂ ಭಾಗವಹಿಸುತ್ತಾರೆ, ಅನಾರೋಗ್ಯ, ಆರ್ಥಿಕ ಸಮಸ್ಯೆ, ಕುಟುಂಬ ಕಲಹ, ಇತ್ಯಾದಿ ಸಮಸ್ಯೆಗಳು ಎದುರಾದಾಗ, ಚಪ್ಪರ್‌ಬಂದರು, 'ಮಹಬೂಬ್ ಸುಬಾನಿ', 'ಮಾಲಿಕ್ ಜಾನ್ ಬಾಬಾ, 'ಖ್ವಾಜಾ ಗರೀಬ್ ನವಾಜ್', 'ಖ್ವಾಜಾ ಬಂದೇ ನವಾಜ್', 'ಬಾಬಾ ಫಕ್ರುದೀನ್' ಇತ್ಯಾದಿ ದರ್ಗಾಗಳಿಗೆ ಭೇಟಿ ನೀಡುತ್ತಾರೆ. ಪ್ರತೀ ಸೆಟ್ಲ್‌ಮೆಂಟ್‌ನಲ್ಲಿಯೂ ನಾವು ಚಿಕ್ಕ ದರ್ಗಾ ಇರುವುದನ್ನು ಕಾಣಬಹುದು.

ಚಪ್ಪರ್‌ಬಂದ್ ಸಮುದಾಯ ಮೊದಲು ಬುಡಕಟ್ಟು ಸಮುದಾಯ ಆಗಿದ್ದರಿಂದ ಇವರು ಇತರೆ ಸಮುದಾಯಗಳ ದೇವತೆ-ದೇವತೆಗಳ ಮೇಲೆ ನಂಬಿಕೆ ಹೊಂದಿದ್ದರು. ಹಾಗಾಗಿ ಆ ಸಮುದಾಯಗಳ ಹಬ್ಬಗಳನ್ನು ಆಚರಿಸತ್ತಿದ್ದರು, ಕೆಲವರು ಪೂಜೆಯನ್ನು ಸಹ ಮಾಡುತ್ತಿದ್ದರು ಆದರೆ ಕಾಲ ಬದಲಾದಂತೆ ಇವರೂ ಸಹ ಧಾರ್ಮಿಕವಾಗಿ ತುಂಬಾ ಬದಲಾವಣೆಗಳನ್ನು ಹೊಂದಿದ್ದಾರೆ, ಅನೇಕ ಹಳೆಯ ಆಚರಣೆಗಳನ್ನು ಬಿಟ್ಟಿದ್ದಾರೆ, ಕೆಲ ಹಳ್ಳಿಯಲ್ಲಿರುವ ಬೆರಳೆಣಿಕೆ ಯಷ್ಟು ಜನ ಮಾತ್ರ ಇನ್ನ ಕೆಲವು ಹಳೆಯ ಆಚರಣೆಗಳನ್ನು ಆಚರಿಸುತ್ತಿದ್ದಾರೆ.

**ಈದ್ (ಹಬ್ಬಗಳು)**

ಚಪ್ಪರ್‌ಬಂದರು ಸಂಪೂರ್ಣವಾಗಿ ಇಸ್ಲಾಂ ಧರ್ಮವನ್ನು ಅನುಸರಿಸುತ್ತಿರುವುದರಿಂದ ಇಸ್ಲಾಂ ಹಬ್ಬಗಳನ್ನು ಮಾತ್ರ ಆಚರಿಸುತ್ತಿದ್ದಾರೆ, ಪ್ರತಿ ಧರ್ಮದಲ್ಲಿಯೂ ಹಬ್ಬಗಳಿಗೆ ವಿಶೇಷ ಸ್ಥಾನವಿದೆ. ಪ್ರತಿ ಹಬ್ಬದ ಹಿಂದೆಯೂ ಒಂದು ಧಾರ್ಮಿಕ ಸಂದೇಶ ಇದ್ದೇ ಇರುತ್ತದೆ. ಪ್ರತಿಯೊಬ್ಬರು ಪವಿತ್ರತಾ ಭಾವನೆಯಿಂದ ಹಬ್ಬಗಳನ್ನು ಆಚರಿಸುತ್ತಾರೆ, ಪ್ರತಿಯೊಂದು ಹಬ್ಬಕ್ಕು ತನ್ನದೇ ಆದ ವಿಧಿ-ನಿಯಮಗಳಿರುತ್ತವೆ, ಯಾವ ಹಬ್ಬವನ್ನು ಯಾವಾಗ ಆಚರಿಸಬೇಕು?,

ಹೇಗೆ ಆಚರಿಸಬೇಕು? ಅದರ ಉದ್ದೇಶವೇನು? ಎಂಬಿತ್ಯಾದಿ ಎಲ್ಲ ಅಂಶಗಳು ಅನಾದಿ ಕಾಲದಿಂದಲೇ ನಿರ್ಣಯವಾಗಿರುತ್ತವೆ.

ಚಪ್ಪರ್‌ಬಂದ್ ಸಮುದಾಯದವರು ಪ್ರಮುಖವಾಗಿ ಈ ಕೆಳಕಂಡ ಹಬ್ಬಗಳನ್ನು ಆಚರಿಸುತ್ತಾರೆ,

೧. ರಂಜಾನ್, ೨. ಬಕ್ರೀದ್, ೩. ಮೊಹರಂ

**ರಂಜಾನ್ ಈದ್**

ಮುಸ್ಲಿಮರಲ್ಲಿ ಇದು ಅತ್ಯಂತ ಪವಿತ್ರವಾದ ಮತ್ತು ಪ್ರಮುಖವಾದ ಹಬ್ಬವಾಗಿದೆ. ರಂಜಾನ್ ಹಬ್ಬವನ್ನು "ಈದ್-ಉಲ್-ಫಿತರ್" ಎಂದು ಕರೆಯಲಾಗುತ್ತದೆ. ಇದು ಇಸ್ಲಾಮಿನ ೯ನೇ ತಿಂಗಳಾದ 'ರಂಜಾನ್'ನಲ್ಲಿ ನಡೆಯುತ್ತದೆ. ತಿಂಗಳ ಮೊದಲ ಚಂದ್ರ ದರ್ಶನದಿಂದ ಈ ಮಾಸ ಆರಂಭವಾಗುತ್ತದೆ. ಈ ತಿಂಗಳು ಪೂರ್ತಿ 'ರೋಜಾ' (ಉಪವಾಸ) ಇರುತ್ತಾರೆ. ತಿಂಗಳು ಪೂರ್ತಿ ವಿಶೇಷ ಪ್ರಾರ್ಥನೆಗಳನ್ನು ಮಾಡುತ್ತಾರೆ. ಚಿಕ್ಕ ಮಕ್ಕಳು, ವೃದ್ದರು, ಗರ್ಭಿಣಿಯರು, ಬಾಣಂತಿಯರು, ರೋಗಿಗಳನ್ನು ಹೊರತುಪಡಿಸಿ ಉಳಿದವರೆಲ್ಲರೂ ಕಡ್ಡಾಯವಾಗಿ ಉಪವಾಸ ಇರಲೇಬೇಕು. ಮುಂಜಾನೆ ೪ಕ್ಕೆ ಊಟ ಮಾಡಿ, ಮತ್ತೇ ರಾತ್ರಿ ೭ಕ್ಕೆ ಊಟ ಮಾಡುತ್ತಾರೆ. ಅಂದರೆ ಇಡೀ ದಿನ ಪೂರ್ತಿ ಏನೂ ತಿನ್ನದೇ, ನೀರು ಸಹ ಕುಡಿಯದೆ ಉಪವಾಸ ಇರುತ್ತಾರೆ. ಸಂಜೆ ೭ಕ್ಕೆ ಉಪವಾಸ ಬಿಟ್ಟು ನಮಾಜ್ ಮಾಡಿದ ನಂತರವೇ ಊಟ ಮಾಡಲಾಗುತ್ತದೆ. ಉಪವಾಸವಿದ್ದ ಸಂದರ್ಭದಲ್ಲಿ ಸುಳ್ಳು ಹೇಳುವುದು, ಮೋಸ-ವಂಚನೆ ಇತ್ಯಾದಿ ಕೆಟ್ಟ ಕೆಲಸಗಳಿಂದ ದೂರವಿರಬೇಕು. ದಿನಪೂರ್ತಿ ದೇವರ ಧ್ಯಾನದಲ್ಲಿರಬೇಕು.

ರಂಜಾನ್ ತಿಂಗಳಲ್ಲಿ ಪ್ರತಿ ದಿನ ರಾತ್ರಿ ವಿಶೇಷ ನಮಾಜ್ (ಪ್ರಾರ್ಥನೆ) ಮಾಡಲಾಗುತ್ತದೆ. ಈ ತಿಂಗಳಲ್ಲಿ ಹೆಚ್ಚಾಗಿ ದಾನ ಧರ್ಮವನ್ನು ಮಾಡಲಾಗುತ್ತದೆ. ಇಸ್ಲಾಂ ಷರಿಯತ್ ಪ್ರಕಾರ ಪ್ರಮುಖವಾಗಿ ಎರಡು ರೀತಿಯ ದಾನಗಳನ್ನು ಮಾಡಲಾಗುತ್ತದೆ. ಅವು:

**೧. ಜಕಾತ್**- ಇದು ಇಸ್ಲಾಂ ಷರಿಯತ್ ಪ್ರಕಾರ ಮನೆಯಲ್ಲಿ ೭ ೧/೨ ತೊಲೆ ಬಂಗಾರ ಮತ್ತು ೨ ೧/೨ ತೊಲೆ ಬೆಳ್ಳಿ ಇದ್ದರೆ ಅಥವಾ ಅದಕ್ಕೆ ಸರಿ ಹೊಂದುವಷ್ಟು ಮೊತ್ತದ ಆದಾಯ/ಹಣ ವರ್ಷವಿಡೀ ತಮ್ಮ ಬಳಿ ಇದ್ದರೆ, ಆಗ ಅದಕ್ಕೆ ನಿಗದಿ ಪಡಿಸಿರುವ ಮೊತ್ತವನ್ನು ಬಡವರಿಗೆ ನೀಡಬೇಕು. ೧೦೦೦ ರೂ ಗೆ ೨೫ ರೂ ರಂತೆ ಲೆಕ್ಕ ಹಾಕಿ ಅಷ್ಟು ಹಣ ಕೊಡಬೇಕು. ಜಕಾತ್ ಹಣವನ್ನು ಹಣದ ರೂಪದಲಿಲ್ಲದಿದ್ದರೂ, ವಸ್ತುಗಳ ರೂಪದಲ್ಲಿ, ಬಟ್ಟೆಗಳ ರೂಪದಲ್ಲಿ, ದವಸ-ಧಾನ್ಯಗಳ ರೂಪದಲ್ಲಿ ಸಹ ನೀಡಬಹುದು. ಒಂದೇ ಬಾರಿಗೆ

ಅಷ್ಟು ಮೊತ್ತವನ್ನು ಕೊಡಲು ಆಗದಿದ್ದರೆ, ಈ ವರ್ಷದ ರಂಜಾನ್ ತಿಂಗಳಿನಿಂದ ಮುಂದಿನ ವರ್ಷದ ರಂಜಾನ್ ತಿಂಗಳವರೆಗೆ ಈ ವರ್ಷದ ಜಕಾತ್‌ನ ಹಣವನ್ನು ಹಂಚಲು ಅವಕಾಶ ವಿರುತ್ತದೆ. ಬಡವರಿಗಲ್ಲದೆ ಮಸಜೀದ್‌ಗಳಿಗೆ, ಮದರಸಾಗಳಿಗೆ ಸಹ ಈ ಹಣವನ್ನು ಕೊಡಬಹುದು. ಅರ್ಹ ವ್ಯಕ್ತಿಗಳಿಗೆ ಇದು ಕಡ್ಡಾಯವಾಗಿರುತ್ತದೆ.

**೨. ಫಿತ್ರ**– ಇದು ಮನೆಯಲ್ಲಿರುವ ಪ್ರತಿಯೊಂದು ಸದಸ್ಯರ ಹೆಸರಿನಲ್ಲಿ ಬಡವರಿಗೆ ಮಾತ್ರ ಕೊಡಬೇಕು. ಇಸ್ಲಾಂ ಷರಿಯತ್ ಪ್ರಕಾರ ಪ್ರತಿಯೊಬ್ಬ ಸದಸ್ಯರ ಹೆಸರಿನಲ್ಲಿ ೩.೧/೨ ಕೆ.ಜಿ. ಗೋದಿಯನ್ನು ಅಥವಾ ಅದಕ್ಕೆ ಸರಿ ಹೋಗುವಷ್ಟು ಮೊತ್ತದ ಹಣವನ್ನು ದಾನ ಮಾಡಬೇಕು. ಈ ಧಾನವನ್ನು ರಂಜಾನ್ ಮತ್ತು ಬಕ್ರೀದ್ ಎರಡೂ ಹಬ್ಬಗಳಲ್ಲಿ ಕೊಡಬೇಕು. ಇದನ್ನು ಬಡವರು ಹೊರತು ಪಡಿಸಿ ಉಳಿದವರೆಲ್ಲರೂ ಕಡ್ಡಾಯವಾಗಿ ಕೊಡಲೇಬೇಕು.

ಇವೆರಡನ್ನು ಹೊರತು ಪಡಿಸಿ ಸತ್ತ ಹಿರಿಯರ ಹೆಸರಲ್ಲಿ, ರೋಗಿಗಳ ಹೆಸರಲ್ಲಿ, ಮಕ್ಕಳ ಹೆಸರಲ್ಲಿ, ತಮ್ಮ ತಮ್ಮ ಹೆಸರಲ್ಲಿ ಸಹ ದಾನವನ್ನು ಮಾಡುತ್ತಾರೆ. ಅನ್ಯ ಧರ್ಮದವರಿಗೂ ಸಹ ದಾನ ಮಾಡಲಾಗುತ್ತದೆ. ರಂಜಾನ್ ತಿಂಗಳ ಕೊನೆಯ ೧೦ ದಿನಗಳಲ್ಲಿ ಒಂದು ದಿನ ಬಿಟ್ಟು ಒಂದು ದಿನದಂತೆ ೫ ರಾತ್ರಿಗಳು ವಿಶೇಷ ಪ್ರಾರ್ಥನೆ ಮಾಡುತ್ತಾರೆ. ಇದನ್ನು "ತಾಖ್‌ರಾತ್" ಎಂದು ಕರೆಯುತ್ತಾರೆ. ಅಂದರೆ ಜಾಗಾರಣೆ ಮಾಡುವುದು. ರಾತ್ರಿ ಪೂರ್ತಿ ದೇವರ ಧ್ಯಾನ ಮಾಡುವುದು, ನಮಾಜ್ ಮಾಡುವುದು, ಖುರಾನ್ ಓದುವುದು ಮಾಡುತ್ತಾರೆ. ಈ ೫ ರಾತ್ರಿಗಳಲ್ಲಿ ಮಾಡುವ 'ಇಬಾದತ್' ಅಂದರೆ ಪ್ರಾರ್ಥನೆ ತುಂಬಾನೆ ಮುಖ್ಯವಾದುದು. ಹಾಗಾಗಿ ವಯಸ್ಸಿನ ಮಿತಿಯಿಲ್ಲದೆ ಚಿಕ್ಕ ಮಕ್ಕಳಿಂದ ಹಿಡಿದು ವೃದ್ದರೂ ಸಹ ಇದನ್ನು ಪಾಲಿಸುತ್ತಾರೆ. ತಿಂಗಳ ಕೊನೆಯಲ್ಲಿ ಅಂದರೆ ೨೯ನೇ ದಿನ ಅಥವಾ ೩೦ನೇ ದಿನ ಚಂದ್ರ ದರ್ಶನದ ನಂತರ ಉಪವಾಸ ಮುಗಿಯುತ್ತದೆ. ಮರುದಿನ ತುಂಬಾನೆ ಸಂಭ್ರಮದಿಂದ ರಂಜಾನ್ ಹಬ್ಬವನ್ನು ಆಚರಿಸುತ್ತಾರೆ. ಅಂದು ಮುಂಜಾನೆ ಎದ್ದು ಸ್ನಾನ ಮಾಡಿ ಹೊಸ ಬಟ್ಟೆ ಉಟ್ಟು ಅತ್ತರ್ (ಸುಗಂಧ ದ್ರವ್ಯ) ಹಚ್ಚಿ, ಕಣ್ಣಿಗೆ ಸುರ್ಮಾ ಹಚ್ಚಿ ಎಲ್ಲ ಗಂಡು ಮಕ್ಕಳು ಮಸ್‌ಜೀದ್‌ಗೆ ಹೋಗುತ್ತಾರೆ. ಅಲ್ಲಿಂದ ಸಮಾಜದ ಎಲ್ಲರೂ ಸೇರಿ ಈದ್ಗಾ ಮೈದಾನಕ್ಕೆ ಹೋಗಿ ರಂಜಾನ್ ಹಬ್ಬದ ವಿಶೇಷ ನಮಾಜ್ (ಪ್ರಾರ್ಥನೆ) ಮಾಡುತ್ತಾರೆ. ನಂತರ ಒಬ್ಬರಿಗೊಬ್ಬರು ತಬ್ಬಿಕೊಂಡು ಶುಭಾಷಯವನ್ನು ಹೇಳುತ್ತಾರೆ. ಹೆಂಗಸರು ಮನೆಯಲ್ಲಿಯೇ ಪ್ರಾರ್ಥನೆ ಮಾಡುತ್ತಾರೆ. ಹಬ್ಬದಂದು ವಿಶೇಷ ಪಾಯಸ ಮತ್ತು ಮಾಂಸದೂಟವನ್ನು ಮಾಡಿರುತ್ತಾರೆ. ಸಂಬಂಧಿಕರಿಗೆ, ಸ್ನೇಹಿತರಿಗೆ ಮನೆಗೆ ಹೋಗಿ ಶುಭಾಷಯ ಹೇಳಿ, ಸಿಹಿ ತಿಂದು ಬರುತ್ತಾರೆ. ಹಬ್ಬದಂದು ಮನೆಯ ಹಿರಿಯರೆಲ್ಲರು ತಮಗಿಂತ ಚಿಕ್ಕವರಿಗೆ ಹಣವನ್ನು ನೀಡುತ್ತಾರೆ. ಮನೆಯಲ್ಲೂ ಸಹ ಎಲ್ಲರೂ ಒಬ್ಬರಿಗೊಬ್ಬರು ಶುಭಾಷಯವನ್ನು ಹೇಳಿಕೊಳ್ಳುತ್ತಾರೆ. ಒಟ್ಟಿನಲ್ಲಿ ರಂಜಾನ್ ಹಬ್ಬವನ್ನು ತುಂಬಾನೆ ಸಡಗರ ಸಂಭ್ರಮದಿಂದ ಆಚರಿಸುತ್ತಾರೆ.

**ಬಕ್ರೀದ್**

ಬಕ್ರೀದ್ ಹಬ್ಬವನ್ನು ಬಲಿದಾನದ ಪ್ರತೀಕವಾಗಿ ಆಚರಿಸಲಾಗುತ್ತದೆ. ರಂಜಾನ್ ಹಬ್ಬ ಮುಗಿದ ೨ ತಿಂಗಳ ನಂತರ ಈ ಹಬ್ಬವನ್ನು ಆಚರಿಸಲಾಗುತ್ತದೆ. ಅಂದರೆ ಇಸ್ಲಾಮಿಕ್ ೧೧ನೇ ತಿಂಗಳಾದ "ಝಿಲ್ ಖದ್" ತಿಂಗಳಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಈ ಹಬ್ಬವನ್ನು "ಈದ್-ಉಲ್-ಅಧಾ" ಎಂದು ಕರೆಯುತ್ತಾರೆ. ಈ ಹಬ್ಬವನ್ನು ಸಹ ಚಂದ್ರದರ್ಶನದ ನಂತರವೇ ಮಾಡಲಾಗುತ್ತದೆ. ಈ ಹಬ್ಬದಲ್ಲಿ ವಿಶೇಷವಾಗಿ ಪ್ರಾಣಿ ಬಲಿ ಕೊಡಲಾಗುತ್ತದೆ. ಅದಕ್ಕೆ "ಖುರ್ಬಾನಿ" ಎಂದು ಕರೆಯುತ್ತಾರೆ. ತಮ್ಮ ಆರ್ಥಿಕತೆಗೆ ತಕ್ಕಂತೆ, ಆಡು, ಕುರಿ, ಹಸು, ದನ, ಒಂಟೆಯನ್ನು ಬಲಿ ಕೊಟ್ಟು ಅದರ ಮಾಂಸವನ್ನು ಎಲ್ಲರಿಗೂ ಹಂಚಲಾಗುತ್ತದೆ. ಹಬ್ಬದ ದಿನ ಮುಂಜಾನೆ ಮೈದಾನದಲ್ಲಿ ವಿಶೇಷ ಪ್ರಾರ್ಥನೆಯನ್ನು ಮಾಡುತ್ತಾರೆ. ಎಲ್ಲರೂ ಸಹ ಒಬ್ಬರಿಗೊಬ್ಬರು ಶುಭಾಷಯವನ್ನು ಹೇಳಿಕೊಳ್ಳುತ್ತಾರೆ. ಇಸ್ಲಾಂನ ಷರಿಯತ್ ಪ್ರಕಾರ 'ಜಕಾತ್' ನೀಡುವವರು ಕಡ್ಡಾಯವಾಗಿ ಬಲಿ ಕೊಡಲೇಬೇಕು. 'ಜಕಾತ್' ನೀಡುವವರು ತಮ್ಮ ಹೆಸರಿನಲ್ಲಿ, ಉಳಿದವರು ತಮ್ಮ ಹಿರಿಯರ ಹೆಸರಲ್ಲಿ, ಕುಟುಂಬದ ಇತರೆ ಸದಸ್ಯರ ಹೆಸರಲ್ಲಿ ಬಲಿ ಕೊಡುತ್ತಾರೆ. ಕುರಿ, ಆಡು, ಮೇಕೆ ಯಾದರೆ ಒಂದು ಪ್ರಾಣಿಯನ್ನು ಒಬ್ಬರ ಹೆಸರಲ್ಲಿ ಬಲಿ ಕೊಡಲಾಗುತ್ತದೆ. ಹಸು, ದನ, ಒಂಟೆಯಾದರೆ ಒಂದು ಪ್ರಾಣಿಯನ್ನು ೭ ಭಾಗ ಮಾಡಿ ೭ ಜನರ ಹೆಸರಲ್ಲಿ ಬಲಿ ಕೊಡಲಾಗುತ್ತದೆ.

ಒಬ್ಬರ ಹೆಸರಲ್ಲಿ ಬಲಿ ಕೊಟ್ಟು ಮಾಂಸವನ್ನು ಮತ್ತೆ ೩ ಭಾಗ ಸಮಪಾಲು ಮಾಡಿ ಒಂದು ಭಾಗ ಮನೆಗೆ, ಒಂದು ಅಣ್ಣ-ತಮ್ಮಂದಿರಿಗೆ ಮತ್ತು ಸಂಬಂಧಿಕರಿಗೆ, ಕೊನೆಯ ಭಾಗ ಬಡವರಿಗೆ ಹಂಚಬೇಕು. ಈ ಹಬ್ಬದಲ್ಲೂ ಸಹ 'ಫಿತ್ರ' ಎಂಬ ದಾನವನ್ನು ಕೊಡಬೇಕು. ಈ ಹಬ್ಬದಲ್ಲಿ ಗಂಡಸರು ಕೂದಲನ್ನು ಸಹ ಬಲಿ ಕೊಡುತ್ತಾರೆ. ಇಸ್ಲಾಂನಲ್ಲಿ ಹೆಂಗಸರು ಕೂದಲನ್ನು ಕತ್ತರಿಸುವಂತಿಲ್ಲ. ಈ ಹಬ್ಬವನ್ನು ೩ ದಿನಗಳ ಕಾಲ ಆಚರಿಸುತ್ತಾರೆ.

**ಮೊಹರಂ**

ಮೊಹರಂ ಇಸ್ಲಾಂನ ಹೊಸ ವರ್ಷವಾಗಿದೆ. ಈ ತಿಂಗಳಿಂದಲೇ ವರ್ಷ ಆರಂಭವಾಗುತ್ತದೆ. ಇದನ್ನು ಸಹ ಬಲಿದಾನದ ಪ್ರತೀಕವಾಗಿ ಆಚರಿಸಲಾಗುತ್ತದೆ. ಇಸ್ಲಾಮಿಯರ ಮತ್ತು ಯಹೂದಿಗಳ ಮಧ್ಯೆ ಧರ್ಮ ಯುದ್ದ ನಡೆದಿರುತ್ತದೆ. ಆ ಯುದ್ದದಲ್ಲಿ ಇಸ್ಲಾಂನ ಪ್ರವಾದಿ ಮಹಮ್ಮದ್ ಪೈಗಂಬರ್‌ರವರ ಮೊಮ್ಮಕ್ಕಳಾದ ಇಮಾಂ ಹುಸೇನ್ ಮತ್ತು ಹಸೇನ್ ಇಬ್ಬರೂ ತಮ್ಮ ಪ್ರಾಣವನ್ನು ಕಳೆದುಕೊಂಡಿರುತ್ತಾರೆ. ಅವರ ಬಲಿದಾನ ಜ್ಞಾಪಕಾರ್ಥವಾಗಿ ಈ ದಿನವನ್ನು ಮೊಹರಂ ಎಂದು ಆಚರಿಸುತ್ತಾರೆ. ಈ ತಿಂಗಳ ಆರಂಭದ ೧೦ ದಿನಗಳು ಇದನ್ನು ಆಚರಿಸುತ್ತಾರೆ. ಧರ್ಮ ಯುದ್ದದಲ್ಲಿ ಮಡಿದವರ ಹೆಸರಿನಲ್ಲಿ "ಪಂಜೆ" ಕೂರಿಸುತ್ತಾರೆ.

ಇದನ್ನು ಹಿಂದೂಗಳು ಸಹ ಆಚರಿಸುತ್ತಾರೆ. ಹಾಗಾಗಿ ಇದನ್ನು 'ಪೀರ್ಲ ಹಬ್ಬ' ಎಂದು ಸಹ ಕರೆಯುತ್ತಾರೆ. ತಿಂಗಳ ಮೊದಲ ಚಂದ್ರ ದರ್ಶನದ ನಂತರ ಗುದ್ದಲಿ ಹಾಕುವರು. ಇದನ್ನು 'ಹವಾಲಾ' ಎನ್ನುತ್ತಾರೆ. ಪೆಟ್ಟಿಗೆಯಲ್ಲಿ ಎತ್ತಿಟ್ಟ 'ಪಂಜೆ"(ಪೀರ್ಲ ದೇವರು)ಗಳನ್ನು ಹೊರ ತೆಗೆದು ಸ್ವಚ್ಚಗೊಳಿಸಿ ಅದಕ್ಕೆ ಸಿದ್ದಪಡಿಸಿದ ಸ್ಥಳದಲ್ಲಿ ಅಥವಾ ಕೆಲವರು ದರ್ಗಾಗಳಲ್ಲಿ ಅವುಗಳನ್ನು ಕೂರಿಸುತ್ತಾರೆ. ಪಂಜೆಗಳನ್ನು ಬೆಳ್ಳಿಯಲ್ಲಿ ಚಿಕ್ಕಗಾತ್ರದ ಲಾಂಛನಗಳ ರೂಪದಲ್ಲಿ ಮಾಡಲಾಗಿರುತ್ತದೆ.

ಅಂದಿನಿಂದ ಪ್ರತಿ ದಿನ ರಾತ್ರಿ ಅದರ ಮುಂದೆ ಫಾತೇಹ ಓದುತ್ತಾರೆ. ಪಂಜೆಗಳಿಗೆ ಪಗಡಿ ತೊಡಿಸಿರುತ್ತಾರೆ. ಪ್ರತಿ ದಿನ ಭಕ್ತರುಗಳು ತಮ್ಮ ತಮ್ಮ ಹರಕೆಗಳನನು ಒಪ್ಪಿಸುತ್ತಾರೆ. ಯಾವ ಮಕ್ಕಳ ಹೆಸರಲ್ಲಿ ಹರಕ್ಕೆ ಹೊತ್ತಿರುತ್ತಾರೋ ಅವರ ತೂಕಕ್ಕೆ ಸಕ್ಕರೆ ಅಥವಾ ಬೆಲ್ಲ ತೂಗುವರು. ಹೊಸ ದಂಪತಿಗಳು ಬಂದು ಪಂಜೆಗಳಿಗೆ ಹೂವಿನ ಸೇರ ಮತ್ತು ಚದ್ದರ್ (ಬಾಸಿಂಗ ಮತ್ತು ಹೊದಿಕೆ) ಹೊದಿಸಿ ಹೋಗುತ್ತಾರೆ. ಮೊಹರಂ ೭ನೇ ದಿನಕ್ಕೆ ಭಕ್ತರು ಶರ್‌ಬತ್(ಪಾನಕ) ಮತ್ತು ಸಿಹಿಯನ್ನು ಮಾಡಿ ಎಲ್ಲರಿಗೂ ಹಂಚುತ್ತಾರೆ. ಅಂದು ಪೀರ್ಲ ದೇವರು ಕೆಲ ಭಕ್ತರ ಮತ್ತು ಮುಜಾವರ್‌ಗಳ ಮೈಮೇಲೆ ಬಂದು ಹವಾಲ ಅಥವಾ ಬೆಂಕಿಯ ಗುಂಡಿಯಲ್ಲಿ ಕುಣಿಯುತ್ತಾರೆ ಎಂಬ ನಂಬಿಕೆ ಇದೆ. ೧೦ನೇ ದಿನ ಮುಂಜಾನೆ ಪಂಜೆಗಳನ್ನು ಉದ್ದನೆಯ ಬಿದಿರು ಕೋಲುಗಳಿಗೆ ಕಟ್ಟಿ ಹೂಗಳಿಂದ ಅಲಂಕಾರ ಮಾಡಿ ಊರ ತುಂಬಾ ಮೆರವಣಿಗೆ ಮಾಡುತ್ತಾರೆ. ಸಾಯಂಕಾಲ ಮತ್ತೊಮ್ಮೆ ಮೆರವಣಿಗೆ ಮಾಡುತ್ತಾರೆ. ಸಂಜೆ ಡೋಲು ತಮಟೆಗಳನ್ನು ಬಾರಿಸುತ್ತಾ ವೇಷಗಳನ್ನು ಹಾಕಿಕೊಂಡು ಕುಣಿಯುತ್ತಾ ಮೆರವಣಿಗೆ ಮಾಡುವರು. ನಂತರ ಊರ ಹೊರಗೆ ಮೊದಲೇ ಗೊತ್ತು ಮಾಡಿದ ಪ್ರದೇಶಕ್ಕೆ ಅಂದರೆ 'ಕರ್‌ಬಲಾ' ಮೈದಾನಕ್ಕೆ ಎಲ್ಲರೂ ಹೋಗುತ್ತಾರೆ. ಅಲ್ಲಿ ಬಾವಿಯ ಹತ್ತಿರ ಬಿದಿರು ಕೋಲುಗಳಿಂದ ಪಂಜೆಗಳನ್ನು ಬೇರ್ಪಡಿಸಿ ಅದರ ಮೇಲೆ ಹಾಕಿದ್ದ ಹೂಗಳನ್ನು ಬಾವಿಯಲ್ಲಿ ಹಾಕುತ್ತಾರೆ. ನಂತರ ಪಂಜೆಗಳನ್ನು ಹೊಸ ಬಟ್ಟೆಯಲ್ಲಿ ಸುತ್ತಿಟ್ಟು, ಫಾತೇಹ ಓದುತ್ತಾರೆ. ನಂತರ ಎಲ್ಲರೂ ಕುಳಿತುಕೊಂಡು ತಾವು ತಂದ ಚೋಂಗಾ ರೊಟ್ಟಿ ಮತ್ತು ಮೊಸರನ್ನದ ಬುತ್ತಿಯನ್ನು ಹಂಚಿಕೊಂಡು ತಿನ್ನುತ್ತಾರೆ. ನಂತರ ಪಂಜೆಗಳ ಗಂಟುಗಳನ್ನು ಹೊತ್ತುಕೊಂಡು ದುಃಖ ಭರಿತ ಹಾಡುಗಳನ್ನು ಹಾಡುತ್ತಾ ವಾಪಸ್ ಪಂಜೆಗಳಿಡುವ ಜಾಗಕ್ಕೆ ಹೋಗಿ ಅವುಗಳನ್ನು ಪೆಟ್ಟಿಗೆಯಲ್ಲಿಟ್ಟು ತಮ್ಮ ತಮ್ಮ ಮನೆಗಳಿಗೆ ಹೋಗುವರು. ಇದಾದ ೩ ದಿನಗಳ ನಂತರ 'ಜಿಯಾರತ್' ಮಾಡುವರು. ಅಂದು ಪಂಜೆಗಳ ಹೆಸರಲ್ಲಿ ಟಗರನ್ನು ಬಲಿಕೊಟ್ಟು ಅಡಿಗೆ ಮಾಡಿ ಸಾಯಂಕಾಲ ಎಲ್ಲಾ ಭಕ್ತರಿಗೆ ಊಟ ಹಾಕುತ್ತಾರೆ. ಇದರೊಂದಿಗೆ ಮೊಹರಂ ಮುಗಿಯುತ್ತದೆ.

ಮೊಹರಂ ಹಬ್ಬವಲ್ಲ. ಒಂದು ಆಚರಣೆ ಮಾತ್ರ. ಇಸ್ಲಾಂನಲ್ಲಿ ಇದನ್ನು ಆಚರಿಸುವಂತಿಲ್ಲ. ಮೊಹರಂ ಎಂದರೆ ಕರಾಳ ರಾತ್ರಿ ಎಂದರ್ಥ. ಇದನ್ನು ಕೆಲವರು ಮಾತ್ರ ಆಚರಿಸುತ್ತಾರೆ. ಚಪ್ಪರ್‌ಬಂದ್ ಸಮುದಾಯದಲ್ಲಿ ಸಹ ಕೆಲವರು ಇದನ್ನು ಆಚರಿಸುವುದಿಲ್ಲ. ಎಲ್ಲಾ ಸೆಟ್ಲ್‌ಮೆಂಟ್‌ನಲ್ಲೂ ನಾವು ಪಂಜೆಗಳನ್ನು ಕೂರಿಸುವ "ದರ್ಗಾ ಕಟ್ಟೆ" ಇರುವುದನ್ನು ಕಾಣುತ್ತೇವೆ. ಈ ಸಮುದಾಯದವರು ಎಲ್ಲೇ ವಲಸೆ ಹೋಗಿದ್ದರೂ ಸಹ ಮೊಹರಂ ಆಚರಿಸಲು ಸೆಟ್ಲ್‌ಮೆಂಟ್‌ಗಳಿಗೆ ವಾಪಸ್ಸು ಬರುತ್ತಾರೆ.

**ಇತರೆ ಹಬ್ಬಗಳು**

ಚಪ್ಪರ್‌ಬಂದ್ ಸಮುದಾಯದವರು ಭಾರತೀಯ ಇತರೆ ಸಮುದಾಯಗಳ ಮತ್ತು ಇಸ್ಲಾಂ ಎರಡರ ಸಂಪ್ರದಾಯಗಳನ್ನು ಆಚರಿಸುತ್ತಿದರಿಂದ, ಇವರು ಮೊದಲು ಇತರೆ ಸಮುದಾಯಗಳ ಹಬ್ಬಗಳನ್ನು ಸಹ ಆಚರಿಸುತ್ತಿದ್ದರು, ಇವರು ಮೊದಲು ನಾಗಪಂಚಮಿ, ದಸರಾ, ದೀಪಾವಳಿ, ಜಾತ್ರೆಗಳನ್ನು ಮಾಡುತ್ತಿದ್ದರು, ಹಳ್ಳಿಗಳಲ್ಲಿ ಊರು ದೇವತೆಯನ್ನು ಪೂಜಿಸುತ್ತಿದ್ದರು, ಆದರೆ ಕಾಲ ಬದಲಾದಂತೆ ತಮ್ಮನ್ನು ಸಂಪೂರ್ಣವಾಗಿ ಇಸ್ಲಾಂ ಧರ್ಮಕ್ಕೆ ರೂಪಾಂತರಿಸಿಕೊಂಡರು. ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಇನ್ನೂ ಕೆಲವರು ಹಳೆಯ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರು **'ನಶಾಮಾತ'** ಎಂಬ ಚಿಕ್ಕ ವಿಗ್ರಹವನ್ನು ಇನ್ನೂ ತಮ್ಮ ಬಳಿ ಇಟ್ಟುಕೊಂಡಿದ್ದಾರೆ. ಅಮವಾಸ್ಯೆ, ಹುಣ್ಣಿಮೆಗೆ ಅಥವಾ ಮನೆಯಲ್ಲಿ ಏನಾದರೂ ಸಮಸ್ಯೆಗಳು ಎದುರಾದರೆ, ಆ ಮೂರ್ತಿಯನ್ನು ಹೊರತೆಗೆದು ಪೂಜೆ ಮಾಡುತ್ತಾರೆ. ಇದರಿಂದ ಸಮಸ್ಯೆಗಳು ಬಗೆಹರಿಯುತ್ತವೆ ಎಂಬುದು ಅವರ ನಂಬಿಕೆ. ಆ ಮೂರ್ತಿಯನ್ನು ಯಾರು ಬೇಕು ಅವರು ಮುಟ್ಟುವಂತಿಲ್ಲ, ಆ ಮೂರ್ತಿಗೆ ಸಂಬಂಧಿಸಿದಂತೆ ತುಂಬಾ ಮಡಿ–ಮೈಲಿಗೆ ಅನುಸರಿಸುತ್ತಾರೆ. ಇದು ಇವರಲ್ಲಿ ಇನ್ನೂ 'ಮೂರ್ತಿ ಪೂಜೆ' ಜೀವಂತವಾಗಿರುವುದನ್ನು ಸೂಚಿಸುತ್ತದೆ. ಹಾಗಾಗಿ ಇವರು ಪರಿಶಿಷ್ಟ ಬುಡಕಟ್ಟು ಹೊಂದಿರಬೇಕಾದ ಅನೇಕ ಲಕ್ಷಣಗಳನ್ನು ಇನ್ನೂ ಹೊಂದಿರುವುದು ಕಾಣಸಿಗುತ್ತದೆ. ಬಡೇಭಾಯಿ ಮತ್ತು ಛೋಟೆ ಭಾಯಿ ಗುಂಪನ್ನು ಹೋಲಿಸಿ ನೋಡಿದಾಗ ಛೋಟೆಭಾಯಿ ಗುಂಪಿಗಿಂತ ಬಡೇಭಾಯಿ ಗುಂಪಿನವರೆ ಹೆಚ್ಚಾಗಿ ಇನ್ನೂ ಬುಡಕಟ್ಟು ಆಚರಣೆಗಳನ್ನು ಆಚರಿಸುತ್ತಿದ್ದಾರೆ. ಇವರು ತಮ್ಮ ಮೂಲ ಅಸ್ತಿತ್ವದೊಂದಿಗೆ, ಇಸ್ಲಾಂ ಸಮುದಾಯದ ಒಂದು ಒಳ ಪಂಗಡವಾಗಿ ತಮ್ಮನ್ನು ಗುರುತಿಸಿಕೊಳ್ಳುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಆದರೂ ಇವರಲ್ಲಿ ಇನ್ನೂ ಬುಡಕಟ್ಟು ಲಕ್ಷಣಗಳನ್ನು ಕಾಣಬಹುದಾಗಿದೆ. ಹಾಗಾಗಿ ಇದೊಂದು ಇಸ್ಲಾಂ ಧರ್ಮವನ್ನು ಅನುಸರಿಸುತ್ತಿರುವ ಬುಡಕಟ್ಟು ಸಮುದಾಯವಾಗಿದೆ.

### ಭಾಷೆ ಮತ್ತು ಸಾಹಿತ್ಯ

ಚಪ್ಪರ್‌ಬಂದ್ ಸಮುದಾಯವು ಭಾಷೆ ಮತ್ತು ಸಾಹಿತ್ಯದಲ್ಲಿ ತನ್ನದೇ ಆದ ವಿಶೇಷತೆಯನ್ನು ಪಡೆದಿದೆ. ಇವರು ತಮ್ಮದೇ ಆದ ಪ್ರತ್ಯೇಕ ಭಾಷೆಯನ್ನು ರೂಪಿಸಿಕೊಂಡಿದ್ದಾರೆ. ವ್ಯವಹಾರಿಕವಾಗಿ ಮಾತಾಡಲು ಉರ್ದು, ಕನ್ನಡ ಭಾಷೆಯನ್ನು ಬಳಸುತ್ತಾರೆ. ಆದರೆ ಇವರ ಭಾಷೆಗೆ ಲಿಪಿ ಇಲ್ಲ. ಇವರು ತಮ್ಮದೇ ಭಾಷೆಯಲ್ಲಿ ಜಾನಪದ ಹಾಡುಗಳನ್ನು ಸಹ ಹಾಡುತ್ತಾರೆ.

### ಭಾಷೆ

ಭಾಷೆ ಎಂದರೆ "ಒಂದು ಸಮಾಜದಲ್ಲಿ ಜನರು ಆಡುವ ಮಾತು". ಭಾಷೆಯನ್ನು ಕುರಿತು ಪ್ಲೇಟೋ, "ಧನಿ ಸಂಕೇತಗಳಿಂದ ಮನುಷ್ಯನ ವಿಚಾರಗಳನ್ನು ಅಭಿವ್ಯಕ್ತಗೊಳಿಸುವ ಸಾಧನ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಪದಗಳ ಮೂಲಕ ವಿಚಾರಗಳನ್ನು ಅಭಿವ್ಯಕ್ತಗೊಳಿಸುವುದೇ ಭಾಷೆ ಎಂದು ಹೇಳಬಹುದು. ಪದಗಳ ಮುಖಾಂತರ ಮಾನವ ತನ್ನ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವುದೇ ಭಾಷೆ.

ಭಾಷೆ ಒಂದು ಸಂವಹನ ಪ್ರಕ್ರಿಯೆ, ಸಾಮಾಜಿಕ ಶ್ರೇಣಿಗಳಲ್ಲಿ ಕಾಲ, ದೇಶ, ಪರಿಸರಕ್ಕೆ, ಅನುಗುಣವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಲ್ಲ ಸಮರ್ಥ ಸಾಧನವಾಗಿದೆ. ಜಗತ್ತಿನಾದ್ಯಂತ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಭಾಷೆ ಭಿನ್ನತೆಯನ್ನು ಪಡೆದುಕೊಂಡಿದೆ. ಭಾಷೆ ಉಸಿರಿನಷ್ಟೇ ಸಹಜ ಹಾಗೂ ಅನಿವಾರ್ಯವಾಗಿದೆ, ಅದು ವ್ಯಕ್ತಿಯ ಭೌತಿಕ ಚಟುವಟಿಕೆ, ಅನಿಸಿಕೆ, ಅಭಿಪ್ರಾಯ, ಅನುಭವ, ಭಾವನೆ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುವ ಮಾಧ್ಯಮವಾಗಿದೆ.

ಭಾಷೆ ಮನುಷ್ಯನಿಗೆ ಅನುಕರಣೆಯಿಂದ ಲಭಿಸಿದ್ದು, ಭಾಷೆ ನಿರಂತರ ಪರಿವರ್ತನಾ ಶೀಲವಾದುದು. ಭಾಷೆಯು ಸದಾ ಹರಿಯುವ ನೀರಿನ ಹಾಗೆ, ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಭಾಷೆ ಬದಲಾಗುತ್ತದೆ. ಈ ಪರಿವರ್ತನಾಶೀಲತೆ ಭಾಷೆ ಬೆಳವಣಿಗೆಗೆ ಬಹು ಮುಖ್ಯವಾದುದು, ಈ ಗುಣ ಇಲ್ಲದಿದ್ದರೆ ಜಗತ್ತಿನಲ್ಲಿ ಇಂದು ಸಾವಿರಾರು ಭಾಷೆಗಳು, ಉಪಭಾಷೆಗಳು ಕಂಡುಬರುತ್ತಿರಲಿಲ್ಲ, ಭಾಷೆಗೆ ತನ್ನದೇ ಇತಿಹಾಸವಿರುತ್ತದೆ.

ಭಾಷೆಯು ಸಮಾಜದ ಎಲ್ಲಾ ಜೀವಂತ ನೈಜ ಚಟುವಟಿಕೆಯ ಮೂಲವಾಗಿದೆ. ಸಮಾಜದಿಂದ ವ್ಯಕ್ತಿಯನ್ನು, ವ್ಯಕ್ತಿಯಿಂದ ಭಾಷೆಯನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಸಮಾಜದ ಬೆಳವಣಿಗೆ ಹಾಗೂ ಬದಲಾವಣೆಗೆ ಭಾಷೆ ಅನಿವಾರ್ಯವಾಗಿದೆ, ಅಲ್ಲದೆ ಅದು ಸಮಾಜದ ಎಲ್ಲಾ ಅಂಶಗಳೊಡನೆ ಸಮ ಪ್ರಮಾಣದಲ್ಲಿ ಮಿಳಿತಗೊಂಡು ಅದು ಪೀಳಿಗೆಯಿಂದ ಪೀಳಿಗೆಗೆ ವ್ಯಕ್ತಿಯ ಲೋಕರೂಢಿಗಳು, ನೀತಿನಿಯಮಗಳು, ಸಂಪ್ರದಾಯಗಳು, ಪರಂಪರೆಗಳ ಅಂಶಗಳು ಆಯಾ ಸಮುದಾಯಗಳಲ್ಲಿ ಉಳಿಸಿಕೊಂಡು ಬರಲು ಸಹಾಯಕವಾಗಿದೆ. ಜಗತ್ತಿನಾದ್ಯಂತ ಇರುವ ಬುಡಕಟ್ಟು ಸಮುದಾಯಗಳಲ್ಲಿ ಅವರದೇ ಆದ ಭಾಷೆಯನ್ನು ಗುರುತಿಸಬಹುದು.

ಚಪ್ಪರ್‌ಬಂದ್ ಸಮುದಾಯ ಸಹ ಬುಡಕಟ್ಟು ಮೂಲವಾದ್ದರಿಂದ ಅದೂ ತನ್ನದೇ ಆದ ಪ್ರತ್ಯೇಕ ಭಾಷೆಯನ್ನು ಹೊಂದಿದೆ. ಈ ಸಮುದಾಯದ ಭಾಷೆಯ ಬಗ್ಗೆ ಅನೇಕ ಅಧ್ಯಯನಕಾರರು ವಿವಿಧ ರೀತಿಯ ಅಭಿಪ್ರಾಯಗಳನ್ನು ತಿಳಿಸಿದ್ದಾರೆ.

- ಈಟನ್ ಅಭಿಪ್ರಾಯದಂತೆ, "ಚಪ್ಪರ್‌ಬಂದರು ಉರ್ದು ಮಿಶ್ರಿತ ಮರಾಠಿ ಭಾಷೆಯನ್ನು ಮಾತನಾಡುತ್ತಾರೆ" (ಹುದ್ದಾರ್,:೧೯೯೫:೫೧).
- ೧೮೮೪ ಬಾಂಬೆ ಗೆಝೆಟಿಯರ್‌ನಲ್ಲಿ ತಿಳಿಸಿರುವಂತೆ, "ಚಪ್ಪರ್‌ಬದರು ಗುಜರಾತಿ ಮಿಶ್ರಿತ ಹಿಂದುಸ್ತಾನಿ ಭಾಷೆಯನ್ನು ಮಾತನಾಡುತ್ತಾರೆ" (ಅದೇ:೫೧).
- ಲೆಮರ್‌ಚಂದ್ ಹೇಳಿರುವಂತೆ, "ಪೂರ್ವ ಭಾರತದ ಪ್ರದೇಶಗಳಲ್ಲಿ ಚಪ್ಪರ್‌ಬಂದರು ತಮ್ಮದೇ ಸಮುದಾಯದ ಪ್ರಾಂತೀಯ ಹಿಂದೂಸ್ತಾನಿ ಭಾಷೆಯನ್ನು ಹೊಂದಿದ್ದರು" (ಅದೇ:೫೧).
- ಅಲೆಕ್ಸಾಂಡರ್ ಅಭಿಪ್ರಾಯದಂತೆ, "ಅವರು ಭಾಷೆ ಮರಾಠಿಯಾಗಿದ್ದು, ಪರ್ಯಾಯವಾಗಿ ತಮ್ಮದೇ ಆದ ವಿಶಿಷ್ಟ ಮರಗು ಭಾಷೆಯನ್ನು ಹೊಂದಿದ್ದರು" (ಅದೇ:೫೧).
- ಕೆನಡಿ ಹೇಳಿದಂತೆ, "ಅವರು ಪೂರ್ವಭಾರತದ ಪ್ರದೇಶಗಳಲ್ಲಿ ತಮ್ಮದೇ ಆದಂತಹ ವಿಶಿಷ್ಟವಾದ ಪ್ರಾಂತಿಯ ಹಿಂದೂಸ್ತಾನಿ ಭಾಷೆಯನ್ನು ಹೊಂದಿದ್ದರು" (ಕೆನಡಿ:೧೯೦೮:೫೩).
- ಡೇಲೆ ಹೇಳುವಂತೆ, "ತಮ್ಮದೇ ಆದ ಮರಗು ಭಾಷೆಯನ್ನೊಳಗೊಂಡ ಮಾರಾಠಿ ಅವರ ಮೂಲ ಭಾಷೆಯಾಗಿದ್ದು, ಅವರು ಪ್ರಯಾಣದ ಸಂದರ್ಭದಲ್ಲಿ ಆಯಾ ಪ್ರಾಂತೀಯ ಭಾಷೆಗಳನ್ನು ಸುಲಭವಾಗಿ ಕಲಿಯುತ್ತಿದ್ದರು, (ಹುದ್ದಾರ್:೧೯೯೫:೫೧).
- ಸಿಂಗ್ ಕೆ ಎಸ್ ಹೇಳುವಂತೆ, "The chappareband Speak a dialet of Bihari among themselves, They speak Dakkani Urdu when conversing with other Muslims, They are also well versed in kannada. Kannada and Arabic scripts are used" (ಸಿಂಗ್ ಕೆ ಎಸ್:೨೦೦೩:೩೭೧).
- ಗುನ್‌ಥೋರ್‌ಪೆ ಹೇಳುವಂತೆ, "Hindustani is spoken with a strong canarese accent, and in the usual Fakir style. In addressing women "Mai '(mother), and men "Data", is uttered in a more than ordinarily cringing manner" (ಗುನ್‌ಥ್ರೋಪೆ:೭೪).

ಮೇಲೆ ತಿಳಿಸಿದ ಮಾಹಿತಿಯ ಪ್ರಕಾರ "ಚಪ್ಪರ್‌ಬಂದ್ ಭಾಷೆ"ಯ ಬಗ್ಗೆ ಯಾವುದೇ ನಿಖರ ಅಭಿಪ್ರಾಯವಿಲ್ಲದಿರುವುದು ತಿಳಿದುಬರುತ್ತದೆ, ಈ ಸಮುದಾಯ ಸೈನಿಕರಿಗೆ ಗುಡಿಸಲುಗಳನ್ನು

ನಿರ್ಮಿಸುವ ಸಲುವಾಗಿ ಮಹಮದ್‌ನ ಸೈನ್ಯದ ಜೊತೆ ವಿವಿಧ ಪ್ರದೇಶಗಳಿಗೆ ಸ್ಥಳಾಂತರಗೊಂಡಿತು. ಇವರು ತಮ್ಮ ಪ್ರಯಾಣದ ವೇಳೆ ಸ್ಥಳೀಯ ಭಾಷೆಗಳನ್ನು ಸುಲಭವಾಗಿ ಕಲಿಯುತ್ತಿದ್ದರು. ಇವರು ಹಿಂದಿ, ಗುಜರಾತಿ, ಮರಾಠಿ, ಕನ್ನಡ ಮತ್ತು ಉರ್ದು ಭಾಷೆಗಳನ್ನು ತಿಳಿದವರಾಗಿದ್ದರು. ಯುದ್ಧಗಳು ಕೊನೆಗೊಂಡಾಗ ಇವರು ನಿರಾಶ್ರಿತರಾಗಿ ನಾಣ್ಯಗಳನ್ನು ತಯಾರಿಸಲು ಆರಂಭಿಸಿದರು. ಆ ನಾಣ್ಯಗಳನ್ನು ಚಲಾವಣೆ ಮಾಡುವ ಸಂದರ್ಭದಲ್ಲಿ ಇವರು ಹಿಂದುಸ್ತಾನಿ, ಗುಜರಾತಿ, ಮಾರಾಠಿ, ಕನ್ನಡ ಮತ್ತು ಉರ್ದು ಪದಗಳನ್ನ ಸೇರಿಸಿಕೊಂಡು ತಮ್ಮದೇ ಆದ ಮರಗು ಭಾಷೆಯನ್ನು ಬಳಸಲು ಶುರುಮಾಡಿದರು. ಇದೇ ಮುಂದೆ "ಚಪ್ಪರ್‌ಬಂದ್ ಭಾಷೆ"ಯಾಗಿ ರೂಪಗೊಂಡಿತು. ಇದು ಕೇವಲ ಆಡು ಭಾಷೆ ಮಾತ್ರ, ಇದಕ್ಕೆ ಲಿಪಿ ಇಲ್ಲ. ಕನ್ನಡ ಮತ್ತು ಉರ್ದು ಭಾಷೆಯನ್ನು ಲಿಪಿಯಾಗಿ ಬಳಸುತ್ತಾರೆ. ಕರ್ನಾಟಕದ ಚಪ್ಪರ್‌ಬಂದರು ವ್ಯವಹಾರಿಕವಾಗಿ ಕನ್ನಡ ಮಾತನಾಡಿದರೂ, ತಮ್ಮ ಸಮುದಾಯದವರೊಂದಿಗೆ ಮಾತನಾಡಲು 'ಚಪ್ಪರ್‌ಬಂದ್ ಭಾಷೆ'ಯನ್ನೇ ಮಾತನಾಡುತ್ತಾರೆ, ಇಂದಿಗೂ ಇವರಲ್ಲಿ ಈ ಭಾಷೆ ಜೀವಂತವಾಗಿರುವುದು ಕಂಡುಬರುತ್ತದೆ. ಪ್ರಸ್ತುತ ಈ ಸಮುದಾಯದವರನ್ನು ಇವರ ಭಾಷೆಯಿಂದ ಮಾತ್ರ ಗುರುತಿಸ ಬಹುದುದಾಗಿದೆ, ಇವರು 'ತೂ'(ನೀನು) ಎಂಬುದಕ್ಕೆ, 'ತೆ' ಎಂದು, 'ತೇರಾ'(ನಿನ್ನದು) ಎಂಬುದಕ್ಕೆ, 'ತೋರಾ' ಎಂದು ಮತ್ತು 'ಮೇರಾ'(ನನ್ನದು) ಎಂಬುದಕ್ಕೆ 'ಮೋರಾ' ಎಂದು ಮಾತಾಡುತ್ತಾರೆ.

ತಾವು ಮಾತನಾಡುವುದು ಬೇರೆ ಯಾರಿಗೂ ಅರ್ಥವಾಗಬಾರದು ಎಂಬ ಉದ್ದೇಶದಿಂದಲೇ ಇವರು ಈ ಭಾಷೆಯನ್ನು ರೂಪಿಸಿಕೊಂಡರು ಎಂದು ಹೇಳಬಹದು. ಚಪ್ಪರ್‌ಬಂದ್ ಭಾಷೆಯ ಪದಗಳನ್ನು, ಅವುಗಳ ಆಂಗ್ಲ ಮತ್ತು ಕನ್ನಡ ಅರ್ಥಗಳ ಪದಕೋಶವನ್ನು ಅನುಬಂಧದಲ್ಲಿ ನೀಡಲಾಗಿದೆ.

ಚಪ್ಪರ್‌ಬಂದ್ ಸಮುದಾಯದ ಎರಡೂ ಗುಂಪಿನವರು ಮನೆಯಲ್ಲಿ 'ಚಪ್ಪರ್‌ಬಂದ್ ಭಾಷೆ'ಯನ್ನು ಮಾತನಾಡುತ್ತಾರೆ, ಹೊರಗಡೆ ಉರ್ದು, ಕನ್ನಡ ಭಾಷೆಯನ್ನು ಮಾತಾಡುತ್ತಾರೆ. ಇವರ ಭಾಷೆಯನ್ನು ಉಳಿಸುವ ಅವಶ್ಯಕತೆ ತುಂಬಾನೆ ಇದೆ ಎಂದು ಹೇಳಬಹುದು.

**ಸಾಹಿತ್ಯ**

ಸಾಮಾನ್ಯವಾಗಿ ಸಾಹಿತ್ಯದಲ್ಲಿ ನಾವು ಎರಡು ಬಗೆಗಳನ್ನು ನೋಡುತ್ತೇವೆ. ಒಂದು ಅಕ್ಷರಗಳಲ್ಲಿ ರಚಿತವಾದ ಶಿಷ್ಟ ಸಾಹಿತ್ಯವಾದರೆ, ಇನ್ನೊಂದು ಮೌಖಿಕ ಜಾನಪದ ಸಾಹಿತ್ಯ. ಜಾನಪದ ಸಾಹಿತ್ಯ ಗ್ರಾಮೀಣ ಜನ ಸಾಮಾನ್ಯರಿಂದ ಮೂಡಿ ಬಂದ ಸಾಹಿತ್ಯವಾಗಿದೆ. ಜಾನಪದ ಸಾಹಿತ್ಯಕ್ಕೆ ಬುಡಕಟ್ಟು ಸಮುದಾಯಗಳ ಕೊಡುಗೆ ಅಪಾರವಾದುದು. ಅವರ ಬದುಕೇ ಜಾನಪದ ಸಾಹಿತ್ಯದಲ್ಲಿರುತ್ತದೆ. ಜೀವನದ ಪ್ರತಿಯೊಂದು ಅನುಭವವನ್ನು ಬುಡಕಟ್ಟು

ಸಮುದಾಯಗಳು ಜಾನಪದ ಸಾಹಿತ್ಯದ ಮೂಲಕವೇ ಬಿಂಬಿಸುತ್ತಿದ್ದರು. ಹಾಗೆಯೇ ಚಪ್ಪರ್‌ಬಂದ್ ಸಮುದಾಯವೂ ಕೂಡ ತನ್ನಲ್ಲಿ ಜಾನಪದ ಸಾಹಿತ್ಯವನ್ನು ಹುದುಗಿಟ್ಟುಕೊಂಡಿದೆ. ಇವರ ಸಾಹಿತ್ಯದಲ್ಲಿ ನಾವು ಜಾನಪದ ಹಾಡುಗಳನ್ನು, ಕಥೆಗಳನ್ನು ಕಾಣಬಹುದು.

**ಜಾನಪದ ಹಾಡುಗಳು**

ಇದೊಂದು ಅಲೆಮಾರಿ ಸಮುದಾಯವಾಗಿತ್ತು. ಇವರು ಹಳ್ಳಿಯಿಂದ ಹಳ್ಳಿಗೆ ಸಂಚರಿಸುತ್ತಾ, ಭಿಕ್ಷೆ ಬೇಡುತ್ತಿದ್ದ ಸಂದರ್ಭದಲ್ಲಿ, ಮದುವೆಗಳಲ್ಲಿ, ಋತುಮತಿ ಸಂದರ್ಭಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಜಾನಪದ ಹಾಡುಗಳನ್ನು ಹಾಡುತ್ತಿದ್ದರು.

೧

ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೧. ಮೋರಾ ಅಂಗನ ಮೆ ನದ್ದಿ ಔರ ನಾರಾ ॥
ನಾವನ ಕರೀಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೨. ಮೋರಾ ಅಂಗನ ಮೆ ಲಿಂಬುಕಾ ಜಾಡ್ ಹೈ ॥
ಲಿಂಬು ಕಾಟಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೩. ಮೋರಾ ಅಂಗನ ಮೆ ಮೆಹಂದಿ ಕಾ ಜಾಡ್ ಹೈ ॥
ಮೆಹಂದಿ ಲಗಾಯಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೪. ಮೋರಾ ಅಂಗನ ಮೆ ಸುರಮಾ ಕಾ ದುಖಾನ ಹೈ ॥
ಸುರಮಾ ಲಗಾಯಿಸ್ಸೇ ಮೋರಾ ಬಾಷಾ ರೇ

ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೫. ಮೋರಾ ಅಂಗನ ಮೆ ಅತ್ತರ್ ಕಾ ದುಖಾನ ಹೈ ॥
ಅತ್ತರ್ ಲಗಾಯಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೬. ಮೋರಾ ಅಂಗನ ಮೆ ಫೂಲ್ ಕಾ ಜಾಡ್ ಹೈ ॥
ಸೇರಾ ಪೇರಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೭. ಮೋರಾ ಅಂಗನ ಮೆ ಪಾನ ಕಾ ಜಾಡ್ ಹೈ ॥
ಪಾನ ಖಾಯಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

೮. ಮೋರಾ ಅಂಗನ ಮೆ ಖೇರಾ ಕಾ ಜಾಡ್ ಹೈ ॥
ತಂಬಾಕ ಬರಾಯಿಸ್ಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥
ಟೋಪಿ ಪೇರಿಸೇ ಮೋರಾ ಬಾಷಾ ರೇ
ಮಕಮಲಕಿ ಟೋಪಿ ॥

**ಸಾರಾಂಶ:** ಈ ಹಾಡನ್ನು ಮೊಹರಂ ಆಚರಣೆಯ ಸಂದರ್ಭದಲ್ಲಿ ಹಾಡುತ್ತಾರೆ. ಮೊಹರಂನಲ್ಲಿ ಕೂರಿಸುವ ಪಂಜೆಗಳಿಗೆ(ಮನೆ ದೇವರು) ಮಕ್ಮಲ್ ಬಟ್ಟೆಯ ಟೋಪಿ ಕಾಕಿ, ಫೂಲ್(ಹೂವು), ಮೆಹಂದಿ(ಮದರಂಗಿ), ಅತ್ತರ್(ಸುಗಂಧದ್ರವ್ಯ), ಸುರ್ಮಾ(ಕಾಡಿಗೆ), ಲಿಂಬೂ(ನಿಂಬೆಹಣ್ಣು), ಪಾನ್(ವಿಳ್ಯದೆಲೆ) ಇತ್ಯಾದಿ ವಸ್ತುಗಳನ್ನು ನಿನಗೆ ನೀಡುತ್ತೇವೆ, ನಮ್ಮ

ಬೇಡಿಕೆಯನ್ನು ನೆರವೇರಿಸು ದೇವರೆ ಎಂದು ಈ ಸಮುದಾಯದವರು ಈ ಹಾಡಿನ ಮೂಲಕ ಬೇಡಿಕೊಳ್ಳುತ್ತಾರೆ.

೨

ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ ॥

೧. ಗುಂಗೂರವಾಲಾ ಕುಂವಾ ಮೆ ಚುನ್ನಾವಾಲಾ ಉತರಾ ॥
ಹೋಯ್ ಮೋರಾ ನಾನಾ ಗುಮೂಜ್ ಲೀಪಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೨. ಗುಂಗೂರವಾಲಾ ಕುಂವಾ ಮೆ ರಂಗಾವಾಲಾ ಉತರಾ ॥
ಹೋಯ್ ಮೋರಾ ನಾನಾ ದರಗಾ ಲೀಪಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೩. ಗುಂಗೂರವಾಲಾ ಕುಂವಾ ಮೆ ಲಿಂಬುವಾಲಾ ಉತರಾ ॥
ಹೋಯ್ ಮೋರಾ ನಾನಾ ಲಿಂಬು ಕಾಟಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೪. ಗುಂಗೂರವಾಲಾ ಕುಂವಾ ಮೆ ಸಂದಲವಾಲಾ ಉತರಾ ॥
ಹೋಯ್ ಮೋರಾ ನಾನಾ ಸಂದಲ ಚಡಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೫. ಗುಂಗೂರವಾಲಾ ಕುಂವಾ ಮೆ ತೇಲವಾಲಾ ಉತರಾ ॥
ಹೋಯ್ ಮೋರಾ ನಾನಾ ಚಿರಾಕ ಲಗಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೬. ಗುಂಗೂರವಾಲಾ ಕುಂವಾ ಮೆ ಊದವಾಲಾ ಉತರಾ ॥
ಹೋಯ್ ಮೋರಾ ನಾನಾ ಊದ್ ಮಲ್ಲೇಸೆ ॥

ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೭. ಗುಂಗೂರವಾಲಾ ಕುಂವಾ ಮೆ ಸಕ್ಕರವಾಲಾ ಉತರಾ ॥
ಹೋಯ್ ಮೋರಾ ನಾನಾ ಸಕ್ಕರ ಚಡಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೮. ಗುಂಗೂರವಾಲಾ ಕುಂವಾ ಮೆ ಮನ್ನತ್‌ವಾಲಾ ಉತರಾ ॥
ಹೋಯ್ ಮೋರಾ ನಾನಾ ಢೇಗಾ ಚಡಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೯. ಗುಂಗೂರವಾಲಾ ಕುಂವಾ ಮೆ ಫೂಲ್‌ವಾಲಾ ಉತರಾ ॥
ಹೋಯ್ ಮೋರಾ ನಾನಾ ಫೂಲ್ ಚಡಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

೧೦. ಗುಂಗೂರವಾಲಾ ಕುಂವಾ ಮೆ ವಣ್ಣಾವಾಲಾ ಉತರಾ ॥
ಹೋಯ್ ಮೋರಾ ನಾನಾ ಝುಂಡಾ ಚಡಾಲೇಸೆ ॥
ಲಕ್ಷ್ಮೇಶ್ವರ ಕಾ ನಾನಾ ಗುಂಗೂರವಾಲಾ ಕುಂವಾ ಮೆ
ಮೋರಾ ದೂದ್ದೂ ನಾನಾ ಗುಂಗೂರವಾಲಾ ಕುಂವಾ ಮೆ

ಗುಂಗೂರವಾಲಾ ಕುಂವಾ ಮೆ
ಗುಂಗೂರವಾಲಾ ಕುಂವಾ ಮೆ
ಗುಂಗೂರವಾಲಾ ಕುಂವಾ ಮೆ ದೂದ್ದೂ ನಾನಾ ಉತರ ॥
ಹೋಯ್ ಮೋರಾ ನಾನಾ ಕರಾಮತ ದಿಕಾಲೇಸೆ ॥

**ಸಾರಾಂಶ:** ಗದಗ ಹತ್ತಿರ ಲಕ್ಷ್ಮೇಶ್ವರನಲ್ಲಿ ಒಂದು ದರ್ಗಾ ಇದೆ. ಅಲ್ಲಿ ಸಯ್ಯದ್ ಸುಲೇಮಾನ್ ಉರ್ಫ್ ದೂದ್ ನಾನಾ ಅವರ ಸಮಾಧಿ ಇದೆ. ಅವರ ಪವಾಡ ಮಹತ್ವದಾಗಿದ್ದು, ಅವರ ಮಹಿಮೆಯನ್ನು ಸ್ಮರಿಸಿಕೊಳ್ಳುತ್ತಾ ಈ ಹಾಡನ್ನು ಹಾಡುತ್ತಾರೆ. ಮತ್ತೆ ಅವರ ಸಮಾಧಿಯನ್ನು ಹೇಗೆ ಸಿಂಗಾರ ಮಾಡಲಾಗುತ್ತದೆ ಎಂಬುದನ್ನು ಇಲ್ಲಿ ಹೇಳಲಾಗಿದೆ.

೩

ಏ ಗಟ್ಟ ಜಾನ ಕರಕೇ ಏಕ ಬಾತ ಕೇತಾ
ಸುನೋ ಮೋರೆ ಬಾತಾಲೆ ತುಮ್ ॥

ಸತ್ತರ ಬರಸೇ ಹಮ್ ಚುಪ್ಪೆ ಬೈಸಗೇ
ಸರ್ಕಾರಕಾ ಸೌಲತ್ತ ಹಮ್ ನೈ ಲೀನ ॥

೧. ಕತ್ರಾ ಗುಂದ್ರಿ ಸೀತೆ ಬೈಸಗೀ
ತೋರಾ ಬಾತುಗು ಧರಲೀನ ಏ ॥
ಲರಕಾ–ಮೇರಿ ಗೊ ಚೋಡಕೆ ಚಲಗಾ
ಏಕಲಿ ಬೇಗಿ ಭುತಾನಿಯೇ.... ॥

೨. ಗುರಿಯಾ–ಗುರ್ದಾ, ಕಲಿಜಾ–ಬೇಜಾ
ಪೆಪ್ಸಾ ತಿಲ್ಲಿ ಹೇರಾ ದೇಕ ॥
ಖಾತೇ ಬೈಸಗೇ ಬಾತಾಲೇ ಹಮ್
ಚಪ್ಪರಾ ಮೇ ರತೇತೆ ಚಪ್ಪರಬಂದ ಬೇಗೆ ॥

೩. ಯಾಯಿ–ಬಾಪು ಬುವ್ವಾ–ಪುಪ್ಪಾ
ಖಾಲಾ–ಖಾಲೂ ಖೇತಿ ಹಮ್ ॥
ನುಕರಾ–ನುಕರಿ, ನಮ್ತಾ–ನಮ್ತಿ
ಯಾ ಹಮರಿ ಬಾತಾಲಿ ಬಾತ ಹೈ ದೇಕ ॥

**ಸಾರಾಂಶ:** ಇದು ಸಂಘಟನೆಯ ಹಾಡಾಗಿದೆ. ಭಾರತ ಸ್ವತಂತ್ರಗೊಂಡು ೭೦ ವರ್ಷವಾದರೂ ನಾವು ಯಾವುದೇ ರೀತಿಯ ಸರ್ಕಾರಿ ಸೌಲಭ್ಯಗಳನ್ನು ಪಡೆಯಲಾಗುತ್ತಿಲ್ಲ ಎಂದು ಈ ಹಾಡಿನ ಮೂಲಕ ಹೇಳುತ್ತಿದ್ದಾರೆ. ನಾವು ಚಪ್ಪರಬಂದರು ಚಪ್ಪರದಲ್ಲಿದ್ದೇವೆ ಹಾಗೂ ನಾವು ನಮ್ಮದೇ ಆದ ಪ್ರತ್ಯೇಕ ಬಾತಾಲಿ ಭಾಷೆಯನ್ನು ಹೊಂದಿದ್ದೇವೆ ಎಂದು ಹೇಳುವುದೇ ಈ ಹಾಡಿನ ಸಾರಾಂಶವಾಗಿದೆ. ಚಪ್ಪರ್‌ಬಂದ್ ಸಮುದಾಯ ತಾವು ಬಳಸುವ ಉಡುಗೆ–ತೊಡುಗೆ, ಆಹಾರ ಪದ್ಧತಿ, ಭಾಷೆ ಕುರಿತು ಹೇಳುವುದು ಇದರ ಸಾರವಾಗಿದೆ.

೪

ಖಾತಾ ಮೈ ಪಗಾಲೇಕೆ
ಸುತ್ತಾ ಮೈ ಚಿಚಾಲೇಕೆ
ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೧. ದಾನಾ ಲೇಕೆಯಾ ಲೂಟಸೇ
ಟೊಂಬ್ರಾ ಕುಟುನು ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೨. ಚಾವರ ಲೇಕೆಯಾ ದುಖಾನಸೇ
ಪಕಾಕೆ ಖಾನೊ ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೩. ಹೇರಾ ಲೇಕೆಯಾ ಕಸಾಯಿಸೇ
ಚಟ್ನಿ ಕರನೊ ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೪. ಸಕ್ಕರ ಲೇಕೆಯಾ ದುಖಾನಸೇ
ಚಾ ಪಗಾನೊ ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೫. ಟಲಿಯಾ ಲೇಕೆಯಾ ಬಜಾರಸೇ
ಪಾನಿ ಬರನೊ ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

೬. ಸಾಬೂನ ಲೇಕೆಯಾ ದುಖಾನಸೇ
ವಣ್ಣಾ ದೋನೊ ಆತಸೇ
ಏ... ಎಣಕಿ ಮೇರಿ ಆಯಿ ಮೊಗೋ ಮನೆ ಮೊಗೋ ಮನೆ ॥

**ಸಾರಾಂಶ:** ಹೊಸದಾಗಿ ಮದುವೆಯಾದ ಪುರುಷ ತನ್ನ ಹೆಂಡತಿ ಮನೆಗೆ ಬಂದಿದ್ದು ಮನೆಯ ಎಲ್ಲಾ ಕೆಲಸಗಳನ್ನು ಮಾಡುತ್ತಾಳೆ, ಎಲ್ಲಾ ರೀತಿಯ ಅಡುಗೆಯನ್ನು ಮಾಡುತ್ತಾಳೆ ಎಂದು ಕನಸು ಕಂಡಿರುತ್ತಾನೆ, ಆದರೆ ಅವನ ಪತ್ನಿ ಇದಕ್ಕೆ ವಿರುದ್ಧವಾಗಿರುತ್ತಾಳೆ. ತನ್ನ ಹಣೆಬರಹ ಹೇಗಾಗಿದೆ ಎಂದು ನೆನೆಯುತ್ತಾ ಪತಿ ಈ ಹಾಡನ್ನು ಹಾಡುತ್ತಾನೆ.

**೫**

೧. ಏಕಲಿ ಮಾಂಗತಿ ದಂಡಿಯಾಗೊ ಪೈಸಾ
ದುಸರಿ ಮಾಂಗತಿ ಚೂಡಿದಾರಗೋ ಪೈಸಾ
ಮೋಗೋ ಬನೀನ ಹೈನಾ ಖಾಲಾ
ಮೈ ದೋ ಮೇರಿ ವಾಲಾ

ಮ್ಯೆತೋ ಗರೀಬ ಕಾ ಲಂಡವಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮೋರಾ ಕಮಾಯಿ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ

೨. ಏಕಲಿ ಮಾಂಗತಿ ಪಲಂಗಗೋ ಪೈಸಾ
ದಸರಿ ಮಾಂಗತಿ ಗಾದಿಗೋ ಪೈಸಾ
ಮೋಗೋ ಗುಂದ್ರಿ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮ್ಯೆತೋ ಗರೀಬ ಕಾ ಲಂಡವಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮೋರಾ ಕಮಾಯಿ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ

೩. ಏಕಲಿ ಮಾಂಗತಿ ಗೌಂವಗೋ ಪೈಸಾ
ದುಸರಿ ಮಾಂಗತಿ ದಾನಾಗೋ ಪೈಸಾ
ಮೋಗೋ ಚಾವರ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮ್ಯೆತೋ ಗರೀಬ ಕಾ ಲಂಡವಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮೋರಾ ಕಮಾಯಿ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ

೪. ಏಕಲಿ ಮಾಂಗತಿ ಹೇರಾಗೋ ಪೈಸಾ
ದುಸರಿ ಮಾಂಗತಿ ಮಚ್ಚಿಗೋ ಪೈಸಾ
ಮೋಗೋ ದಾಲ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮ್ಯೆತೋ ಗರೀಬ ಕಾ ಲಂಡವಾ ಖಾಲಾ
ಮ್ಯೆ ದೋ ಮೇರಿ ವಾಲಾ
ಮೋರಾ ಕಮಾಯಿ ಹ್ಯೆನಾ ಖಾಲಾ
ಮ್ಯೆ ದೋ ಮೇರಿ ವಾಲಾ

**ಸಾರಾಂಶ:** ಇಬ್ಬರು ಪತ್ನಿಯರನ್ನು ಹೊಂದಿರುವ ಗಂಡನು ಈ ಹಾಡಿನ ಮೂಲಕ ಯಾವ ರೀತಿಯಲ್ಲಿ ತನಗೆ ತನ್ನ ಪತ್ನಿಯರು ಕಾಡುತ್ತಾರೆ ಎಂಬುದನ್ನು ಹೇಳುತ್ತಾನೆ. ಒಬ್ಬಳು ಸೀರೆಗೆ ಹಣ ಕೇಳಿದರೆ, ಇನ್ನೊಬ್ಬಳು ಚೂಡಿದಾರ್ ಗೆ ಹಣ ಕೇಳುತ್ತಾಳೆ. ಒಬ್ಬಳು ಮಂಚ ಬೇಕೆಂದರೆ, ಇನ್ನೊಬ್ಬಳು ಗದ್ದಿಗೆ ಬೇಕೆನ್ನುತ್ತಾಳೆ. ಒಬ್ಬಳು ಮಾಂಸ ಬೇಕೆಂದರೆ, ಇನ್ನೊಬ್ಬಳು ಮೀನು ಬೇಕೆನ್ನುತ್ತಾಳೆ. ಆದರೆ ನಾನು ಬಡವ ಇವರಿಬ್ಬರನ್ನು ಹೇಗೆ ಸಂಭಾಳಿಸಲಿ ಎಂದು ಹಾಡಿನ ಮೂಲಕ ತನ್ನ ಗೋಳನ್ನು ಹೇಳುತ್ತಿದ್ದಾನೆ.

೬

೧. ದುಲ್ಲಾ ಮೋರಾ ರುಸಗಾ ಮಾ
ದುಲ್ಲಾ ಮೋರಾ ರುಸಗಾ ಮಾ
ವಾ ಪಣಜಿ ಮೆ ಜಾಕೆ ಬೈಸಗಾ ಮಾ ॥
ಕಹಾ ಬೈಸಗಾ ಮಾ ವಾ...
ವಾ ಚಿಮಲಾ ಮೆ ಜಾಕೆ ಬೈಸಗಾ ಮಾ ॥
ಉಗೊ ಸಮಜಾಕೆ, ಉಗೊ ಮನಾಕೆ ಸಂದಲ್ ಲಗಾಕೆ ದೇಕುನೊ ಮಾ

೨. ದುಲ್ಲಾ ಮೋರಾ ರುಸಗಾ ಮಾ
ದುಲ್ಲಾ ಮೋರಾ ರುಸಗಾ ಮಾ
ವಾ ಅಮರನಾಥ ಮೆ ಜಾಕೆ ಬೈಸಗಾ ಮಾ ॥
ಕಹಾ ಬೈಸಗಾ ಮಾ ವಾ...
ವಾ ದುಬೈಗಲ್ಲಿಮೆ ಮೆ ಜಾಕೆ ಬೈಸಗಾ ಮಾ ॥
ಉಗೊ ಸಮಜಾಕೆ, ಉಗೊ ಮನಾಕೆ ಮೆಹಂದಿ ಲಗಾಕೆ ದೇಕುನೊ ಮಾ

೩. ದುಲ್ಲಾ ಮೋರಾ ರುಸಗಾ ಮಾ
ದುಲ್ಲಾ ಮೋರಾ ರುಸಗಾ ಮಾ
ವಾ ಪೂನಾ ಮೆ ಜಾಕೆ ಬೈಸಗಾ ಮಾ ॥
ಕಹಾ ಬೈಸಗಾ ಮಾ ವಾ...
ವಾ ಯರೋಡಾ ಮೆ ಜಾಕೆ ಬೈಸಗಾ ಮಾ ॥
ಉಗೊ ಸಮಜಾಕೆ, ಉಗೊ ಮನಾಕೆ ಹರದ ಲಗಾಕೆ ದೇಕುನೊ ಮಾ

೪. ದುಲ್ಲಾ ಮೋರಾ ರುಸಗಾ ಮಾ
ದುಲ್ಲಾ ಮೋರಾ ರುಸಗಾ ಮಾ

ವಾ ಸೊಲ್ಲಾಪುರ ಮೆ ಜಾಕೆ ಬೈಸಗಾ ಮಾ ॥

ಕಹಾ ಬೈಸಗಾ ಮಾ ವಾ...

ವಾ ಸಲಗರವಸ್ತಿ ಮೆ ಜಾಕೆ ಬೈಸಗಾ ಮಾ ॥

ಉಗೊ ಸಮಜಾಕೆ, ಉಗೊ ಮನಾಕೆ ತೇಲ ಲಗಾಕೆ ದೇಕುನೊ ಮಾ

೫. ದುಲ್ಲಾ ಮೋರಾ ರುಸಗಾ ಮಾ

ದುಲ್ಲಾ ಮೋರಾ ರುಸಗಾ ಮಾ

ವಾ ಬಿಜಾಪುರ ಮೆ ಜಾಕೆ ಬೈಸಗಾ ಮಾ ॥

ಕಹಾ ಬೈಸಗಾ ಮಾ ವಾ...

ವಾ ಗೋಳಗುಮ್ಮಟ ಕಾ ಸುಮ್ಮೆ ಬೈಸಗಾ ಮಾ ॥

ಉಗೊ ಸಮಜಾಕೆ, ಉಗೊ ಮನಾಕೆ ಆಂಗನ ಲಾಗೋ ಬಸಾನೂ ಮಾ

೬. ದುಲ್ಲಾ ಮೋರಾ ರುಸಗಾ ಮಾ

ದುಲ್ಲಾ ಮೋರಾ ರುಸಗಾ ಮಾ

ವಾ ಬಾಗಲಕೋಟ ಮೆ ಜಾಕೆ ಬೈಸಗಾ ಮಾ ॥

ಕಹಾ ಬೈಸಗಾ ಮಾ ವಾ...

ವಾ ದಂಡಿಯಾಕೀ ಫ್ಯಾಕ್ಟ್ರೀ ಮೆ ಜಾಕೆ ಬೈಸಗಾ ಮಾ ॥

ಉಗೊ ಸಮಜಾಕೆ, ಉಗೊ ಮನಾಕೆ ವಣ್ಣಾ ಪೀರಾಕೆ ದೇಕುನೊ ಮಾ

೭. ದುಲ್ಲಾ ಮೋರಾ ರುಸಗಾ ಮಾ

ದುಲ್ಲಾ ಮೋರಾ ರುಸಗಾ ಮಾ

ವಾ ಧಾರವಾಡ ಮೆ ಜಾಕೆ ಬೈಸಗಾ ಮಾ ॥

ಕಹಾ ಬೈಸಗಾ ಮಾ ವಾ...

ವಾ ಜನ್ನತ್ ನಗರ ಮೆ ಜಾಕೆ ಬೈಸಗಾ ಮಾ ॥

ಉಗೊ ಸಮಜಾಕೆ, ಉಗೊ ಮನಾಕೆ ಸೇರಾ ಪೀರಾಕೆ ದೇಕುನೊ ಮಾ

೮. ದುಲ್ಲಾ ಮೋರಾ ರುಸಗಾ ಮಾ

ದುಲ್ಲಾ ಮೋರಾ ರುಸಗಾ ಮಾ

ವಾ ಗದಗ ಮೆ ಜಾಕೆ ಬೈಸಗಾ ಮಾ ॥

ಕಹಾ ಬೈಸಗಾ ಮಾ ವಾ...

ವಾ ಸೆಟ್ಲ್‌ಮೆಂಟ್ ಕಾ ಮಸೀದ ಮೆ ಜಾಕೆ ಬೈಸಗಾ ಮಾ ॥

ಉಗೊ ಸಮಜಾಕೆ, ಉಗೊ ಮನಾಕೆ ನಿಖಾಃ ಪಡಾಕೆ ದೇಕುನೊ ಮಾ

೯. ದುಲ್ಲಾ ಮೋರಾ ರುಸಗಾ ಮಾ
ದುಲ್ಲಾ ಮೋರಾ ರುಸಗಾ ಮಾ
ವಾ ಸೆಟ್ಲ್‌ಮೆಂಟ್ ಗಲ್ಲಿಮೆ ಮೆ ಜಾಕೆ ಬೈಸಗಾ ಮಾ ॥
ಕಹಾ ಬೈಸಗಾ ಮಾ ವಾ...
ವಾ ಬಾತಾಲಿಗಲ್ಲಿ ಮೆ ಬೈಸಗಾ ಮಾ ॥
ಉಗೊ ಸಮಜಾಕೆ, ಉಗೊ ಮನಾಕೆ ಬಾಡಾಕಾ ಘರ ಮೆ ಮಾ

**ಸಾರಾಂಶ:** ತಮ್ಮ ಸಮುದಾಯದವರು ವಲಸೆ ಹೋಗಿ ಎಲ್ಲೆಲ್ಲಿ ನೆಲೆಸಿದ್ದಾರೆ ಎಂಬುದನ್ನು ಈ ಹಾಡಿನ ಮೂಲಕ ಹೇಳುತ್ತಿದ್ದಾರೆ. ಮದುಮಗ ಮುನಿಸಿಕೊಂಡಿದ್ದು, ಆಗ ಅವನಿಗೆ ತಮ್ಮ ಸಮುದಾಯದವರು ಭಾರತದ ಇತರೆ ಕಡೆ ಅಂದರೆ ಪಣಜಿ, ಅಮರನಾಥ, ಪೂನಾ, ಸೋಲಾಪುರ, ಬಿಜಾಪುರ, ಬಾಗಲಕೋಟೆ, ಧಾರವಾಡ ಕಡೆ ನೆಲೆಸಿದ್ದು, ಕೊನೆಗೆ ಎಲ್ಲರನ್ನು ಮದುವೆಗೆ ಗದಗ ಸೆಟ್ಲ್‌ಮೆಂಟ್‌ಗೆ ಕರೆತರಬೇಕು, ಹಾಗಾಗಿ ನೀನು ಮುನಿಸಿಕೊಳ್ಳಬಾರದು ಎಂದು ಸಮಾಧಾನ ಮಾಡುತ್ತಾ ಈ ಹಾಡು ಹಾಡುತ್ತಿದ್ದಾರೆ.

೭

ಚಪ್ಪರ್‌ಬಂದ......
ಬಾತಾಲೇ ಚಪ್ಪರಾ ಬಾಂತೆತೇ.... ಹಮ್ ಚಪ್ಪರಾಮೆ ಸೋತೇತೆ ॥
ಗಾಂವ್-ಗಾಂವ್ ಭಟಕತೇತೆ..... ಹಮ್ ಭಟಕರಾನೇ ಲೋಗಾಂ ॥

೧. ಕಾಂಸೇ ಆಹೇ.......
ಬಾತಾಲೇ ಕಿಸಕಾ ಸಂಗ ಆಹೇ......
ಆದಿಲ್‌ಶಾ ಕಾ ಜಮಾನಾಮೇ ಬಿಜಾಪುರಗೋ ಆಯೇ
ಮೊಘಲ ಕಾ ಜಮಾನಾಮೇ ಬಿಜಾಪುರಗೋ ಆಯೇ

೨. ರುಂಬಾಲ ಬಾಂತಾತಾ......
ಮೂ ಪರ ಮೂಚ ಚೊಡತಾತಾ ॥
ಬಗಲಮೆ ಜೋಳಗಿ ಪೆರತಾತಾ
ಫಕೀರಕಾ ವೇಷಮೆ ಆತಾತಾ ॥

೩. ಮುಂಡ ಭರಕೆ ಆಚರ
ನಾಕ ಭರಕೆ ನತ್ತ ಪೆರತೀತಿ ॥
ಇಜ್ಜತಸೇ ರತೀತಿ
ಭುತಾನಿ ಭಾತುಗೊ ಡರತೀತಿ ॥

೪. ತೈ-ತೋರಾ ಮೈ-ಮೋರಾ
ಪೆಸ್ಸಾ ಗುರಿಯಾ ಹೇರಾ ॥
ಖಾತೇ ಬೈಸಗೇ ಬಾತಾಲೇ
ಸತ್ತರ ಬರಸೇ....
ಸರ್ಕಾರಕಾ ಸೌಲತ್ತ ನೈ ಲೀನಸೇ ॥

೫. ಕುತ್ರಾ ಗುಂಧ್ರಿ.....
ಸೀತೆ ಬೈಸತೀತಿ ಚಪ್ಪರಾ ಮೇ ॥
ಭುತಾನಿ ಕಾಮಕರತೀತಿ
ಭಾತು ಕಾ ರಸ್ತಾ ದೇಕತೀತಿ ॥

೬. ಬಡಿಗ್ಯಾ ಬೇಗತಾ
ಗೌಂಡಿ ಹಮಾಲ ಕರತಾತಾ ॥
ಜಾತ್ರಾಮೇ ಜಲವಾ ಕಿಲಾತಾತಾ
ಗರ್ದಿಗಮ್ಮತ ದಿಕಾತಾತಾ ॥

೭. ಜಗ್ಗಣಕ ಜಗ್ಗಣಕ
ಡಬ್ಬ ಬಜಾಯಿನಸೇ ಸುಂತೇತೆ ॥
ಬಾತಾಲೇಂಕಾ... ಈದ್ ಮೊಹರಂ ಜೋರಸೇ ಕರತೇತೆ
ಮೊಹರಂ ಮೇ ಗೆಜ್ಜೆ ಮಜಲ್ ಖೇಲತೇತೆ ॥

೮. ಹಂಡೋರೇ ಲಂಡವಾನ
ಸೊನೋ ಮೋರಾ ಏಕ ಬಾತ ॥
ಸರ್ಕಾರಸೇ ಲಡಾಯಿ ಕರಿಂಗೇ
ಹಮರಾ ಹಕ್ಕ ಮಾಂಗಿಗೇ ॥

೯. ಜಾದಾ ಬೇಗಾ ನಕಲಿ ಪೈಸಾ
ಕಮ್ ಬೇಗಾ ಬ್ರಿಟಿಷಕಾ ಖಜಾನಾ ॥
ಇನ್‌ಕಾಂಕೆ ಲೋಗ ಕೀನ
ತಂತಿ ಜೇಲಮೆ ಥಕಲೀನ ॥

೧೦. ತಂತಿ ಜೇಲಮೆ....
ಫಾಂಸಿ ಲಗಾಕೆ ಮರಾಯಿನ ॥

ಭಟಕನಾರೇ ಲೋಗ ಕೀನ
ಬಾತಾಲೆಂಕೋ ಬಹುತ ಮಾರಿನ
ಜಂಗಲ್ ಕೆ ಲೋಗ ಕೀನ
ಬಾತಾಲೆಂಕೋ ಬಹುತ ಮಾರಿನ ॥

**ಸಾರಾಂಶ:** ಈ ಹಾಡು ಚಪ್ಪರ್‌ಬಂದ್ ಸಮುದಾಯದ ಮೂಲವನ್ನು ಹೇಳುತ್ತದೆ. ತಾವು ಚಪ್ಪರ ಹಾಕುತ್ತಿದ್ದು, ಚಪ್ಪರದಲ್ಲಿ ನೆಲೆಸುತ್ತಿದ್ದರಿಂದ ತಮಗೆ ಚಪ್ಪರ್‌ಬಂದ್ ಎಂದು ಕರೆಯುತ್ತಾರೆ. ನಾವು ಆದಿಲ್‌ಶಾಹಿಯ ಕಾಲದಲ್ಲಿ ಬಿಜಾಪುರಕ್ಕೆ ವಲಸೆ ಬಂದಿದ್ದೇವೆ. ನಾವು ಫಕೀರರ ವೇಷ ತೊಟ್ಟು ಊರೂರು ಅಲೆಯುತ್ತಿದ್ದರೆ, ನಮ್ಮ ಹೆಂಡತಿಯರು ಮನೆಯಲ್ಲಿಯೇ ಇರುತ್ತಿದ್ದರು. ಗೌಂಡಿ ಕೆಲಸ, ಹಮಾಲಿ ಕೆಲಸ ಮಾಡುತ್ತಿದ್ದು, ಜೊತೆಗೆ ಜಾತ್ರೆಯಲ್ಲಿ ಜಾದೂ ಮತ್ತು ಗರ್ದಿಗಮ್ಮತ್ ಸಹ ತೋರಿಸುತ್ತಿದ್ದೆವು. ಮೊಹರಂನಲ್ಲಿ ಗೆಜ್ಜೆ ಕಟ್ಟಿ ಕುಣಿಯುತ್ತಿದ್ದೇವು. ಬ್ರಿಟಿಷರ ಕಾಲದಲ್ಲಿ ನಕಲಿ ನಾಣ್ಯ ತಯಾರಿಸಿದ್ದರಿಂದ ನಮ್ಮನ್ನು ತಂತಿಬೇಲಿಯೊಳಗೆ ಬಂಧಿಸಿ ಹಿಂಸೆ ನೀಡಿದರು. ಈಗ ಸರ್ಕಾರದ ವಿರುದ್ಧ ಹೋರಾಡಿ ನಮ್ಮ ಹಕ್ಕುಗಳನ್ನು ಪಡೆಯೋಣ ಎಂದು ಈ ಹಾಡಿನ ಮೂಲಕ ತಮ್ಮ ಸಮುದಾಯದವರನ್ನು ಎಚ್ಚರಿಸುತ್ತಿದ್ದಾರೆ.

೮

ಅಂಗನ ಮೆ ಕುಂವಾ ಕುಂದಾ ಕೆ ದೇ ಮೊರಾ ಮುನೂಸ್
ಮೈ ಭರತಿ ಮೈ ಪಾನಿ ತೈ ದೇಕತಾತೋ ಬೈಸ

೧. ಖಾತಾ ಕಾ ಜೋರಿ ಮೊಗೊ
ರೇಘಂ ಕಿ ಜೋರಿ ಮಂಗಾಕೇ

೨. ಪ್ಲಾಸ್ಟಿಕ್ ಕಾ ಗಡಾ ಮೊಗೊ
ತಾಂಬಾಕಾ ಗಡಾ ಮಂಗಾಕೇ

೩. ಗದಗ ಕಿ ದಂಡಿಯಾ ಮೊಗೊ
ಇಳಕಲ್ ಕಿ ದಂಡಿಯಾ ಮಂಗಾಕೇ

೪. ಕಂಟ್ರೋಲ್ ಕಾ ಚಾವರ ವ
ಬಾಸುಮತಿ ಚಾವರ ಲೇ ಕ್ಯಾಕದೇಮೋರಾ

**ಸಾರಾಂಶ:** ಈ ಹಾಡನ್ನು ಹೆಂಗಸರು ಮನೆ ಕೆಲಸ ಮಾಡುವ ಸಂದರ್ಭದಲ್ಲಿ ಹಾಡುತ್ತಿದ್ದರು. ತಾನು ಕೆಲಸ ಮಾಡುತ್ತಿದ್ದರೆ, ತನ್ನ ಗಂಡ ತನ್ನನ್ನು ನೋಡುತ್ತಾ ಕುಳಿತ್ತಿದ್ದಾನೆ ಎಂದು ಹಾಡುತ್ತಿದ್ದಾರೆ.

೬

೧. ಪೈಸಾ ಗೋ ಜಾಗಾ ಲೇತೀತಿ
ಮುನೂಸ ಕೊ ಕುಟರಿ ಹೋತಾತ
ಲರಕನಕೊ ಸೋಪಾ ಹೋತಾತ
ಮೋಗೋ ತೊ ಅಂಗನ ಹೋತಾತ

೨. ಪೈಸಾ ಗೋ ವಣ್ಣಾ ಲೇತೀತಿ
ಮುನೂಸ ಕೊ ವಲ್ಲಿ ಹೋತಾತ
ಲರಕನಕೊ ಅತಗ್ಯೆ ಹೋತಾತ
ಮೋಗೋ ತೊ ಪಡಕಾ ಹೋತಾತ

೩. ಪೈಸಾ ಗೋ ರಾಶನ ಭರತೇತಿ
ಮುನೂಸ ಕೊ ರೋಟಿ ಹೋತಾತ
ಲರಕನಕೊ ಚೊಂಗಾ ಹೋತಾತ
ಮೋಗೋ ಖಾನಾ ಹೋತಾತ

೪. ಪೈಸಾ ಗೋ ಹೇರಾ ಲೇತೀತಿ
ಮುನೂಸ ಕೊ ನರಿ ಹೋತಾತ
ಲರಕನಕೊ ಗುರಿಯಾ ಹೋತಾತ
ಮೋಗೋ ಚೋರ ಹೋತಾತ

**ಸಾರಾಂಶ:** ಈ ಹಾಡಿನ ಮೂಲಕ ಹೆಂಡತಿ ತನ್ನ ಆಸೆಯನ್ನು ವ್ಯಕ್ತಪಡಿಸುತ್ತಿದ್ದಾಳೆ. ತಮ್ಮಲ್ಲಿ ಹೆಚ್ಚು ಹಣ ಇದ್ದರೆ ತಾನು ಹೇಗೆ ಮನೆ ನಿರ್ವಹಣೆ ಮಾಡುತ್ತಾಳೆ ಎಂದು ಹೇಳುತ್ತಿದ್ದಾಳೆ. ಹಣ ಇದ್ದರೆ ಮನೆ ಖರೀದಿಸಿ, ಗಂಡನಿಗೆ, ಮಕ್ಕಳಿಗೆ, ತನಗೆ ಹೊಸ ಬಟ್ಟೆ ಖರೀದಿಸಿ, ಒಳ್ಳೆಯ ಅಡುಗೆಯನ್ನು ಮಾಡಿ ಸಂತೋಷದಿಂದ ಇರುತ್ತಿದ್ದೇವು ಎಂದು ಹಾಡುತ್ತಿದ್ದಾಳೆ.

## ಚಪ್ಪರಬಂದರ ಕಥೆ–ವ್ಯಥೆ

ರಚನೆ: ಬಿ ಬಾಬು (ಬಳಬಟ್ಟಿ), ಮುಂಡರಗಿ

ಕೇಳಿರಿ ಕೇಳಿರಿ ನಾಡಿನ ಜನಗಳೇ ಚಪ್ಪರಬಂದರ ಈ ಕಥೆಯಾ
ತಂತಿಬೇಲಿಯ ಜೇಲಿನಲ್ಲಿದ್ದ ಚಪ್ಪರಬಂದರ ಈ ವ್ಯಥೆಯಾ ॥

ಮೊಗಲರ ಜೊತೆಯಲಿ ಬಂದರೊ ಇವರು ಚಪ್ಪರಕಟ್ಟುವ ಚತುರಾರು
ಚಪ್ಪರಬಂದರಾದವರೊ ॥ ಮೊಗಲ ನವಾಬರ ಮಹಲನು ಕಟ್ಟುತಾ
ಚಪ್ಪರದಲ್ಲಿ ಮಲಗಿದರೊ ॥ ಕೇಳಿರಿ..... ಕೇಳಿರಿ.....

ಆದಿಲ್ ಶಾಹಿಯ ಟಂಕಶಾಲೆಯಲಿ ನಾಣ್ಯ ಮಾಡಿದ ನಿಪುಣಾರೊ
ಛಾಪು ಒತ್ತಿದ ಚತುರಾರು ॥ ಮೊಘಲರ ಆಂಗ್ಲರ ಯುದ್ಧದಲ್ಲಿ
ಸೋತರು ಮೊಘಲರು ಕದನದಲ್ಲಿ ॥ ಕೇಳಿರಿ..... ಕೇಳಿರಿ.....

ಮೊಘಲರು ಹೋದರು ಆಂಗ್ಲರು ಬಂದರೊ । ದಿಕ್ಕು ಕಾಣದೆ ಕುಸಿದವರು ॥
ಚಪ್ಪರವೆ ಗತಿಯೆಂದವರು । ಹೊಟ್ಟೆಪಾಡಿಗೆ ಹಿಟ್ಟನು ಹುಡುಕುತಾ ॥
ಊರೂರು ಅಲೆಯುತಾ ನಡೆದವರೊ ॥ ಕೇಳಿರಿ..... ಕೇಳಿರಿ.....

ಖೊಟ್ಟಿ ನಾಣ್ಯವ ಮಾಡುತಲಿವರು ಆಂಗ್ಲರ ನಿದ್ದೆಯ ಕೆಡಸಿದರು
ಗುನ್ಹೇಗಾರರಾಗಿ ಬೆಳೆದವರು । ಆಂಗ್ಲರ ಕಣ್ಣಿಗೆ ಮಣ್ಣನೆರಚುತ
ಚಳ್ಳೆ ಹಣ್ಣನು ತಿನಿಸಿದರು ॥ ಕೇಳಿರಿ..... ಕೇಳಿರಿ.....

ಮ್ಯೆ ಮೋರಾ ತ್ಯೆ ತೋರಾ ಖತರಾ ಗುಂದರಿ ಸಿರೋತಿ ಅಂದವರು,
ಹರಿಯಾ ಭರಕೆ ಗುರಿಯಾ ತಿಂದವರು । ತಿಳಿಯದ ಭಾಷೆ ಆಡುತಲಿವರು
ಭಾತು ಭುತಾನಿ ಆದವರು ॥ ಕೇಳಿರಿ..... ಕೇಳಿರಿ.....

ಕಾಯುತಲಿದ್ದವು ಕೆಂಪು ಕೋತಿಗಳು ಚಪ್ಪರಬಂದರ ಬಂಧನಕೆ ।
ಹಲ್ಲು ಮಸೆಯುತಾ ಸಮಯಕೆ । ಸಿಕ್ಕಿಬಿದ್ದರು ಆಂಗ್ಲರ ಜಾಲಕೆ
ತಂತ್ರ ತಿಳಿಯದ ಮುಗ್ದರು ॥ ಕೇಳಿರಿ..... ಕೇಳಿರಿ.....

ತಂತಿಬೇಲಿಯ ಜೇಲಿನಲ್ಲಿಟ್ಟು ಗಲ್ಲಿಗೇರಿಸಿ ಕೊಂದಾರೊ
ಜೊತೆಯಲಿ ಗಂಟಿ ಚೋರರು । ಭಾಟ, ಕೈಕಾಡಿ ಹರಣಶಿಕಾರಿ
ಅಲೆಮಾರಿ ಬುಡಕಟ್ಟು ಅಂದಾರೊ ॥ ಕೇಳಿರಿ..... ಕೇಳಿರಿ.....

ಸ್ವತಂತ್ರ ಸಂಗ್ರಾಮ ನಡೆಯುತಲಿತ್ತು ಗಾಂಧಿ ತಾತರ ಹಿರಿತನದಲ್ಲಿ
ಸಮಾಜ ಇತ್ತು ಚಳುವಳಿಯಲಿ । ಸ್ವತಂತ್ರವಾಯಿತು ಭಾರತ ದೇಶವು
೪೭ರ ಇಸವಿಯಲ್ಲಿ ॥ ಕೇಳಿರಿ..... ಕೇಳಿರಿ.....

ಪ್ರಭುಗಳು ಹೋದರು ಪ್ರಜೆಗಳು ಬಂದರು । ಬುಡಕಟ್ಟು ಬಿದ್ದಾರೊ ಬಂಧನದಲ್ಲಿ
ಆಶೆಯ ಹೊತ್ತು ಕತ್ತಲಿನಲಿ । ಎಪ್ಪತ್ತು ವರುಷದ ಬೇಡಿಕೆ ನಮ್ಮದು
ಪರಿಶಿಷ್ಟ ಪಂಗಡ ಸೇರಿಸಿ ಎಂದು ॥ ಕೇಳಿರಿ..... ಕೇಳಿರಿ.....

ಹೋರಾಟ ಒಂದೇ ದಾರಿಯು ಮುಂದೆ ಹೋರಾಡಬೇಕು ಒಮ್ಮತದಿಂದ
ಹಕ್ಕನು ಕೇಳುವ ಛಲದಿಂದ । ಮುಂಡರಗಿ ಊರಿನ ಬಾಬು ಬಳಬಟ್ಟಿ
ಹಾಡನು ಹಾಡುತಾ ಕರೆದಾನೋ ॥ ಕೇಳಿರಿ..... ಕೇಳಿರಿ.....

**ಜಾನಪದ ಕಥೆ**

ಇವರು ನಕಲಿ ನಾಣ್ಯವನ್ನು ತಯಾರಿಸಲು ಏಕೆ ಆರಂಭಿಸಿದರು ಎಂಬುದರ ಹಿಂದೆ ಒಂದು ಜಾನಪದ ಕಥೆ ಇದೆ. "ಮೊಘಲ್ ಆಳ್ವಿಕೆಯಲ್ಲಿ ಚಪ್ಪರ್‌ಬಂದರು ವಿಜಯಪುರ ಜಿಲ್ಲೆಯಲ್ಲಿ ವಾಸವಾಗಿದ್ದರು, ಆ ವೇಳೆಯಲ್ಲಿ 'ಪೀರ್‌ಭಾಯಿ ಪೀರ್ ಮಖಾನ್' ಎಂಬ ಫಕೀರನು ಅದೇ ಜಿಲ್ಲೆಯಲ್ಲಿ ವಾಸವಾಗಿದ್ದನು. ಒಬ್ಬ ಚಪ್ಪರ್‌ಬಂದನು ಆ ಫಕೀರನಲ್ಲಿ ಬಂದು ಚಪ್ಪರ್‌ಬಂದರಿಗೆ ಒಂದು ಒಳ್ಳೆಯ ಜೀವನ ವಿಧಾನ (ಉದ್ಯೋಗ) ತೋರಿಸುವಂತೆ ದೇವರಿಗೆ ಮೊರೆ ಹೋಗಬೇಕಾಗಿ ವಿನಂತಿಸಿದನು, ಇದಕ್ಕೆ ಫಕೀರನು ಆ ವ್ಯಕ್ತಿಗೆ ಒಂದು ರೂಪಾಯಿ ನಾಣ್ಯವನ್ನು ಕೊಟ್ಟು, ಎಲ್ಲೂ ಹಿಂದೆ ತಿರುಗಿ ನೋಡದೆ ಮನೆಗೆ ಹೋಗುವಂತೆ ತಿಳಿಸಿದನು. ಆ ವ್ಯಕ್ತಿ ಮನೆಗೆ ಓಡುತ್ತ ಹೊರಟಿರಬೇಕಾದರೆ, ಮಾರ್ಗ ಮಧ್ಯದಲ್ಲಿ ಯಾರೋ ಅವನನ್ನು ಕರೆದಂತಾಯಿತು. ಹೀಗಾಗಿ ಅವನು ಹಿಂದಕ್ಕೆ ತಿರುಗಿ ನೋಡುತ್ತಾನೆ, ಆದರೆ ಅಲ್ಲಿ ಯಾರೂ ಇರಲಿಲ್ಲ. ಆಗ ಅವನು ಮನೆಗೆ ಹೋಗಿ, ಫಕೀರನು ಕೊಟ್ಟ ರೂಪಾಯಿಯನ್ನು ನೋಡಿದನು. ಆ ರೂಪಾಯಿ ನಕಲಿ ನಾಣ್ಯವಾಗಿ ಬದಲಾಗಿತ್ತು. ಆ ನಕಲಿ ನಾಣ್ಯದೊಂದಿಗೆ ವ್ಯಕ್ತಿಯು ಪುನಃ ಫಕೀರನಲ್ಲಿಗೆ ಹೋಗಿ ಅವನು ನಕಲಿ ನಾಣ್ಯವನ್ನು ತನಗೆ ಕೊಟ್ಟಿದ್ದಾನೆ ಎಂದು ಆರೋಪಿಸಿದನು. ಇದರಿಂದ ಫಕೀರನು ಕೋಪಿತಗೊಂಡು ಆ ವ್ಯಕ್ತಿ ಮಾರ್ಗ ಮಧ್ಯದಲ್ಲಿ ಹಿಂದಿರುಗಿ ನೋಡಿದ್ದರಿಂದ ನೈಜ ನಾಣ್ಯ ನಕಲಿ ನಾಣ್ಯವಾಗಿ ರೂಪಾಂತರಗೊಂಡಿದೆ ಎಂದು ತಿಳಿಸಿದನು. ಜೊತೆಗೆ ಮುಂದೆ ನೀವು ನಕಲಿ ನಾಣ್ಯ ತಯಾರಿಸಿ ಜೀವನ ಸಾಗಿಸಿ ಎಂದು ಹೇಳುತ್ತಾನೆ. ಅಂದಿನಿಂದ ಅವರು ನಕಲಿ ನಾಣ್ಯ ತಯಾರಕರಾದರು. ಅಂದಿನಿಂದ ಪ್ರತಿ ಭಾನುವಾರ, ತಾವು ಮಾಡಿದ ನಕಲಿ ನಾಣ್ಯ, ಅಚ್ಚು, ಮುಂತಾದವುಗಳನ್ನು ಫಕೀರನ ಮುಂದೆ ಇಟ್ಟು ಪೂಜಿಸುತ್ತಿದ್ದರು. ಕೋಳಿ ಬಲಿ ಸಹ ನೀಡುತ್ತಿದ್ದರು, ಕೋಳಿಯ ಕಣ್ಣು ಮತ್ತು

ಪುಕ್ಕ ಕಿತ್ತಿ, ಅದನ್ನು ಬಾಬುಲ್(Babal), ಬಿರ್(Bir) ಮತ್ತು ತಲ್‌ಮಕಾನ(thalmakah) ಮರಗಳ ಮುಳ್ಳುಗಳಿಗೆ ಸಿಕ್ಕಿಸಿ, ಪೂಜೆ ಮಾಡಿ, ನಂತರ ತಾವುಯಾವ ಕಡೆ ಪ್ರಯಾಣ ಬೆಳೆಸಬೇಕೋ ಆ ದಿಕ್ಕಿಗೆ ಎಸೆದು, ಪ್ರಮಾಣ ಆರಂಬಿಸುತ್ತಿದ್ದರು". ಈ ಕಥೆಯನ್ನು ಈಗಲೂ ಸಹ ಹಿರಿಯರು ತಮ್ಮ ಕಿರಿಯರಿಗೆ ಹೇಳುತ್ತಾರೆ.

### ಸ್ತ್ರೀಯರ ಸ್ಥಾನಮಾನ

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಮಹಿಳೆಗೆ ಮಹತ್ತರ ಸ್ಥಾನಮಾನ ನೀಡಲಾಗಿದೆ, 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಲ್ಲಿ ನಾರಿಯದು ಪೂಜಿಸಲ್ಪಡುವರೋ ಅಲ್ಲಿ ದೇವತೆಗಳು ನಲೆಸಿರುತ್ತಾರೆ ಎಂದು ನಂಬಲಾಗಿದೆ.,

ಇಸ್ಲಾಂ ಧರ್ಮದಲ್ಲೂ ಸಹ ಸ್ತ್ರೀಯರಿಗೆ ಗೌರವಾದ ಸ್ಥಾನವನ್ನು ನೀಡಿದೆ. ಸ್ತ್ರೀ ತಾಯಿಯಾಗಿ, ಹೆಂಡತಿಯಾಗಿ ಸಹೋದರಿಯಾಗಿ, ಮಗಳಾಗಿ ತುಂಬಾ ಗೌರವಾನ್ವಿತಳು ಎರಡು ಷರಿಯತ್‌ನಲ್ಲೂ ತಿಳಿಸಲಾಗಿದೆ.

ಏನೇ ಹೇಳಿದರು ಎಲ್ಲಾ ಸಮಾಜಗಳಲ್ಲೂ ಮಹಿಳೆಯರ ಸ್ಥಾನಮಾನ ಪುರುಷರ ನಂತರವೇ ಬರುತ್ತದೆ, ಸಮಾನತೆಯ ಬಗ್ಗೆ ಎಷ್ಟೇ ಮಾತನಾಡಿದರೂ, ಮೀಸಲಾತಿ ನೀಡಿದರೂ ಪುರುಷನ ನಂತರವೇ ಸ್ತ್ರೀಯರ ಸ್ಥಾನಮಾನ ಕಂಡುಬರುವುದು ಸಾಮಾನ್ಯವಾಗಿದೆ, ಇಂದು ಮಹಿಳೆ ಎಲ್ಲ ಕ್ಷೇತ್ರಗಳಲ್ಲೂ ತನ್ನ ಛಾಪನ್ನು ಮೂಡಿಸಿದ್ದಾಳೆ, ಮಕ್ಕಳನ್ನು ಲಾಲನೆ-ಪಾಲನೆ, ಪೋಷಣೆ ಮಾಡುವ ತಾಯಿಯಾಗಿ, ಪತ್ನಿಯಾಗಿ ಕೌಟುಂಬಿಕ, ಪಾತ್ರಗಳ ಜೊತೆಗೆ ಉಳಿದೆಲ್ಲಾ ಕ್ಷೇತ್ರಗಳಲ್ಲೂ ಮುಂಚೂಣಿಯಲ್ಲಿದ್ದರೂ, ಇಂದಿಗೂ ಅವಳ ಎರಡನೇ ದರ್ಜೆಯ ಪ್ರಜೆಯಾಗಿಯೇ ಉಳಿದಿದ್ದಾಳೆ. ಸ್ತ್ರೀಯರು ಸಶಕ್ತರಾಗುವುದನ್ನು ಹಾಗು ಸ್ತ್ರೀಯರು ಸಬಲೆಯರಾಗುವಂತೆ ಮಾಡುವುದನ್ನು ಮಹಿಳಾ ಸಶಕ್ತೀಕರಣ ಅಥವಾ ಸ್ತ್ರೀಸಶಕ್ತೀಕರಣ ಎನ್ನುತೇವೆ.

ಸಂವಿಧಾನಾತ್ಮಕವಾಗಿ ಸಮಾನತೆಯ ಹಕ್ಕು, ಸ್ತ್ರೀಯರಿಗೆ ಆಸ್ತಿಯ ಹಕ್ಕು, ಮಹಿಳಾ ಆಯೋಗದ ಸ್ಥಾಪನೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸ್ಥಾಪನೆ, ಉದ್ಯೋಗ ಮೀಸಲಾತಿ, ರಾಜಕೀಯ ಮೀಸಲಾತಿ, ಆರ್ಥಿಕಾಭಿವೃದ್ಧಿ ಮತ್ತು ಸ್ವಾವಲಂಬನೆ ಸಾಧನೆಗಾಗಿ ಯೋಜನೆಗಳು, ಸ್ವಯಂಸೇವಾ ಘಟಕಗಳು ರಾಷ್ಟ್ರಮಟ್ಟದಲ್ಲಿ ಸ್ತ್ರೀಯರ ಸಬಲೀಕರಣಕ್ಕಾಗಿ ಕಾರ್ಯನ್ಮುಖವಾಗಿವೆ ಇದು. ಸ್ತ್ರೀಯರ ಸಶಕ್ತೀಕರಣದ ಹಾದಿಯಲ್ಲಿ ಮಹತ್ವಪೂರ್ಣವಾದ ಬೆಳವಣಿಗೆಯಾಗಿದೆ.

ಆದರೂ ಸಹ ಮಹಿಳೆಯರ ಸಾಕ್ಷರತಾ ಪ್ರಮಾಣ ತೀರಾ ಕಡಿಮೆ ಇದೆ, ೧೯೯೧ ರ ಜನಗಣತಿ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಮಹಿಳೆಯರ ಸಾಕ್ಷರತ ದರ ಶೇ. ೪೪.೩, ಆದರೆ

ಪುರುಷರದು ಶೇ. ೬೭.೩ ರಷ್ಟು ಇರುವುದು ಲಿಂಗ ಅಸಮಾನತೆಯನ್ನು ತೋರಿಸುತ್ತದೆ, ಅದರಲ್ಲೂ ಮುಸ್ಲಿಂ ಸಮುದಾಯದ ಮಹಿಳೆಯರು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಅಸಮಾನತೆಯನ್ನು ಎದುರಿಸತುತ್ತಿರುವುದು ಕಂಡುಬರುತ್ತದೆ.

ಚಪ್ಪರ್‌ಬಂದ್ ಸಮುದಾಯ ಮೂಲತಃ ಬುಡಕಟ್ಟು ಮೂಲವನ್ನು ಹೊಂದಿರುವುದರಿಂದ ಇವರಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನಮಾನವಿರುವುದು ಕಂಡುಬರುತ್ತದೆ, ಮೊದಲು ಈ ಸಮುದಾಯದ ಗಂಡಸರು ಹೆಚ್ಚಾಗಿ ಮನೆಯಿಂದ ಊರಿಂದ ಹೊರ ಹೋಗಿ ದುಡಿಯುತ್ತಿದ್ದರಿಂದ ಮನೆಯ ಸಂಪೂರ್ಣ ಜವಾಬ್ದಾರಿ ಮನೆಯ ಹೆಂಗಸೇ ನಿರ್ವಹಿಸುತ್ತಿದ್ದಳು, ಹಾಗಾಗಿ ಹುಡುಗನಿಗೆ ಮದುವೆ ಮಾಡುವ ಸಂದರ್ಭದಲ್ಲಿ ಹೆಚ್ಚು ಧೈರ್ಯಶಾಲಿ ಮತ್ತು ಸಶಕ್ತಳಾದ ಹುಡುಗಿಯನ್ನು ಹುಡುಕಿ ಮದುವೆ ಮಾಡುತ್ತಿದ್ದರು, ಮನೆಯ ಪ್ರತಿಯೊಂದು ನಿರ್ಣಯಗಳಲ್ಲೂ ಸ್ತ್ರೀಯರ ಅಭಿಪ್ರಾಯವನ್ನು ಪಡೆಯುತ್ತಿದ್ದರು, ಅವಳ ಸಲಹೆಗಳನ್ನು ಗೌರವಿಸುತ್ತಿದ್ದರು. ಸ್ತ್ರೀಯರು ಮನೆಯ ಪ್ರತಿಯೊಂದು ಜವಾಬ್ದಾರಿಯನ್ನು ಸಹ ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದರು, ಹಾಗಾಗಿ ಕುಟುಂಬದಲ್ಲಿ, ಸಮಾಜದಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನಮಾನಗಳಿದ್ದವು, ಆದಾಗ್ಯೂ ಸಹ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿರಲಿಲ್ಲ, ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುತ್ತಿದ್ದರು, ಈಗ ಈ ಪರಿಸ್ಥಿತಿಗಳಲ್ಲಿ ಕೆಲವು ಬದಲಾವಣೆಗಳನ್ನು ಕಾಣಬಹುದಾಗಿದೆ. ಆಕರ್ಥಿವಾಗಿ ಉತ್ತಮ ಸ್ಥಾನದಲ್ಲಿರುವವರು ತಮ್ಮ ಹೆಣ್ಣು ಮಕ್ಕಳಿಗೂ ಸಹ ಉನ್ನತ ಶಿಕ್ಷಣವನ್ನು ಕೊಡಿಸುತ್ತಿದ್ದಾರೆ, ಕೆಲವರು ಹೆಚ್ಚಿನ ಅಲ್ಲಿದಿದ್ದರೂ ತಕ್ಕ ಮಟ್ಟಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ, ಆದರೂ ಸಹ ಈ ಸಮುದಾಯದ ಹೆಣ್ಣುಮಕ್ಕಳು ಇನ್ನೂ ಸಹ ಶಿಕ್ಷಣದಿಂದ ವಂಚಿತರಾಗಿದ್ದಾರೆ ಎನ್ನಬಹುದು, ಪ್ರಸ್ತುತ ಕಾಲದಲ್ಲಿ ಕೆಲವರು ಹೆಣ್ಣು ಮಕ್ಕಳ ಮದುವೆಯ ವಯಸ್ಸನ್ನು ಸಹ ಮುಂದೂಡುತ್ತಿದ್ದಾರೆ, ಈಗಾಲೂ ಸಹ ಕೌಟುಂಬಿಕ ನಿರ್ಣಯಗಳಲ್ಲಿ ಇವರ ಪಾಲು ಇದ್ದೇ ಇದೆ, ಇವರ ನಿರ್ಣಯಗಳಿಗೆ, ಸಲಹೆಗಳಿಗೆ ಕುಟುಂಬದ ಇತರೆ ಸದಸ್ಯರು ಗೌರವಿಸುತ್ತಾರೆ, ಈ ಸಮುದಾಯ ದಲ್ಲಿ ಸಹ ಮಹಿಳೆ ತನ್ನ ಕುಟುಂಬದ ಆರ್ಥಿಕತೆಗೆ ಬೆನ್ನೆಲುಬಾಗಿ ದುಡಿಯುತ್ತಿರುವುದನ್ನು ಕಾಣಬಹುದಾಗಿದೆ, ಕೆಲವು ಕಡೆ ಸ್ತ್ರೀ ಕಡೆಗಣಿಸಲ್ಪಟ್ಟಿರುವುದನ್ನು ಸಹ ಕಾಣಬಹುದಾಗಿದೆ, ಒಟ್ಟಿನಲ್ಲಿ ಚಪ್ಪರ್‌ಬಂದ್ ಸಮುದಾಯದವರು ಸ್ತ್ರೀಯರಿಗೆ ಉತ್ತಮವಾದ, ಗೌರವಾನ್ವಿತವಾದ ಸ್ಥಾನಮಾನವನ್ನು ನೀಡಿರುವುದು ಕಾಣಬಹುದಾಗಿದೆ.

ಒಟ್ಟಿನಲ್ಲಿ ಚಪ್ಪರ್‌ಬಂದ್ ಸಮುದಾಯ ಇತರೆ ಧರ್ಮಗಳ ಪ್ರಭಾಕ್ಕೊಳಗಾಗಿದ್ದರೂ ಸಹ ಇದು ಇನ್ನೂ ಅನೇಕ ಬುಡಕಟ್ಟು ಆಚರಣೆಗಳನ್ನು ತನ್ನಲ್ಲಿ ಉಳಿಸಿಕೊಂಡು ಬಂದಿದೆ. ಆ ಬುಡಕಟ್ಟು ಲಕ್ಷಣಗಳೆಂದರೆ, ಈ ಸಮುದಾಯ ತನ್ನದೇ ಆದ ಪ್ರತ್ಯೇಕ ಭಾಷೆಯನ್ನು ಹೊಂದಿದೆ. ಈಗಲೂ ಇದು ಮೂರ್ತಿ ಪೂಜೆಯನ್ನು ಮಾಡುತ್ತದೆ. ಸಜಾತಿ ಗುಂಪುಗಳ

ಮತ್ತು ಸಜಾತಿ ಬೆಡಗುಗಳ ಮಧ್ಯೆ ವಿವಾಹನ್ನು ನಿಷೇಧಿಸಿದೆ. ತನ್ನದೇ ಆದ ಪಂಚಾಯಿತಿ ವ್ಯವಸ್ಥೆಯನ್ನು ಹೊಂದಿದೆ. ಮದುವೆಗಳಲ್ಲಿ ಬುಡಕಟ್ಟಿನ ಅನೇಕ ಸಂಪ್ರದಾಯಗಳನ್ನು ಆಚರಿಸುತ್ತಿದೆ. ಈ ಲಕ್ಷಣಗಳನ್ನು ಹೊಂದಿರುವುದರಿಂದ ಈ ಸಮುದಾಯವನ್ನು ಪರಿಶಿಷ್ಟ ಬುಡಕಟ್ಟು ಎಂದು ಪರಿಗಣಿಸಿ, ಆ ಪಟ್ಟಿಯಲ್ಲಿ ಸೇರಿಸಬಹುದಾಗಿದೆ.

**ಆಧಾರಗಳು**


Enthoven R E, *The Tribes and Castes of Bombay* (New delhi: Asian Educational Services: 1990: vol-1)

Gunthorpe E J, *Notes on Criminal Tribes* (Bombay: Times of India Steam Press: 1882)

Huddar M G, "Anthropo-Criminological study of Chapparband of Bijapur and Dharwad Districts" (Unpublished PhD Thesis: Dhrwad: Karnatak University: 1995)

Kennedy M, *Criminal classes in the Bombay Presidency* (Bombay: Govt.central press: 1908)

Singh K S (G.E), *People of India-Karnataka* (New Delhi: Affialiated East-West press Ltd: 2003: vol-26)

ಮಲ್ಲಿಕಾರ್ಜುನ ಬಿ ಮಾನ್ವಡೆ, *ತಂತಿಬೇಲಿಯೊಳಗಿನ ಜಗತ್ತು* (ಶಿವಮೊಗ್ಗ: ಗೀತಾಂಜಲಿ ಪ್ರಕಾಶನ: ೨೦೧೪)

ಶಂಕರರಾವ್ ಚ ನ, *ಸಾಮಾನ್ಯ ಸಮಾಜಶಾಸ್ತ್ರ* (ಮಂಗಳೂರು: ಜೈ ಭಾರತ್ ಪ್ರಕಾಶನ: ೨೦೧೦)

ವೆಂಕಟರಂಗೋ ಕಟ್ಟಿ, ಗ್ಯಾಝೇಟಿಯರು, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು (ಹೊಸದೆಹಲಿ: ಏಶಿಯನ್ ಎಜುಕೇಶನಲ್ ಸರ್ವೀಸಸ್: ೧೯೮೪)

ಅಧ್ಯಾಯ – ೫

# ಚಪ್ಪರ್‌ಬಂದರ ಶೈಕ್ಷಣಿಕ ಮತ್ತು ಆರ್ಥಿಕ ಜೀವನ

ಚಪ್ಪರ್‌ಬಂದರ ಶೈಕ್ಷಣಿಕ ಜೀವನ

ಚಪ್ಪರ್‌ಬಂದರ ಆರ್ಥಿಕ ಜೀವನ

- ಪಾರಂಪರಿಕ ಆರ್ಥಿಕತೆ
- ಆಧುನಿಕ ಆರ್ಥಿಕತೆ

## ಅಧ್ಯಾಯ ಐದು

# ಚಪ್ಪರ್‌ಬಂದರ ಶೈಕ್ಷಣಿಕ ಮತ್ತು ಆರ್ಥಿಕ ಜೀವನ

ಪ್ರತಿಯೊಬ್ಬ ಮನುಷ್ಯನಿಗೂ ಮೂಲಭೂತ ಸೌಕರ್ಯಗಳ ಅಗತ್ಯವಿದೆ. ಅವುಗಳೆಂದರೆ ಆಹಾರ, ಆರೋಗ್ಯ, ಶಿಕ್ಷಣ ಮತ್ತು ಆರ್ಥಿಕ ಸೌಕರ್ಯ. ಇವು ಒಂದಕ್ಕೊಂದು ಭಿನ್ನವೆನಿಸಿದರೂ ಇವುಗಳ ಮಧ್ಯೆ ಅಂತರ್ ಸಂಬಂಧವಿರುವುದು ಮಾತ್ರ ಸತ್ಯ. ಭಾರತ ಪ್ರಜಾತಂತ್ರ ನೀತಿಯನ್ನೊಳ ವಡಿಸಿಕೊಂಡಿರುವ ದೇಶವೆಂದು ಗುರುತಿಸಿಕೊಳ್ಳುತ್ತದೆ. ಇಲ್ಲಿ ಪ್ರತಿಯೊಬ್ಬ ಭಾರತೀಯ ಪ್ರಜೆಯಾದವನಿಗೆ ಸಮಾನ ಹಕ್ಕುಗಳಿವೆ ಎಂದು ಸಂವಿಧಾನ ತಿಳಿಸುತ್ತದೆ. ಆದರೆ ಭಾರತದಲ್ಲಿ ವ್ಯಕ್ತಿ ವ್ಯಕ್ತಿಗಳ ಮಧ್ಯೆ, ಸಮುದಾಯ ಸಮುದಾಯಗಳ ಮಧ್ಯದಲ್ಲಿ ಅಸಮಾನತೋಲನವಿರುವುದು ಕಂಡು ಬರುತ್ತದೆ. ಆರ್ಥಿಕ ಹಂಚಿಕೆಯಲ್ಲಿ ಅಸಮಾನತೆಯಿದೆ. ಶಿಕ್ಷಣವನ್ನು ಸಾರ್ವತ್ರೀಕರಣ ಗೊಳಿಸಿರುವುದಾಗಿ ಸರ್ಕಾರ ಘೋಷಿಸಿದೆ, ಅದಕ್ಕಾಗಿ ಅನೇಕ ಯೋಜನೆಗಳನ್ನು ಜಾರಿಗೆ ತಂದಿದೆ. ಆದರೆ ಈ ಎಲ್ಲಾ ಯೋಜನೆಗಳು ಯಾರಿಗೆ ತಲುಪಬೇಕೊ, ಅವರಿಗೆ ತಲುಪುತ್ತಿಲ್ಲ. ಈ ಯೋಜನೆಗಳು ಪೂರ್ಣ ಪ್ರಮಾಣದಲ್ಲಿ ಯಶಸ್ಸನ್ನು ಕಾಣಲಾಗುತ್ತಿಲ್ಲ. ಅದಕ್ಕೆ ನಮ್ಮ ದೇಶದ ಆಡಳಿತ ವ್ಯವಸ್ಥೆ ಕಾರಣ ಎನ್ನಬಹುದು. ವಿಮುಕ್ತ ಬುಡಕಟ್ಟುಗಳು ಮತ್ತು ಇತರೆ ಅಲಕ್ಷಿತ ಸಮುದಾಯಗಳು ಈ ಯೋಜನೆಗಳನ್ನು ಪಡೆಯುವಲ್ಲಿ ಅಡೆ-ತಡೆಗಳನ್ನು ಎದುರಿಸುತ್ತಿವೆ. ಇದರಲ್ಲಿ ಚಪ್ಪರ್‌ಬಂದ್ ಸಮುದಾಯವೂ ಒಂದು. ಚಪ್ಪರ್‌ಬಂದ್ ಸಮುದಾಯದ ಶೈಕ್ಷಣಿಕ ಮತ್ತು ಆರ್ಥಿಕ ಜೀವನವನ್ನು ಗಮನಿಸಿದಾಗ ಇದು ತಿಳಿದು ಬರುತ್ತದೆ.

### ಚಪ್ಪರ್‌ಬಂದರ ಶೈಕ್ಷಣಿಕ ಜೀವನ

ಶಿಕ್ಷಣ ಮಾನವನ ಬದುಕನ್ನು ಅರ್ಥಪೂರ್ಣಗೊಳಿಸುವ ಒಂದು ಬಹು ಆಯಾಮಯುಕ್ತ ಮಾಧ್ಯಮ. 'ಧ್ಯೇಯವಿಲ್ಲದವನ ಬದುಕು ಚುಕ್ಕಾಣಿ ಇಲ್ಲದ ಹಡಗಿನಂತೆ'. ಹಾಗಾಗಿ ಮಾನವನಿಗೆ

ಒಂದು ಗುರಿಯನ್ನು ಮುಟ್ಟಿಸುವ ಮಾಧ್ಯಮವೇ ಶಿಕ್ಷಣ. ಈ ಸಮಗ್ರ ಶಿಕ್ಷಣ ಪ್ರಕ್ರಿಯೇಯ ಪ್ರಮುಖ ಧ್ಯೇಯ, ವ್ಯಕ್ತಿಯ ವರ್ತನೆಯನ್ನು ಮಾರ್ಪಡಿಸಿ ಓರ್ವ ಉತ್ತಮ ನಾಗರೀಕನನ್ನು ಸೃಷ್ಟಿಸುವುದಾಗಿದೆ. ಶಿಕ್ಷಣವೆಂಬುವುದು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವುದು ನಮಗೆಲ್ಲ ತಿಳಿದಿದೆ. ನಂತರ ಸಮಾಜ ಬದಲಾದಂತೆ ಶಿಕ್ಷಣ ಸಹ ಆಯಾ ಸಮಾಜದ ಪರಿಸ್ಥಿತಿಗಳಿಗೆ ಅನುಗುಣವಾಗಿ ಬದಲಾಗುತ್ತಾ ಬಂದಿರುವುದು ಕಂಡುಬರುತ್ತದೆ. ಇಂದು ಶಿಕ್ಷಣ ಯಾವ ಪರಿಸ್ಥಿತಿಗೆ ಬಂದಿದೆ ಎಂಬುದನ್ನು ಗಮನಿಸಿದರೆ ಶಿಕ್ಷಣ ತನ್ನ ಮಹತ್ವವನ್ನು ಕಳೆದುಕೊಂಡು ಉಳ್ಳವರು ಮನೆಯ ಆಸ್ತಿಯಾಗಿದೆ. ಯಾವಾಗ ಭಾರತಕ್ಕೆ ಆಧುನಿಕತೆಯ ಪ್ರಭಾವ ತಟ್ಟಿತೋ, ಶಿಕ್ಷಣದ ಮೇಲು ಸಹ ಪರಿಣಾಮ ಬೀರಿತು. ಜಾಗತೀಕರಣ ಹಾಗೂ ಖಾಸಗೀಕರಣ ಇವುಗಳ ಪ್ರಭಾವಕ್ಕೊಳಗಾಗಿ ತನ್ನ ಧ್ಯೇಯೋದ್ದೇಶಗಳನ್ನು ಕಳೆದುಕೊಳ್ಳುತ್ತಿದೆ. ಸರ್ಕಾರವೂ ಸಹ ಶಿಕ್ಷಣ ನೀತಿಯಲ್ಲಿ ಅಸಡ್ಡೆಯನ್ನು ತೋರಿಸುತ್ತಿರುವುದು ಕಂಡು ಬರುತ್ತಿದೆ. ಹಾಗೆಯೇ ಸರ್ಕಾರಗಳು ಆಡಳಿತಕ್ಕೆ ಬಂದಾಗ ಅವರಿಗೆ ಇಷ್ಟ ಬಂದ ರೀತಿಯಲ್ಲಿ ಶಿಕ್ಷಣದ ಯೋಜನೆಗಳನ್ನು ರೂಪಿಸು ವುದು ಮತ್ತು ಅದನ್ನು ಮಾರ್ಪಡಿಸುವುದಾಗಿದೆ. ಇದರಿಂದ ಶಿಕ್ಷಣಕ್ಕೆ ಒಂದು ಸುಭದ್ರವಾದ ನಿಲುವು ಇಲ್ಲದಂತಾಗಿದೆ. ಸರ್ಕಾರ ಶಿಕ್ಷಣದ ಅಭಿವೃದ್ದಿಗೆ ಅನೇಕ ಯೋಜನೆಗಳನ್ನು ರೂಪಿಸುತ್ತಿದೆ, ಆದರೆ ಅವು ಸರಿಯಾದ ರೀತಿಯಲ್ಲಿ ಕಾರ್ಯಗತಗೊಳ್ಳುವಲ್ಲಿ ವಿಫಲವಾಗುತ್ತಿವೆ. ಸರ್ಕಾರ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಹಲವಾರು ಯೋಜನೆಗಳನ್ನು ಜಾರಿಗೊಳಿಸಿರುವುದನ್ನು ನಾವು ಕಾಣಬಹುದಾಗಿದೆ. ಕಡ್ಡಾಯ ಶಿಕ್ಷಣ, ಮರಳಿ ಬಾ ಶಾಲೆಗೆ, ನಲಿಕಲಿ, ಸರ್ವಶಿಕ್ಷಣ ಅಭಿಯಾನ, ಟೆಂಟ್ ಶಾಲೆಗಳು, ಬಿಸಿಯೂಟ ಯೋಜನೆ ಮುಂತಾದ ಯೋಜನೆಗಳನ್ನು ಜಾರಿಗೆ ತಂದಿದೆ. ಆದರೆ ಅವು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳ್ಳುವಲ್ಲಿ ವಿಫಲವಾಗಿದೆ. ಸರ್ಕಾರದ ಹಣಮಾತ್ರ ನೀರಿನಂತೆ ಪೋಲಾಗುತ್ತಿರುವುದು ದುರದೃಷ್ಟಿಕರ ಸಂಗತಿಯಾಗಿದೆ. ಒಟ್ಟಿನಲ್ಲಿ ಶಿಕ್ಷಣದಿಂದ ಮಾತ್ರ ಎಲ್ಲಾ ರೀತಿಯ ಬದಲಾವಣೆಗಳು ಸಾಧ್ಯ ಎನ್ನಬಹುದು.

ಸಾಮಾಜಿಕ ಬದಲಾವಣೆಯಲ್ಲಿ ಶಿಕ್ಷಣವೂ ಮಹತ್ತರವಾದ ಪಾತ್ರವಹಿಸುತ್ತದೆ. ಸಮಾಜ ಮತ್ತು ಸಮುದಾಯದ ವರ್ತನೆಗಲ್ಲಿ ಬದಲಾವಣೆ ತರುವ ಪ್ರಕ್ರಿಯೆಯನ್ನು ಶಿಕ್ಷಣ ಮಾಡುತ್ತದೆ. ಶೈಕ್ಷಣಿಕ ಬದಲಾವಣೆಯು ಸಾಮಾಜಿಕ ಬದಲಾವಣೆಯನ್ನು ಹಿಂಬಾಲಿಸುತ್ತದೆ. ಶಿಕ್ಷಣವು ಪ್ರತಿಯೊಂದು ಸಮುದಾಯದ ಸದಸ್ಯರಿಗೂ ಅಗತ್ಯವಾದುದು. ಶಿಕ್ಷಣವು ಮಾನವರನ್ನು ಪ್ರಜ್ಞಾಶೀಲರನ್ನಾಗಿ ಮಾಡಿ, ವ್ಯವಸ್ಥಿತ ಜೀವನವನ್ನು ರೂಪಿಸಲು ಸಹಾಯ ಮಾಡುತ್ತದೆ.

ಶಿಕ್ಷಣ ಮಾನವಜೀವಿಯನ್ನು ಸಮಾಜ ಜೀವಿಯನ್ನಾಗಿ ರೂಪಿಸುತ್ತದೆ. ಶಿಕ್ಷಣವು ಒಂದು ಸಮೂಹದ ನೈತಿಕ ನಿಯಮಗಳನ್ನು ಪ್ರಸಾರ ಮಾಡಿ ತನ್ಮೂಲಕವಾಗಿ ಯಾವುದನ್ನು ಅಂಗೀಕರಿಸ ಬೇಕು ಮತ್ತು ಯಾವುದನ್ನು ನಿರಾಕರಿಸಬೇಕು, ನಂಬಬೇಕು, ನಂಬಬಾರದು ಎಂಬುದರ ಬಗ್ಗೆ

ಅರಿವನ್ನು ಮೂಡಿಸುತ್ತದೆ. ಶಿಕ್ಷಣದಿಂದ ಸಾಮಾಜಿಕ ವ್ಯವಸ್ಥೆಯ ಪ್ರತಿಯೊಂದು ಕ್ಷೇತ್ರದಲ್ಲಿ ಪರಿವರ್ತನೆಯ ರೂಪಗಳು ಕಂಡು ಬರುತ್ತವೆ. ಮಾನವನ ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕ ಶಕ್ತಿಯನ್ನು ಹೊರಹೊಮ್ಮಿಸುವಲ್ಲಿ ಶಿಕ್ಷಣವು ಮಹತ್ವದ ಪಾತ್ರವನ್ನು ವಹಿಸುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಶಿಕ್ಷಣ ಸಮುದಾಯ ಎಲ್ಲರಿಗೂ ಅನಿವಾರ್ಯವಾಗಿದೆ ಹಾಗೂ ಸಾಮಾಜಿಕ ಬದಲಾವಣೆಯ ಒಂದು ಪ್ರಮುಖ ಸಾಧನವಾಗಿದೆ. ಶಿಕ್ಷಣವು ಜಾತಿ, ಜನಾಂಗ, ಸಮುದಾಯ ಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ತರುತ್ತದೆ. ಜೊತೆಗೆ ಸಮುದಾಯದ ಪುನರ್ರಚನೆಗೆ ಸಹಾಯ ಮಾಡುತ್ತದೆ.

ಹಿಂದೆ ಸಮುದಾಯದ ಮಹಿಳೆ ಮನೆಯಲ್ಲಿಯೇ ಇದ್ದು ಗೃಹಕೃತ್ಯದ ಕೆಲಸ, ಶಿಶುಗಳ ಪಾಲನೆ, ಪೋಷಣೆ, ಮೊದಲಾದ ಕಾರ್ಯಗಳಲ್ಲಿ ಮಾತ್ರ ನಿರತಳಾಗಿದ್ದಳು. ಆದರೆ ಇಂದು ಮಹಿಳೆಯರು ಪುರುಷರಿಗೆ ಸರಿಸಮಾನವಾಗಿ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ದುಡಿಯುತ್ತಿದ್ದಾಳೆ. ಆರ್ಥಿಕವಾಗಿ ಸ್ವಾವಲಂಬಿಯಾಗುತ್ತಿದ್ದಾಳೆ, ಆಕೆಗೂ ಸಮಾನತೆ, ವ್ಯಕ್ತಿ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ, ಕೌಟುಂಬಿಕ ಸ್ವಾತಂತ್ರ್ಯ, ಶೈಕ್ಷಣಿಕ, ರಾಜಕೀಯ ಸ್ವಾತಂತ್ರ್ಯ ಲಭ್ಯವಾಗಿದೆ. ಇವೆಲ್ಲವು ಶಿಕ್ಷಣದ ಹಿನ್ನೆಲೆಯಿಂದಲೇ ಸಾಧ್ಯವಾಗಿದೆ.

ಚಪ್ಪರ್‌ಬಂದ್ ಸಮುದಾಯದ ಶೈಕ್ಷಣಿಕ ಜೀವನದ ಬಗ್ಗೆ ಹೇಳುವುದಾದರೆ, ಅಲೆಮಾರಿತ ನವನ್ನೇ ಮೈಗೂಡಿಸಿಕೊಂಡಿದ್ದ ಈ ಸಮುದಾಯಕ್ಕೆ ಶಿಕ್ಷಣದ ಬಗ್ಗೆ ಕಾಳಜಿಯೇ ಇರಲಿಲ್ಲ. ಇವರು ಸೈನ್ಯದಲ್ಲಿ ಡೇರೆ ಹಾಕುವ ಕೆಲಸದಲ್ಲಿ ನಿರತರಾಗಿದ್ದರಿಂದ, ಸೈನ್ಯ ಯಾವ ಯಾವ ಪ್ರದೇಶಕ್ಕೆ ಹೋಗುತಿತ್ತೋ, ಇವರೂ ಸಹ ಅವರ ಹಿಂದೆಯೇ ಹೋಗಬೇಕಾಗಿದ್ದ ಕಾರಣ, ಹಾಗೂ ಆರ್ಥಿಕವಾಗಿ ತುಂಬಾನೆ ದುರ್ಬಲರಾಗಿದ್ದ ಕಾರಣ, ಇವರಿಗೆ ಶಿಕ್ಷಣ ಪಡೆಯುವ ಅವಕಾಶವೇ ಸಿಕ್ಕಿರುವುದಿಲ್ಲ ಎನ್ನಬಹುದು.

'ಮನೆಯೇ ಮೊದಲ ಪಾಠಶಾಲೆ, ಜನನಿಯೇ ಮೊದಲ ಗುರು' ಎಂಬ ಮಾತು ಪ್ರತಿ ಸಮಾಜದಲ್ಲೂ, ಪ್ರತಿ ಸಮುದಾಯದಲ್ಲೂ ಚಾಲ್ತಿಯಲ್ಲಿದೆ. ಪ್ರತಿಯೊಂದು ಮಗು ತನ್ನ ತಾಯಿಯಿಂದ ಮತ್ತು ಕುಟುಂಬದ ಇತರೆ ಸದಸ್ಯರಿಂದಲೇ ಪ್ರತಿಯೊಂದನ್ನು ಕಲಿಯುತ್ತದೆ. ಇದನ್ನು ಅನೌಪಚಾರಿಕ ಶಿಕ್ಷಣ ಎನ್ನುತ್ತಾರೆ. ಹಾಗೆಯೇ ಈ ಸಮುದಾಯದಲ್ಲೂ ಸಹ ಮಕ್ಕಳು ತಮ್ಮ ಮನೆಯಿಂದಲೇ ಕಲಿಯುವುದನ್ನು ಪ್ರಾರಂಭಿಸುತ್ತಾರೆ. ಮನೆಯಲ್ಲಿ ಮಕ್ಕಳಿಗೆ ಜೀವನಕ್ಕೆ ಬೇಕಾದ ಸಂಪ್ರದಾಯಗಳನ್ನು, ಮೌಲ್ಯಗಳನ್ನು, ನೈತಿಕ ನಿಯಮಗಳನ್ನು, ಇತ್ಯಾದಿಗಳನ್ನು ಕಲಿಸುತ್ತಾರೆ. ಜೊತೆಗೆ ಈ ಸಮುದಾಯ ಮಕ್ಕಳಿಗೆ 'ಮದರಸಾ'ಗಳಿಗೆ ಸಹ ಕಳುಹಿಸುತ್ತಾರೆ. ಅಲ್ಲಿ ಮೌಲ್ವಿಗಳು ಮಕ್ಕಳಿಗೆ ಧಾರ್ಮಿಕ ಶಿಕ್ಷಣವನ್ನು ಕೊಡುತ್ತಾರೆ. ಖುರಾನ್ ಓದುವುದು, ನಮಾಜ್ ಮಾಡುವುದು ಇತ್ಯಾದಿ ಧಾರ್ಮಿಕ ವಿಷಯಗಳ ಬಗ್ಗೆ ಭೋದಿಸಲಾಗುತ್ತದೆ. ಜೊತೆಗೆ ಔಪಚಾರಿಕ ಶಿಕ್ಷಣವನ್ನು ಸಹ ಕೊಡುತ್ತಾರೆ.

ಬ್ರಿಟಿಷರು ಇವರನ್ನು 'ಅಪರಾಧಿ ಬುಡಕಟ್ಟು' ಎಂದು ಪರಿಗಣಿಸಿ, ಸೆಟ್ಲ್‌ಮೆಂಟ್‌ಗಳಲ್ಲಿ ಬಂಧಿಸಿದ ನಂತರ ಇವರು ಶಿಕ್ಷಣವನ್ನು ಕಲಿಯುವಂತಾಯಿತು ಹಾಗೂ ಇವರ ಮಕ್ಕಳು ಶಾಲೆಗೆ ಹೋಗುವಂತಾಯಿತು. ಬ್ರಿಟಿಷರ ಕಾಲದಲ್ಲಿ ಈ ಸಮುದಾಯ ಅಲ್ಪ ಪ್ರಮಾಣದ ಶಿಕ್ಷಣವನ್ನು ಪಡೆಯುವಂತಾಯಿತು. ಗದಗ, ಹುಬ್ಬಳ್ಳಿ, ವಿಜಯಪುರ ಮತ್ತು ಬಾಗಲಕೋಟೆ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಇವರು, ಸೆಟ್ಲ್‌ಮೆಂಟ್‌ಗಳಲ್ಲಿ ಅವರಿಗಾಗಿಯೇ ನಿರ್ಮಿಸಿದ್ದ ಶಾಲೆಗಳಲ್ಲಿ ಶಿಕ್ಷಣ ಪಡೆದರು. ಇಲ್ಲಿ ಮಕ್ಕಳು **'ಹಗಲು ಶಾಲೆ'** ಮತ್ತು **'ರಾತ್ರಿ ಶಾಲೆ'** ಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಇಲ್ಲಿ ಶಿಕ್ಷಣದ ಜೊತೆಗೆ ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿರುವ ಅಪರಾಧಿ ಬುಡಕಟ್ಟು ಸಮುದಾಯಗಳ ಮಕ್ಕಳಿಗೆ 'ಸ್ಕೌಟ್ಸ್ ಮತ್ತು ಗೈಡ್ಸ್' ತರಬೇತಿ, ಫುಟ್‌ಬಾಲ್, ವಾಲಿಬಾಲ್, ಹಾಕಿ, ಓಟದ ಸ್ಪರ್ಧೆ ಇತರೆ ಕ್ರೀಡೆಗಳ ತರಬೇತಿ ನೀಡಿ, ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು.

ಭಾರತ ಸ್ವಾತಂತ್ರ್ಯದ ನಂತರ ಇವರ ಶಿಕ್ಷಣದ ಕಡೆಗೆ ಯಾರೂ ಅಷ್ಟಾಗಿ ಗಮನ ನೀಡಲಿಲ್ಲ, ಸಮುದಾಯದವರೂ ಸಹ ತಮ್ಮ ಹೊಟ್ಟೆ ಪಾಡಿಗಾಗಿ ಮಕ್ಕಳನ್ನು ಚಿಕ್ಕವಯಸ್ಸಿನಲ್ಲೇ ದುಡಿಯಲು ಕಳುಹಿಸಿದರೇ ವಿನಃ ಶಾಲೆಗೆ ಕಳುಹಿಸಲಿಲ್ಲ, ಹೀಗಾಗಿ ಇವರು ಶಿಕ್ಷಣದಿಂದ ವಂಚಿತರಾಗ ತೊಡಗಿದರು. ನಂತರ ಸರ್ಕಾರದ ಉಚಿತ ಮತ್ತು ಕಡ್ಡಾಯ ಶಿಕ್ಷಣದ ನೀತಿ ಗಳಿಂದಾಗಿ ಪ್ರಸ್ತುತದಲ್ಲಿ ಈ ಸಮುದಾಯದ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ, ಆದರೂ ಕೇವಲ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಬೆರಳೆಣಿಕೆಯಷ್ಟು ಜನ ಮಾತ್ರ ಹೆಚ್ಚಿನ ಶಿಕ್ಷಣ ಪಡೆಯುತ್ತಿದ್ದಾರೆ. ಕೇವಲ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವವರು ಮಾತ್ರ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ. ಸಾಮಾನ್ಯರಿಗೆ ಉನ್ನತ ಶಿಕ್ಷಣ ಎಂಬುದು ಕನಸಿನ ಮಾತೇ ಆಗಿದೆ, ಅದರಲ್ಲೂ ಹೆಣ್ಣು ಮಕ್ಕಳಂತೂ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣದಿಂದ ವಂಚಿತರಾಗಿದ್ದಾರೆ. **'ಬಡೇ ಭಾಯಿ'** ಗುಂಪಿಗೆ ಹೋಲಿಸಿದರೆ **'ಛೋಟೆ ಭಾಯಿ'** ಗುಂಪು ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣ ಪಡೆಯುತ್ತಿರುವುದು ಕಂಡು ಬರುತ್ತಿದೆ. ಈ ಸಮುದಾಯದ ಮಕ್ಕಳು ಶಿಕ್ಷಣದಿಂದ ವಂಚಿತರಾಗುವುದಕ್ಕೆ ಕಾರಣಗಳೆಂದರೆ ಇವರ ಆರ್ಥಿಕ ದುಃಸ್ಥಿತಿ ಹಾಗೂ ಸರ್ಕಾರ ನಿರ್ಲಕ್ಷ್ಯ ಎಂದು ಹೇಳಬಹುದು.

**ಕೋಷ್ಟಕ ೫.೧: ಸಮೀಕ್ಷೆಗೊಳಪಟ್ಟ ಚಪ್ಪರ್‌ಬಂದ್ ಸಮುದಾಯದ ಸಾಕ್ಷರತೆ ಪ್ರಮಾಣ**

| ಜಿಲ್ಲೆಗಳು | ಕುಟುಂಬಗಳು | ೦–೫ ಸಾಕ್ಷರರ್ಹರಲ್ಲದವರು | | | ೬–೬೧ ಸಾಕ್ಷರರ್ಹರು | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಗದಗ | ೨೧೫ | ೨೯ | ೩೯ | ೬೮ | ೩೬೪ | ೩೪೯ | ೭೧೩ |
| ದಾವಣಗೆರೆ | ೧೦ | ೧ | ೦ | ೧ | ೨೧ | ೨೧ | ೪೨ |
| ಧಾರವಾಡ | ೮೯ | ೧೭ | ೧೯ | ೩೬ | ೧೮೫ | ೧೮೨ | ೩೬೭ |
| ಬಾಗಲಕೋಟೆ | ೬೩ | ೧೩ | ೨೧ | ೩೩ | ೧೩೬ | ೧೬೦ | ೨೯೬ |
| ವಿಜಯಪುರ | ೨೬೭ | ೭೫ | ೬೬ | ೧೪೧ | ೭೧೭ | ೬೨೫ | ೧೩೪೨ |
| **ಒಟ್ಟು** | **೬೪೪** | **೧೩೫** | **೧೪೫** | **೨೭೯** | **೧೪೨೩** | **೧೩೩೭** | **೨೭೬೦** |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ೦–೫ ವಯಸ್ಸಿನವರು ಶೇ.೯.೩ರಷ್ಟು ಪ್ರಮಾಣದಲ್ಲಿದ್ದಾರೆ. ಇದು ಶಿಕ್ಷಣ ಪಡೆಯಲು ಅರ್ಹರಲ್ಲದ ಗುಂಪಾಗಿದೆ. ಇದರಲ್ಲಿ ಪುರುಷರು ಶೇ.೪.೫ರಷ್ಟು ಮತ್ತು ಮಹಿಳೆಯರು ಶೇ.೪.೮ರಷ್ಟು ಪ್ರಮಾಣದಲ್ಲಿದ್ದಾರೆ. ೬–೬೧ ವಯಸ್ಸಿನವರು ಶೇ.೯೦.೭ರಷ್ಟು ಪ್ರಮಾಣದಲ್ಲಿದ್ದಾರೆ. ಇದು ಸಾಕ್ಷರರ್ಹರ ಗುಂಪಾಗಿದೆ. ಇದರಲ್ಲಿ ಪುರುಷರು ಶೇ.೪೬.೭ರಷ್ಟು ಮತ್ತು ಮಹಿಳೆಯರು ಶೇ.೪೪ರಷ್ಟು ಪ್ರಮಾಣದಲ್ಲಿದ್ದಾರೆ.

ಕೋಷ್ಟಕ ೫.೨: ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ ಜಿಲ್ಲಾವಾರು, ಲಿಂಗವಾರು ಸಾಕ್ಷರರ್ಹರು, ಸಾಕ್ಷರಸ್ಥರು ಮತ್ತು ನಿರಕ್ಷರಿಗಳು

| ಕ್ರ. ಸಂ. | ಜಿಲ್ಲೆಗಳು | ಕುಟುಂಬಗಳು | ಸಾಕ್ಷರರ್ಹರು | | | ಸಾಕ್ಷರಸ್ಥರು | | | ನಿರಕ್ಷರಿಗಳು | | |
|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ೨೧೫ | ೩೬೪ | ೩೪೯ | ೭೧೩ | ೨೯೯ | ೨೪೫ | ೫೪೪ | ೬೫ | ೧೦೪ | ೧೬೯ |
| ೨ | ದಾವಣಗೆರೆ | ೧೦ | ೨೧ | ೨೧ | ೪೨ | ೧೬ | ೧೪ | ೩೦ | ೫ | ೭ | ೧೨ |
| ೩ | ಧಾರವಾಡ | ೮೯ | ೧೮೫ | ೧೮೨ | ೩೬೭ | ೧೪೮ | ೧೩೫ | ೨೮೩ | ೩೭ | ೪೭ | ೮೪ |
| ೪ | ಬಾಗಲಕೋಟೆ | ೬೩ | ೧೩೬ | ೧೬೦ | ೨೯೬ | ೧೧೬ | ೧೨೦ | ೨೩೬ | ೨೦ | ೪೦ | ೬೦ |
| ೫ | ವಿಜಯಪುರ | ೨೬೭ | ೭೧೭ | ೬೨೫ | ೧೩೪೨ | ೪೭೮ | ೩೩೭ | ೮೧೫ | ೨೩೯ | ೨೮೮ | ೫೨೭ |
| | ಒಟ್ಟು | ೬೪೪ | ೧೪೨೩ | ೧೩೩೭ | ೨೭೬೦ | ೧೦೫೮ | ೮೫೧ | ೧೯೦೮ | ೩೬೬ | ೪೮೬ | ೮೫೨ |

**ಲಂಬಚಿತ್ರ ೫.೧: ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ**

**ಲಿಂಗವಾರು ಸಾಕ್ಷರಸ್ಥರು ಮತ್ತು ನಿರಕ್ಷರಿಗಳ ಪ್ರಮಾಣ**




| | ಸಾಕ್ಷರಸ್ಥರು | | | ನಿರಕ್ಷರಿಗಳು | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಗದಗ | ೨೯೯ | ೨೪೫ | ೫೪೪ | ೬೫ | ೧೦೪ | ೧೬೯ |
| ದಾವಣಗೆರೆ | ೧೬ | ೧೪ | ೩೦ | ೫ | ೭ | ೧೨ |
| ಧಾರವಾಡ | ೧೪೮ | ೧೩೫ | ೨೮೩ | ೩೭ | ೪೭ | ೮೪ |
| ಬಾಗಲಕೋಟೆ | ೧೧೬ | ೧೨೦ | ೨೩೬ | ೨೦ | ೪೦ | ೬೦ |
| ವಿಜಯಪುರ | ೪೭೮ | ೩೩೭ | ೮೧೫ | ೨೩೯ | ೨೮೮ | ೫೨೭ |

ಮೇಲಿನ ಕೋಷ್ಟಕ ಮತ್ತು ಲಂಬಚಿತ್ರದಲ್ಲಿ ತೋರಿಸಿರುವಂತೆ ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ಸಾಕ್ಷರರ್ಹರ ಗುಂಪು ಶೇ.೯೦.೭ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಶಿಕ್ಷಣ ಪಡೆದ ಸಾಕ್ಷರಸ್ಥರು ಶೇ.೬೨.೭ರಷ್ಟು ಪ್ರಮಾಣದಲ್ಲಿದ್ದಾರೆ. ಅದರಲ್ಲಿ ಪುರುಷರು ಶೇ.೩೪.೭ರಷ್ಟು ಮತ್ತು ಮಹಿಳೆಯರು ಶೇ.೨೮ರಷ್ಟು ಪ್ರಮಾಣದಲ್ಲಿದ್ದಾರೆ. ಶಿಕ್ಷಣದಿಂದ ವಂಚಿತವಾದ ನಿರಕ್ಷರಿಗಳು ಶೇ.೨೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೨ರಷ್ಟು ಮತ್ತು ಮಹಿಳೆಯರು ಶೇ.೧೬ರಷ್ಟು ಪ್ರವಮಾಣದಲ್ಲಿದ್ದಾರೆ. ಇದರಿಂದ ಈ ಸಮುದಾಯ ಶಿಕ್ಷಣದಿಂದ ವಂಚಿತವಾಗಿರುವುದರ ಜೊತೆಗೆ ಮಹಿಳೆ ಶೈಕ್ಷಣಿಕವಾಗಿ ಕಡೆಗಣಿಸಲ್ಪಟ್ಟಿರುವುದು ತಿಳಿದುಬರುತ್ತದೆ.

**ಕೋಷ್ಟಕ ೫.೩: ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ**

**ಲಿಂಗವಾರು ಶೈಕ್ಷಣಿಕ ಹಂತಗಳು**

| ಶೈಕ್ಷಣಿಕ ಹಂತ | ಗಂಡು | ಹೆಣ್ಣು | ಒಟ್ಟು |
|---|---|---|---|
| ಪ್ರಾಥಮಿಕ | ೩೪೧ | ೨೯೧ | ೬೩೨ |
| ಮಾಧ್ಯಮಿಕ | ೨೦೫ | ೨೦೫ | ೪೧೦ |
| ಪ್ರೌಢಶಾಲೆ | ೩೪೨ | ೨೫೯ | ೬೦೧ |
| ಡಿಪ್ಲೋಮಾ | ೪೧ | ೫ | ೪೬ |

| | | | |
|---|---|---|---|
| ಪದವಿ ಪೂರ್ವ | ೭೩ | ೫೭ | ೧೩೦ |
| ಪದವಿ | ೩೨ | ೧೩ | ೪೫ |
| ಸ್ನಾತಕೋತ್ತರ | ೨೨ | ೨೧ | ೪೩ |
| ಇತರೆ | ೧ | ೦ | ೧ |
| ಒಟ್ಟು | ೧೦೫೭ | ೮೫೧ | ೧೯೦೮ |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ಸಾಕ್ಷರಸ್ಥರ ಪ್ರಮಾಣ ಶೇ.೬೨.೭ರಷ್ಟು ಇದ್ದು, ಅದನ್ನು ಮೇಲಿನ ಕೋಷ್ಟಕದಲ್ಲಿ ತಿಳಿಸಲಾಗಿದೆ. ಪ್ರಾಥಮಿಕ ಶಿಕ್ಷಣ ಪಡೆದವರು ಶೇ.೨೦.೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೧.೩ರಷ್ಟು, ಮಹಿಳೆಯರು ಶೇ.೯.೫ರಷ್ಟು ಪ್ರಮಾಣದಲ್ಲಿದ್ದಾರೆ. ಮಾಧ್ಯಮಿಕ ಶಿಕ್ಷಣ ಪಡೆದವರು ಶೇ.೧೩.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಮತ್ತು ಮಹಿಳೆಯರು ಶೇ.೬.೭ರಷ್ಟು ಸಮ ಪ್ರಮಾಣದಲ್ಲಿದ್ದಾರೆ. ಪ್ರೌಢ ಶಿಕ್ಷಣ ಪಡೆದವರು ಶೇ.೧೯.೮ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧೧.೩ರಷ್ಟು, ಮಹಿಳೆಯರು ಶೇ.೮.೫ರಷ್ಟು ಪ್ರಮಾಣದಲ್ಲಿದ್ದಾರೆ. ಡಿಪ್ಲೋಮ ಶಿಕ್ಷಣ ಪಡೆದವರು ಶೇ.೧.೬ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧.೩ರಷ್ಟು, ಮಹಿಳೆಯರು ಶೇ.೦.೩ರಷ್ಟು ಪ್ರಮಾಣದಲ್ಲಿದ್ದಾರೆ. ಪದವಿಪೂರ್ವ ಶಿಕ್ಷಣ ಪಡೆದವರು ಶೇ.೪.೨ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨.೪ರಷ್ಟು, ಮಹಿಳೆಯರು ಶೇ.೧.೮ರಷ್ಟು ಪ್ರಮಾಣದಲ್ಲಿದ್ದಾರೆ. ಪದವಿ ಶಿಕ್ಷಣ ಪಡೆದವರು ಶೇ.೧.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೧ರಷ್ಟು, ಮಹಿಳೆಯರು ಶೇ.೦.೪ರಷ್ಟು ಪ್ರಮಾಣದಲ್ಲಿದ್ದಾರೆ. ಸ್ನಾತಕೋತ್ತರ ಶಿಕ್ಷಣ ಪಡೆದವರು ಶೇ.೧.೪ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೦.೮ರಷ್ಟು, ಮಹಿಳೆಯರು ಶೇ.೦.೬ರಷ್ಟು ಪ್ರಮಾಣದಲ್ಲಿದ್ದಾರೆ. ಇತರೆ ಶಿಕ್ಷಣ ಪಡೆದವರು ಶೇ.೦.೧ ರಷ್ಟು ಪ್ರಮಾಣದಲ್ಲಿ ಪುರುಷರು ಮಾತ್ರ ಇದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ, ಈ ಸಮುದಾಯ ಶೈಕ್ಷಣಿಕವಾಗಿ ತುಂಬಾನೆ ಹಿಂದುಳಿದಿದ್ದಾರೆ. ಇವರು ಆರ್ಥಿಕವಾಗಿ ದುರ್ಬಲರಾಗಿದ್ದರಿಂದ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲೆ ಶಾಲೆ ಬಿಡಿಸಿ, ದುಡಿಯಲು ಕಳುಹಿಸುತ್ತಾರೆ. ಹಾಗಾಗಿ ಇವರ ಶೈಕ್ಷಣಿಕ ಪ್ರಮಾಣ ತುಂಬಾನೆ ಕಡಿಮೆ ಇದೆ. ಅದರಲ್ಲೂ ಹೆಣ್ಣು ಮಕ್ಕಳ ಶೈಕ್ಷಣಿಕ ಪ್ರಮಾಣ ಅತ್ಯಂತ ಶೋಚನೀಯವಾಗಿದೆ.

**ವೃತ್ತಚಿತ್ರ ೫.೧: ಚಪ್ಪರ್‌ಬಂದ್ ಸಮುದಾಯದ ಲಿಂಗವಾರು ಶೈಕ್ಷಣಿಕ ಹಂತಗಳ ಪ್ರಮಾಣ**




ಮೇಲಿನ ವೃತ್ತಚಿತ್ರವು ಚಪ್ಪರ್‌ಬಂದ್ ಸಮುದಾಯದ ಲಿಂಗವಾರು ಶೈಕ್ಷಣಿಕ ಹಂತಗಳ ಒಟ್ಟು ಪ್ರಮಾಣವನ್ನು ಸೂಚಿಸುತ್ತದೆ.

**ಚಪ್ಪರ್‌ಬಂದ್ ಸಮುದಾಯದ ಆರ್ಥಿಕ ಜೀವನ**

ಪ್ರಾಚೀನ ಕಾಲದಲ್ಲಿ ರಚಿತವಾದ ವರ್ಣವ್ಯವಸ್ಥೆಯು ನಂತರದ ದಿನಗಳಲ್ಲಿ ವರ್ಗಗಳಾಗಿ ರೂಪುಗೊಂಡಿತು. ತದನಂತರ ಜಾತಿಗಳಾಗಿ ಮಾರ್ಪಾಡು ಹೊಂದಿತು. ಪ್ರಾಚೀನ ಕಾಲದಿಂದ ಬ್ರಿಟಿಷರು ಭಾರತಕ್ಕೆ ಬರುವವರೆಗಿನ ಅವಧಿಯವರೆಗೆ ಪ್ರತಿಯೊಂದು ಸಮುದಾಯಗಳು ತನ್ನದೇ ಆದ ಕುಲಕಸುಬುಗಳನ್ನು ಹೊಂದಿದ್ದವು. ಇಂದಿಗೂ ಗ್ರಾಮೀಣ ಮತ್ತು ಆದಿವಾಸಿ ಸಮುದಾಯಗಳಲ್ಲಿ ಈ ವ್ಯವಸ್ಥೆ ಕಂಡು ಬರುವುದಾದರೂ, ಮೊದಲಿನಷ್ಟು ಪ್ರಭಾವಿಯಾಗಿ ಗೋಚರಿಸುತ್ತಿಲ್ಲ. ಆಧುನೀಕರಣ, ನಗರೀಕರಣ, ಕೈಗಾರೀಕರಣ ಮುಂತಾದರ ಪ್ರಭಾವಗಳಿಂದಾಗಿ ಸಮುದಾಯದ ಮೂಲ ವೃತ್ತಿಯಲ್ಲಿ ವ್ಯಾಪಕವಾದ ಬದಲಾವಣೆಗಳು ಗೋಚರವಾಗುತ್ತಿವೆ. ಒಂದು ಸಮುದಾಯವು ಅನುಸರಿಸುತ್ತಿರುವ ವೃತ್ತಿ, ಸಂಪತ್ತಿನ ಸದುಪಯೋಗ, ಶಿಕ್ಷಣ ಸಂಪನ್ಮೂಲದ ಪಾತ್ರ, ಕೌಟುಂಬಿಕ ಜೀವನದ ಆಧಾರದ ಮೇಲೆ ಆ ಸಮುದಾಯದ ಸ್ಥಾನ-ಮಾನಗಳನ್ನು ಅರಿಯಬಹುದಾಗಿದೆ. ಆರ್ಥಿಕ ಚಟುವಟಿಕೆಯ ಆಧಾರದ ಮೇಲೆ ಒಂದು ಸಮುದಾಯದ ರೀತಿ-ನೀತಿಗಳನ್ನು ಗುರುತಿಸಬಹುದಾಗಿದೆ. ಸಮುದಾಯದ ಜೀವನದಲ್ಲಿ ಆರ್ಥಿಕತೆಯು ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಸಮುದಾಯದ ಆರ್ಥಿಕ

ಚಟುವಟಿಕೆಯು ಪ್ರಬಲವಾಗಿದ್ದರೆ ಅಥವಾ ಉತ್ತಮವಾಗಿದ್ದರೆ, ಆ ಸಮುದಾಯದ ಇತರ ಕ್ಷೇತ್ರಗಳು ಬಲಿಷ್ಠವಾಗಿರುವುದಕ್ಕೆ ಸಹಕಾರಿಯಾಗುತ್ತದೆ. ಸಮುದಾಯದ ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳ ಸ್ಥಾನಮಾನಗಳು ನಿರ್ಧಾರವಾಗುತ್ತವೆ. ಸಮುದಾಯದ ಅಭಿವೃದ್ಧಿಯಲ್ಲಿ ಆರ್ಥಿಕ ವ್ಯವಸ್ಥೆಯು ಅಗ್ರಮಾನ್ಯವಾಗಿದೆ. ಒಂದು ಸಮುದಾಯದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅರ್ಥವ್ಯವಸ್ಥೆಯು ಮಹತ್ವದ ಪಾತ್ರ ಮಹಿಸುತ್ತದೆ.

ಪ್ರತಿಯೊಂದು ಸಮುದಾಯಕ್ಕೂ ಯಾವುದಾದರೊಂದು ಮೂಲಕಸುಬು ಇದ್ದೇ ಇರುತ್ತದೆ. ಈ ಮೂಲಕವಾಗಿಯೇ ಸಮಾಜದಲ್ಲಿ ಶ್ರಮ ವಿಭಜನೆಯ ಪ್ರಾಮುಖ್ಯತೆ ತಿಳಿಯುತ್ತದೆ. ಎಮಿಲಿ ಡರ್ಖಿಂರವರು ಶ್ರಮ ವಿಭಜನೆ ವಿಚಾರವನ್ನು ವಿಕಾಸತತ್ವದ ಬೆಳಕಿನಲ್ಲಿ ವಿವರಿಸಿರುವರು, ಕೇವಲ ಆರ್ಥಿಕ ಇಲ್ಲವೇ ಇತರ ಅಂಶಗಳಿಗೇ ಹೆಚ್ಚಿನ ಆದ್ಯತೆಕೊಡದೆ, ಸಮಾಜಶಾಸ್ತ್ರೀಯ ನೆಲೆಗಟ್ಟಿನ ಮೇಲೆ ವ್ಯವಸ್ಥಿತವಾಗಿ ವಿಶ್ಲೇಷಿಸಿರುವರು. ಅವರ ಪ್ರಕಾರ ಶ್ರಮವಿಭನೆಯು ಸಮಾಜದ ಉಗಮದ ಹಂತದಿಂದಲೂ ಜೊತೆ ಜೊತೆಯಾಗಿ ಸಾಗಿಬರುತ್ತಿದ್ದು, ಸಮಾಜವು ಸಂಕೀರ್ಣಗೊಂಡಂತೆಲ್ಲಾ ತಾನೂ ಸಂಕೀರ್ಣಗೊಳ್ಳುತ್ತಾ ಸಾಗಿರುವುದು. ಸಮಾಜದ ಸಂಕೀರ್ಣತೆಯಿಂದಾಗಿ ಹೆಚ್ಚಿನ ಪ್ರಮಾಣದ ಶ್ರಮ ವಿಭಜನೆ ಹಾಗೂ ಕಾರ್ಯ ನೈಪುಣ್ಯತೆಗಳು ಅಗತ್ಯವಾಗಿರುವುವು. ಸಮಾಜದಲ್ಲಿ ಜನಸಂಖ್ಯೆ ಅಧಿಕಗೊಂಡಂತೆ ಶ್ರಮವಿಭಜನೆಯೂ ವ್ಯಾಪಕವಾಗಿ ವಿಸ್ತಾರಗೊಳ್ಳುತ್ತಾ ಹೋಗುವುದು. ಎಮಿಲಿ ಡರ್ಖಿಂರವರು ಶ್ರಮ ವಿಭಜನೆಯು ಆದಿವಾಸಿ ಸಮಾಜದಲ್ಲಿ ಯಾಂತ್ರಿಕ ಐಕ್ಯತೆಯನ್ನುಂಟು ಮಾಡಿದರೆ, ಆಧುನಿಕ ಸಮಾಜದಲ್ಲಿ ಜೈವಿಕ ಐಕ್ಯತೆಯನ್ನು ಬೆಳೆಸುತ್ತದೆ ಎಂದು ಅಭಿಪ್ರಾಯ ಪಟ್ಟಿರುವರು.

ಶ್ರಮ ವಿಭಜನೆಯ ನೈಪುಣ್ಯತೆಗಳನ್ನು ಪಡೆದ ಒಂದೊಂದು ಸಮೂಹ ತನ್ನ ಸಮುದಾಯ ವನ್ನು ಸೃಷ್ಟಿಮಾಡಿತು. ತಾವು ಮಾಡುವ ವೃತ್ತಿಯ(ಕಸುಬಿನ) ಹಿನ್ನೆಲೆಯಂದರೆ ಆ ಸಮುದಾಯ ವನ್ನು ಗುರುತಿಸಲು ಪ್ರಾರಂಭಿಸಿದರು, ಹಾಗಾಗಿ ಕಸುಬುಗಳಿಗುಣವಾಗಿ ಸಮುದಾಯಗಳು ರೂಪುಗೊಂಡವು. ಮುಂದೇ ಅವೇ ಕುಲಗಳಾಗಿ ಮಾರ್ಪಾಡಾದವು ಎನ್ನಬಹುದು. ಒಂದು ಕಾಲಕ್ಕೆ ಕಾಡನ್ನೇ ನಂಬಿ ಕಾಡಿನ ಮಧ್ಯೆ ಸ್ವತಂತ್ರವಾಗಿ ಬದುಕುತ್ತಿದ್ದ ಬುಡಕಟ್ಟುಗಳು ಬ್ರಿಟಿಷರ ಪ್ರವೇಶದಿಂದಾಗಿ ಮತ್ತು ಅವರು ಹೊತ್ತು ತಂದ ಔದ್ಯೋಗಿಕರಣದಿಂದಾಗಿ ಜರ್ಜರಿತಗೊಂಡವು, ಅದಕ್ಕಿಂತ ಹೆಚ್ಚಾಗಿ ದೇಶಿ ಮೂಲದ ಕುಶಲಕರ್ಮಿಗಳನ್ನು ಮತ್ತು ವ್ಯಾಪಾರಿಗಳನ್ನು ತುಳಿದು ಆ ಸಮುದಾಯಗಳು ಆರ್ಥಿಕವಾಗಿ ದುರ್ಬಲಗೊಳ್ಳುವಂತೆ ವಸಾಹತುಶಾಹಿ ವ್ಯವಸ್ಥೆ ನೋಡಿ ಕೊಂಡಿತು. ಈ ಜನರನ್ನು ನಿಯಂತ್ರಿಸಲೆಂದೇ ಬ್ರಿಟಿಷ್ ವಸಾಹತು ಶಾಹಿಯು ಹೊಸ ಹೊಸ ಕಾನೂನು ಕಾಯ್ದೆಗಳನ್ನು ಜಾರಿಗೊಳಿಸಿತು. ಇದರಿಂದಾಗಿ ಅವರು ತಮ್ಮ ಮೂಲ ವೃತ್ತಿಗಳಿಂದ

ದೂರವಾದರು. ಒಟ್ಟಾರೆಯಾಗಿ ಆ ಜನರನ್ನು ಬಲವಂತವಾಗಿ ತಮ್ಮ ಅಡಿ ಆಳುಗಳಾಗಿ ರೂಪಿಸಿಕೊಳ್ಳುವಲ್ಲಿ ಅದು ಯಶಸ್ವಿಯಾಯಿತು. ಆ ಮೂಲಕ ಅವರ ಆರ್ಥಿಕ ಸ್ವಾವಲಂಬಿತನ ವನ್ನು ವಸಾಹತುಶಾಹಿಯು ಅತಂತ್ರಗೊಳಿಸಿತು. ಸ್ವಚ್ಛಂದವಾಗಿ, ಸ್ವತಂತ್ರವಾಗಿ ಬದುಕುತ್ತಿದ್ದ ಸಮುದಾಯಗಳನ್ನು ಬ್ರಿಟಿಷ್ ಆಡಳಿತ ಒಬ್ಬರ ಅಧೀನ ಆಳುಗಳಾಗಿ ದುಡಿಯುವಂತೆ ಮಾಡಿತು. ಈ ರೀತಿಯಾಗಿ ಅನೇಕ ಸಮುದಾಯಗಳು ತಮ್ಮ ಮೂಲ ವೃತ್ತಿಯಿಂದ ದೂರವಾಗಿ, ಪರ್ಯಾಯ ಕೆಲಸಗಳನ್ನು ಮಾಡುವಂತಾಯಿತು.

ಭಾರತ ಸ್ವತಂತ್ರಗೊಂಡ ನಂತರವೂ ಸಹ ಆ ಸಮುದಾಯಗಳ ಬದುಕು ಬದಲಾಗಲಿಲ್ಲ. ಇಲ್ಲಿಯ ಅಧಿಕಾರಿಗಳು ಮತ್ತು ಸರ್ಕಾರಗಳು ಬುಡಕಟ್ಟುಗಳನ್ನು, ಅಲೆಮಾರಿ ಸಮುದಾಯಗಳನ್ನು, ವಿಮುಕ್ತ ಬುಡಕಟ್ಟು ಸಮುದಾಯಗಳನ್ನು ಸಂಪೂರ್ಣವಾಗಿ ಕಡೆಗಣಿಸಿವೆ. ಕೆಲವೇ ಬೆರಳೆಣಿಕೆಯಷ್ಟು ಬುಡಕಟ್ಟುಗಳ ಬಗ್ಗೆ ಮಾತ್ರ ಸರ್ಕಾರ ಗಮನ ಹರಿಸುತ್ತಿದೆ. ಬುಡಕಟ್ಟುಗಳಿಗಾಗಿ ಸರ್ಕಾರ ಅನೇಕ ಯೋಜನೆಗಳನ್ನು ರೂಪಿಸಿದ್ದರೂ ಸಹ, ಅವುಗಳನ್ನು ಬುಡಕಟ್ಟುಗಳಿಗೆ ತಲುಪಿಸುವಲ್ಲಿ ಸರ್ಕಾರ ವಿಫಲವಾಗಿದೆ. ಹಾಗೆ ಕಡೆಗಣಿಸಲ್ಪಟ್ಟ ಸಮುದಾಯಗಳಲ್ಲಿ ಚಪ್ಪರ್‌ಬಂದ್ ಸಮುದಾಯವೂ ಒಂದು. ಈ ಸಮುದಾಯವೂ ಸಹ ತನ್ನದೇ ಆದ ಕುಲಕಸುಬನ್ನು ಹೊಂದಿತ್ತು. ಈ ಸಮುದಾಯದವರು ಸೈನಿಕ ಶಿಬಿರಗಳಲ್ಲಿ ಡೇರೆ ಹಾಕುವ ಕೆಲಸವನ್ನು ಮಾಡುತ್ತಿದ್ದರು. ಅಂದರೆ ಚಪ್ಪರ ಹಾಕುವ ಕೆಲಸದಲ್ಲಿ ನಿರತರಾಗಿದ್ದರಿಂದ ಈ ಸಮುದಾಯ ದವರನ್ನು **"ಚಪ್ಪರ್‌ಬಂದ್"** ಹೆಸರಿನಿಂದ ಗುರುತಿಸಲಾಯಿತು. ಬ್ರಿಟಿಷರ ಆಗಮನದಿಂದಾಗಿ ಇವರು ತಮ್ಮ ಮೂಲ ವೃತ್ತಿಯಿಂದ ವಂಚಿತರಾದರು. ನಂತರ ಭಿಕ್ಷುಕರಾಗಿ, ಫಕೀರರಾಗಿ, ಸಣ್ಣ-ಪುಟ್ಟ ವ್ಯಾಪರಗಳನ್ನು ಮಾಡಲು ಆರಂಭಿಸಿದರು. ಬ್ರಿಟಿಷರ ಹೊಸ-ಹೊಸ ಕಾಯ್ದೆ ಕಾನೂನುಗಳಿಂದಾಗಿ ಈ ಸಮುದಾಯ ಆರ್ಥಿಕ ದುಃಸ್ಥಿತಿಗೆ ಒಳಗಾಯಿತು.

- **ಪಾರಂಪರಿಕ ಆರ್ಥಿಕತೆ**

ಪ್ರತಿಯೊಂದೂ ಸಮುದಾಯಗಳಲ್ಲಿ ಕುಟುಂಬಗಳಲ್ಲೂ ಶ್ರಮ ವಿಭಜನೆಯನ್ನು ಕಾಣಬಹುದಾಗಿದೆ. ಕುಟುಂಬದಲ್ಲಿ ಹಿರಿಯರು ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸುತ್ತಾರೆ. ಪುರುಷರು ಹೊರಗೆ ಹೋಗಿ ದುಡಿಯುತ್ತಾರೆ. ಮಹಿಳೆಯರು ಮನೆಯಲ್ಲಿ ಎಲ್ಲಾ ಕೆಲಸಗಳನ್ನು ಮಾಡುತ್ತಾರೆ, ಜೊತೆಗೆ ಪುರುಷರಿಗೆ ಅವರ ಕೆಲಸಗಳಲ್ಲಿ ಸಹಾಯ ಮಾಡುತ್ತಾರೆ. ಚಿಕ್ಕವರು ಮನೆ ಕೆಲಸಗಳಲ್ಲಿ ಹಿರಿಯರಿಗೆ ಸಹಾಯ ಮಾಡುತ್ತಾರೆ. ಈ ರೀತಿಯ ಶ್ರಮ ವಿಭಜನೆ ಪ್ರತಿಯೊಂದು ಕುಟುಂಬದಲ್ಲೂ ಕಂಡುಬರುತ್ತದೆ. ಈ ಸಮುದಾಯದ ಕುಟುಂಬದಲ್ಲೂ ಕಂಡುಬರುತ್ತದೆ. ಈ ಸಮುದಾಯದ ಪುರುಷರು ಕೆಲಸ ಮಾಡುತ್ತಾ ಹೆಚ್ಚಿನ ಸಮಯ ಕುಟುಂಬಗಳಿಂದ ದೂರ ಇರುತ್ತಿದ್ದರು. ಆಗ ಮನೆಯ ಎಲ್ಲಾ ಜವಾಬ್ದಾರಿಗಳನ್ನು

ಮಹಿಳೆಯೆ ನಿರ್ವಹಿಸುತ್ತಿದ್ದಳು. ಅವರಿಗೆ ಮನೆಯ ಹಿರಿಯರು ಮತ್ತು ಕಿರಿಯರು ಸಹಾಯ ಮಾಡುತ್ತಿದ್ದರು.

ಸಮುದಾಯದ ಹಿರಿಯರು ಹೇಳುವಂತೆ, "ಇವರು ಸೈನ್ಯ ಶಿಬಿರಗಳಿಗೆ ಡೇರೆಗಳನ್ನು ಹಾಕುವ ಕೆಲಸಕ್ಕಾಗಿ ಬಾಬರ್‌ನೊಂದಿಗೆ ಅಫ್‌ಘಾನ್ ದೇಶದಿಂದ ಭಾರತಕ್ಕೆ ಬಂದಿದ್ದರು. ಅಫ್‌ಘಾನ್ ದೇಶದಲ್ಲಿ ಇದೊಂದು ಬುಡಕಟ್ಟು ಸಮುದಾಯವಾಗಿರಬಹುದು.

ಆದರೆ ಅಧ್ಯಯನಕಾರರ ಪ್ರಕಾರ ಇವರು ಮೂಲತಃ ಹಿಂದೂಗಳಾಗಿದ್ದು, ನಂತರ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿದ್ದಾರೆ. ಒಂದು ವೇಳೆ ಇರು ನಿಜವಿದ್ದರೂ ಸಹ ಇವರು ಇಲ್ಲಿಯ ಯಾವುದೋ ಒಂದು ಬುಡಕಟ್ಟು ಪಂಗಡಕ್ಕೆ ಸೇರಿರಬಹುದು. ನಂತರ ಮುಸ್ಲಿಂ ರಾಜರ ಪ್ರಭಾವದಿಂದಾಗಿ, ಇಸ್ಲಾಂಗೆ ಮತಾಂತರಗೊಂಡು, ಸೈನಿಕ ಶಿಬಿರಗಳಲ್ಲಿ ಡೇರೆ ಹಾಕುವ ಕೆಲಸಕ್ಕೆ ಸೇರಿರಬಹುದು. ಚಪ್ಪರ್ ಎಂದರೆ ಡೇರೆ/ಚಪ್ಪರ ಮತ್ತು 'ಬಂದ್' ಎಂದರೆ ಹಾಕು/ಕಟ್ಟು ಎಂದರ್ಥ. ಹಾಗಾಗಿ ಇವರನ್ನು 'ಚಪ್ಪರ್‌ಬಂದ್' ಎಂದು ಕರೆಯಲಾಗುತ್ತದೆ.

ಒಟ್ಟಿನಲ್ಲಿ ಆದಿಯಲ್ಲಿ ಚಪ್ಪರ್‌ಬಂದರು ಮೊಘಲ್ ಸೈನ್ಯದಲ್ಲಿ ಬಿಡಾರ/ಡೇರೆಗಳನ್ನು ನಿರ್ಮಿಸುವ ಕೆಲಸ ಮಾಡುತ್ತಿದ್ದರು. ನಂತರ ಯುದ್ಧಗಳು ಕೊನೆಗೊಂಡು ಬ್ರಿಟಿಷರು ವಿಜಯಪುರವನ್ನು ಆಕ್ರಮಿಸಿಕೊಂಡ ನಂತರ ಇವರು ಈ ಕೆಲಸವನ್ನು ಕಳೆದುಕೊಂಡು, ಆರ್ಥಿಕವಾಗಿ ತೊಂದರೆ ಅನುಭವಿಸತೊಡಗಿದರು. ನಂತರ ಕೆಲಸವನ್ನರಿಸುತ್ತಾ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಆರಂಭಿಸಿದರು. ಮೊದಲು ಸಣ್ಣ-ಪುಟ್ಟ ಚಿಲ್ಲರೆ ವ್ಯಾಪಾರಗಳನ್ನು ಮಾಡತೊಡಗಿದರು. ನಂತರ ಭಿಕ್ಷುಕರಾಗಿ, ಕಪಟ ಫಕೀರರಾಗಿ ಜೀವನ ನಡೆಸಿದರು. ಆಮೇಲೆ ಇವರು ಖೊಟ್ಟಿ ನಾಣ್ಯಗಳನ್ನು ತಯಾರಿಸಿ ಚಲಾವಣೆ ಮಾಡುತ್ತಿದ್ದರೆಂಬ ಆರೋಪ ಇವರ ಮೇಲಿದೆ. ಇವರು ಮೊಘಲ್ ಸೈನ್ಯದಲ್ಲಿದ್ದರಿಂದ ಇವರಿಗೆ ನಾಣ್ಯ ತಯಾರಿಸುವ ಪದ್ಧತಿ ತಿಳಿದಿರಬಹುದು, ಹಾಗಾಗಿ ಕೆಲ ಮೇಲ್ ಸಮುದಾಯರವರು/ಅಧಿಕಾರಿಗಳು ಇವರ ಮೇಲೆ ಒತ್ತಡ ಹೇರಿ ನಾಣ್ಯಗಳನ್ನು ತಯಾರಿಸಿ, ಚಲಾವಣೆ ಮಾಡಿರಬಹುದು. ನಂತರ ತುಂಬಾನೆ ಆರ್ಥಿಕ ಸಮಸ್ಯೆ ಎದುರಾದಾಗ ಇವರೂ ಸಹ ಇದನ್ನೆ ಮುಂದುವರೆಸಿರಬಹುದು. ಇವರು ತಮ್ಮಲ್ಲೇ ಒಂದು ಗುಂಪನ್ನು ನಾಣ್ಯ ತಯಾರಿಸಲು, ಮತ್ತೊಂದು ಗುಂಪನ್ನು ನಾಣ್ಯ ಚಲಾವಣೆ ಮಾಡಲು ರೂಪಿಸಿಕೊಳ್ಳುತ್ತಿದ್ದರು.

ಇವರು ನಕಲಿ ನಾಣ್ಯವನ್ನು ತಯಾರಿಸಲು ಏಕೆ ಆರಂಭಿಸಿದರು ಎಂಬುದರ ಹಿಂದೆ ಒಂದು ಕಥೆ ಇದೆ. "ಮೊಘಲ್ ಆಳ್ವಿಕೆಯಲ್ಲಿ ಚಪ್ಪರ್‌ಬಂದರು ವಿಜಯಪುರ ಜಿಲ್ಲೆಯಲ್ಲಿ ವಾಸವಾಗಿದ್ದರು, ಆ ವೇಳೆಯಲ್ಲಿ 'ಪೀರ್‌ಭಾಯಿ ಪೀರ್ ಮಖಾನ್' ಎಂಬ ಫಕೀರನು ಅದೇ

ಜಿಲ್ಲೆಯಲ್ಲಿ ವಾಸವಾಗಿದ್ದನು. ಒಬ್ಬ ಚಪ್ಪರ್‌ಬಂದನು ಆ ಫಕೀರನಲ್ಲಿ ಬಂದು ಚಪ್ಪರ್‌ಬಂದರಿಗೆ ಒಂದು ಒಳ್ಳೆಯ ಜೀವನ ವಿಧಾನ (ಉದ್ಯೋಗ) ತೋರಿಸುವಂತೆ ದೇವರಿಗೆ ಮೊರೆ ಹೋಗಬೇಕಾಗಿ ವಿನಂತಿಸಿದನು, ಇದಕ್ಕೆ ಫಕೀರನು ಆ ವ್ಯಕ್ತಿಗೆ ಒಂದು ರೂಪಾಯಿ ನಾಣ್ಯವನ್ನು ಕೊಟ್ಟು, ಎಲ್ಲೂ ಹಿಂದೆ ತಿರುಗಿ ನೋಡದೆ ಮನೆಗೆ ಹೋಗುವಂತೆ ತಿಳಿಸಿದನು. ಆ ವ್ಯಕ್ತಿ ಮನೆಗೆ ಓಡುತ್ತ ಹೊರಟಿರಬೇಕಾದರೆ, ಮಾರ್ಗ ಮಧ್ಯದಲ್ಲಿ ಯಾರೋ ಅವನನ್ನು ಕರೆದಂತಾಯಿತು. ಹೀಗಾಗಿ ಅವನು ಹಿಂದಕ್ಕೆ ತಿರುಗಿ ನೋಡುತ್ತಾನೆ, ಆದರೆ ಅಲ್ಲಿ ಯಾರೂ ಇರಲಿಲ್ಲ. ಆಗ ಅವನು ಮನೆಗೆ ಹೋಗಿ, ಫಕೀರನು ಕೊಟ್ಟ ರೂಪಾಯಿಯನ್ನು ನೋಡಿದನು. ಆ ರೂಪಾಯಿ ನಕಲಿ ನಾಣ್ಯವಾಗಿ ಬದಲಾಗಿತ್ತು. ಆ ನಕಲಿ ನಾಣ್ಯದೊಂದಿಗೆ ವ್ಯಕ್ತಿಯು ಪುನಃ ಫಕೀರನಲ್ಲಿಗೆ ಹೋಗಿ ಅವನು ನಕಲಿ ನಾಣ್ಯವನ್ನು ತನಗೆ ಕೊಟ್ಟಿದ್ದಾನೆ ಎಂದು ಆರೋಪಿಸಿದನು. ಇದರಿಂದ ಫಕೀರನು ಕೋಪಿತಗೊಂಡು ಆ ವ್ಯಕ್ತಿ ಮಾರ್ಗ ಮಧ್ಯದಲ್ಲಿ ಹಿಂದಿರುಗಿ ನೋಡಿದ್ದರಿಂದ ನೈಜ ನಾಣ್ಯ ನಕಲಿ ನಾಣ್ಯವಾಗಿ ರೂಪಾಂತರಗೊಂಡಿದೆ ಎಂದು ತಿಳಿಸಿದನು. ಜೊತೆಗೆ ಮುಂದೆ ನೀವು ನಕಲಿ ನಾಣ್ಯ ತಯಾರಿಸಿ ಜೀವನ ಸಾಗಿಸಿ ಎಂದು ಹೇಳುತ್ತಾನೆ. ಅಂದಿನಿಂದ ಅವರು ನಕಲಿ ನಾಣ್ಯ ತಯಾರಕರಾದರು. ಅಂದಿನಿಂದ ಪ್ರತಿ ಭಾನುವಾರ, ತಾವು ಮಾಡಿದ ನಕಲಿ ನಾಣ್ಯ, ಅಚ್ಚು, ಮುಂತಾದವುಗಳನ್ನು ಫಕೀರನ ಮುಂದೆ ಇಟ್ಟು ಪೂಜಿಸುತ್ತಿದ್ದರು. ಕೋಳಿ ಬಲಿ ಸಹ ನೀಡುತ್ತಿದ್ದರು, ಕೋಳಿಯ ಕಣ್ಣು ಮತ್ತು ಪುಕ್ಕ ಕಿತ್ತಿ, ಅದನ್ನು ಬಾಬುಲ್ (Babal), ಬಿರ್(Bir) ಮತ್ತು ತಲ್‌ಮಕಾನ(thalmakah) ಮರಗಳ ಮುಳ್ಳುಗಳಿಗೆ ಸಿಕ್ಕಿಸಿ, ಪೂಜೆ ಮಾಡಿ, ನಂತರ ತಾವುಯಾವ ಕಡೆ ಪ್ರಯಾಣ ಬೆಳೆಸಬೇಕೋ ಆ ದಿಕ್ಕಿಗೆ ಎಸೆದು, ಪ್ರಮಾಣ ಆರಂಬಿಸುತ್ತಿದ್ದರು"(ಚನ್ನ ಎಸ್.ಎಂ: ೨೦೦೪:೧೨೬೧).

**ನಾಣ್ಯ ತಯಾರಿಸುತ್ತಿದ್ದ ವಿಧಾನ**

ಚಪ್ಪರ್‌ಬಂದರು ಒಳ್ಳೆ ಶಕುನವನ್ನು ನೋಡಿ ಯಾರೂ ನೋಡದ ಹಾಗೆ ಮನೆ ಬಿಟ್ಟು ಒಬ್ಬೊಬ್ಬರೇ ಅಥವಾ ಇಬ್ಬಿಬ್ಬರು ಕೂಡಿ ಕಾಲುದಾರಿ ಯಿಂದ ಹೋಗುತ್ತಾರೆ. ಕೆಲವು ವೇಳೆ ಯಾರಿಗೂ ಸಂಶಯ ಬರಬಾರದೆಂದು ರೈಲ್ವೆ ಪ್ರಯಾಣ ಮಾಡುತ್ತಾರೆ. ತಿರುಗಿ ಮನೆಗೆ ಬರುವಾಗ ತಮ್ಮ ಊರಿನ ರೈಲು ನಿಲ್ದಾಣದಲ್ಲಿ ಇಳಿಯದೆ, ಬಂದೆರುಡು ಸ್ಟೇಷನ್‌ಗಳಿರುವಾಗಲೇ ಇಳಿದು, ಮುಂದೆ ನಡೆದು ಬರುತ್ತಾರೆ. ಇವರ ಗುಂಪಿನಲ್ಲಿ ೩–೧೦ ಜನ ಇರುವರು. ಒಮ್ಮೊಮ್ಮೆ ೩೦ರ ತನಕ ಸಹ ಇರುತ್ತಾರೆ. ಇವರ ಗುಂಪು ಎಷ್ಟು ದೊಡ್ಡದಿದ್ದರೂ, ಒಂದು ಊರಿಂದ ಮತ್ತೊಂದು ಊರಿಗೆ ಹೋಗುವುದಾದರೆ, ಸಣ್ಣ–ಸಣ್ಣ ತಂಡಗಳನ್ನು ಮಾಡಿ ಯಾರಿಗೂ ಸಂಶಯ ಬಾರದಂತೆ, ಚದುರಿಕೊಂಡು ಮತ್ತು ಒಬ್ಬನು ಹೋದಲ್ಲಿಗೆ ಮತ್ತೊಬ್ಬನು ಹೋಗದಂತೆ ಬಹಳ ಚಾತುರ್ಯದಿಂದ ಪ್ರಯಾಣ ಮಾಡುತ್ತ ಹೋಗುವರು.

ತಾವು ಹೋದ ಹಾದಿಯು ತಮ್ಮ ಹಿಂದೆ ಬರುವ ತಂಡದವರಿಗೆ ತಿಳಿಯಬೇಕೆಂದು, ಹೆಚ್ಚು ಮಾರ್ಗಗಳು ಕೂಡಿದ ಸ್ಥಳದಲ್ಲಿ ೧ ಅಡಿ ಉದ್ದ, ೬ ಇಂಚು ಅಗಲ ಮತ್ತು ೬ ಇಂಚು ಎತ್ತರವಾದ ಮಣ್ಣು ಗುಡ್ಡೆ ಹಾಕಿ, ಅದರ ಮುಂದೆ ತಾವು ಹೋದ ದಿಕ್ಕಿಗೆ ಬಾಣದ ನಿಶಾನಿಯನ್ನು ಮಾಡಿ ಹೋಗುತ್ತಾರೆ. ೧೦೦ ಯಾರ್ಡುಗಳ ಅಂತರದಲ್ಲಿ ಒಂದು ಕಾಣದೆ ಹೋದರೆ, ಮತ್ತೊಂದಾದರೂ ಸಿಗಬೇಕೆಂದು ಇಂಥ ಮೂರು ಗುರುತುಗಳನ್ನು ಮಾಡುತ್ತಾರೆ. ಅಥವಾ ಮಾರ್ಗದ ಬದಿಗೆ ಕಾಲಿನಿಂದ ಮಣ್ಣು ಎಳೆದು ರಾಶಿ ಮಾಡಿ, ಅದರ ಮುಂದೆ ಕಾಲಿನಿಂದ ಮಣ್ಣು ಎಳೆದ ಮೂಲಕ ಬಿದ್ದ ಪಟ್ಟಿಯು ಯಾವ ದಿಕ್ಕಿಗೆ ಇರುತ್ತದೆಯೋ, ಆ ದಿಕ್ಕಿಗೆ ಹೋದರೆಂದು ಸೂಚನೆ ನೀಡುತ್ತಾರೆ. ಒಮ್ಮೊಮ್ಮೆ ತಾವು ಹೋದ ಮಾರ್ಗದ ಬದಿಗೆ ಮಣ್ಣಿನಲ್ಲಿ ಬಡಿಗೆಯ ಆಕಾರದಂತೆ ಗೆರೆಯನ್ನು ಎಳೆದು ಹೋಗುತ್ತಾರೆ; ಈ ಗೆರೆಯ ಒಂದು ತುದಿಗೆ ಡೊಂಕು ಇದ್ದು, ಮತ್ತೊಂದು ತುದಿಯು ಸರಳ ಇರುವುದರಿಂದ, ಸರಳವಿದ್ದ ತುದಿಯ ದಿಕ್ಕಿಗೆ ಹೋದರೆಂದು ತಿಳಿಯಬೇಕು. ಇಲ್ಲವೆ ಗಿಡದ ಒಂದೆರಡು ಸಣ್ಣ ಟೊಂಗೆಗಳನ್ನು ಮುರಿದು ಅವುಗಳನ್ನು ದಾರಿಯ ಬದಿಯಲ್ಲಿ ಕಲ್ಲುಗಳ ಬುಡದಲ್ಲಿಟ್ಟು ಹೊಗುತ್ತಾರೆ. ಟೊಂಗೆಗಳ ಮುರಿದ ತುದಿಯ ದಿಕ್ಕಿಗೆ ತಾವು ಹೋಗುತ್ತೇವೆಂದು ಸೂಚನೆ ನೀಡುತ್ತಾರೆ. ಮಾರ್ಗದಲ್ಲಿ ಒಂದರ ಮುಂದೊಂದು ಹೀಗೆ ಗೆರೆಗಳಿದ್ದರೆ ತಾವು ಹತ್ತಿರದಲ್ಲಿಯೇ ಇಳಿದಿದ್ದೇವೆ ಎಂಬ ಅರ್ಥ ನೀಡುತ್ತದೆ.

ಗುಂಪಿನಲ್ಲಿ ಹಿರಿಯನಾದ ಮತ್ತು ಹೆಚ್ಚು ಅನುಭವವುಳ್ಳವನು ಮುಖ್ಯಸ್ಥನಾಗಿರುತ್ತಾನೆ. ಆತನಿಗೆ 'ಖಾಗ್ಡಾ' ಎಂದು ಕರೆಯುತ್ತಾರೆ. ಆತನ ಮಾತನ್ನು ಯಾರೂ ಮೀರಿ ನಡೆಯುವುದಿಲ್ಲ. ಗಳಿಸಿದ ಹಣದಲ್ಲಿ ಆತನ ಪಾಲು ಎಲ್ಲರಿಗಿಂತಲೂ ಹೆಚ್ಚಿರುತ್ತದೆ. ಗುಂಪಿಗೆ ಸಹಾಯಕನಾಗಿ ಒಬ್ಬ ಹುಡುಗನಿರುತ್ತಾನೆ. ಆತನಿಗೆ 'ಹಂಡಿವಾಲ' ಎಂದು ಕರೆಯುತ್ತಾರೆ. ಇವನು ನೀರು ತರುವುದು, ಗುಂಪಿನ ದನ ಕಾಯುವುದು, ಆಡುಗೆ ಮಾಡುವವನಿಗೆ ಸಹಾಯ ಮಾಡುವುದು, ಅಡುಗೆ ಬಡಿಸುವುದು, ಕಾವಲು ಕಾಯುವುದು ಮುಂತಾದ ಕೆಲಸಗಳನ್ನು ಮಾಡುತ್ತಾನೆ. ಇವರು ತಮ್ಮ ಬಿಡಾರವನ್ನು ಯಾವಾಗಲೂ ನೀರಿನ ಸಮೀಪದ ದಿನ್ನೆ ಮೇಲೆ ಹಾಕುವರು. ದಿನ್ನೆಯ ಮೇಲೆ ನಿಂತು ಕಾವಲು ಕಾಯುತ್ತಿರುತ್ತಾರೆ. ಯಾರಾದರೂ ಡೇರೆಯನ್ನು ತಪಾಸಣೆ ಮಾಡಲು ಬರುತ್ತಿರುವುದು ಕಂಡರೆ, ಅಚ್ಚುಗಳನ್ನು ಮತ್ತು ಸುಳ್ಳು ನಾಣ್ಯಗಳನ್ನು ಕೂಡಲೆ ನೀರಿನಲ್ಲಿ ಹಾಕುವರು. 'ಖಾಗ್ಡಾ' ಮತ್ತು 'ಹಂಡಿವಾಲ' ಇವರು ನಕಲಿ ನಾಣ್ಯ ಚಲಾವಣೆ ಮಾಡಲು ಹೋಗುವುದಿಲ್ಲ. ನಕಲಿ ನಾಣ್ಯ ಚಲಾವಣೆ ಮಾಡುವವರಿಗೆ 'ಭೊಂದರ' ಎಂದು ಕರೆಯುತ್ತಾರೆ. 'ಖಾಗ್ಡಾ' ಬಿಡಾರದಲ್ಲಿಯೇ ಇದ್ದುಕೊಂಡು ಅಡುಗೆ ಕೆಲಸ ಮಾಡುವನು. ಇವನು ಗುಂಪಿನವರು ಗಳಿಸಿದ ಹಣ, ಅಚ್ಚು, ಮಣ್ಣು ಮತ್ತು ನಕಲಿ ನಾಣ್ಯ ಮಾಡುವ ಧಾತು ಇಷ್ಟನ್ನು ತನ್ನ ಹತ್ತಿರ ಇಟ್ಟುಕೊಳ್ಳುತ್ತಾನೆ. ನಕಲಿ ನಾಣ್ಯ ಇವನ ಹತ್ತಿರ ಎಂದೂ

ಇರುವುದಿಲ್ಲ. 'ಭೊಂದರ'ರು ಬೇರೆ ಬೇರೆ ಹಾದಿಗಳಿಂದ ಹೋಗಿ, ಮಾರ್ಗದಲ್ಲಿದ್ದ ಹಳ್ಳಿಗಳಲ್ಲಿ ನಕಲಿ ನಾಣ್ಯಗಳನ್ನು ಚಲಾವಣೆ ಮಾಡಿ, ಮೊದಲೇ ನಿಶ್ಚಯಿಸಿದ ಮುಂದಿನ ಸ್ಥಳಕ್ಕೆ ಒಂದು ಗುಂಪಿನವರನ್ನು ಸೇರಿಕೊಳ್ಳುತ್ತಾರೆ. ಮುಖ್ಯಸ್ಥನು ಹೊಸ ಬಿಡಾರಕ್ಕೆ ಒಂದು ಮುಟ್ಟಿದ ಕೂಡಲೆ ಅಲ್ಲಿ ತನ್ನ ಹತ್ತಿರವಿದ್ದ ಹಣವನ್ನು, ಅಚ್ಚು ಮುಂತಾದವನ್ನು ಹುದುಗಿಡುವನು ಇಲ್ಲವೆ ಹುಲ್ಲಿನಲ್ಲಿ, ಮರದ ಹೊದರುಗಳಲ್ಲಿ ಬಚ್ಚಿಡುವನು. 'ಭೊಂದರ'ರು ಸಹ ತಮ್ಮ ಬಳಿ ಇರುವ ನಕಲಿ ನಾಣ್ಯಗಳನ್ನು ಹೀಗೆಯೇ ಬಚ್ಚಿಡುವರು, ಒಮ್ಮೊಮ್ಮೆ ಅಚ್ಚು, ನಕಲಿ ನಾಣ್ಯ ಇತ್ಯಾದಿಗಳನ್ನು ಹಾಸಿಗೆಯ ಬುಡದಲ್ಲಿ ಸಹ ಹುದುಗಿಡುತ್ತಾರೆ.

ಗುಂಪಿನವರು ತಾವು ಪ್ರಯಾಣ ಮಾಡುವ ಸಂದರ್ಭದಲ್ಲಿ ಹಗಲಿನಲ್ಲಿ ನಕಲಿ ನಾಣ್ಯಗಳನ್ನು ತಯಾರಿಸುತ್ತಾರೆ. ಗೋಪಿಚಂದನ, ಬಲಫ ಅಥವಾ ಬೇರೆ ತರಹದ ಜಿಗಟು ಮಣ್ಣು ಅರೆದು ಗಾಳಿಸಿ ನೀರಿನಲ್ಲಿ ಕಲಸಿ, ಅದರ ಮುದ್ದೆ ಮಾಡುವರು. ಆ ಮೇಲೆ ಅದರ ಎರಡು ಭಾಗ ಮಾಡಿ; ಅವುಗಳ ಮಧ್ಯದಲ್ಲಿ ಎಣ್ಣೆ ಹಚ್ಚಿದ ಅಸಲಿ ರೂಪಾಯಿಯನ್ನಿಟ್ಟು, ೧/೪ ಇಂಚು ಕೆಳಗೆ ಅದನ್ನು ಗಟ್ಟಿಯಾಗಿ ಒತ್ತಿ, ಅಚ್ಚು ತಯಾರು ಮಾಡುತ್ತಾರೆ. ಈ ಅಚ್ಚು ಕಿಸೆಯಲ್ಲಿ ಹಾಕುವ ಗಡಿಯಾರದಷ್ಟು ದೊಡ್ಡದಿರುತ್ತದೆ. ಕೊನೆಗೆ ಆ ಎರಡು ಭಾಗಗಳನ್ನು ಪುನಃ ಜೋಡಿಸುವಾಗ ತಪ್ಪು ಆಗಬಾರದೆಂದು, ಆ ಅಚ್ಚಿನ ಬದಿಯಲ್ಲಿ ಒಂದು ಗುರುತು ಮಾಡಿರುತ್ತಾರೆ. ನಂತರ ಆ ಎರಡು ಭಾಗಗಳನ್ನು ಬಿಚ್ಚಿ, ಮಧ್ಯದಲ್ಲಿದ್ದ ರೂಪಾಯಿಯನ್ನು ತೆಗೆದು, ಎರಕ ಹೊಯ್ಯಲಿಕ್ಕೆ, ಬದಿಯಲ್ಲಿ ಒಂದು ಸಣ್ಣ ರಂಧ್ರ ಕೊರೆಯುತ್ತಾರೆ. ಆ ಮೇಲೆ ಆ ಎರಡೂ ಭಾಗಗಳನ್ನು ಬೂದಿಯಲ್ಲಿ ಹಾಕಿ ಒಣಗಿಸಿ, ಕಡೆಗೆ ಅದಕ್ಕೆ ಅರಿವೆಗಳನ್ನು ಸುತ್ತಿ ಅದಕ್ಕೆ ಬೆಂಕಿ ಹಚ್ಚಿ ಸುಡುತ್ತಾರೆ. ಎರಕ ಹೊಯ್ಯಬೇಕಾದರೆ, ಅಚ್ಚುಗಳನ್ನು ರಂಧ್ರ ಮೇಲೆ ಮಾಡಿ, ಸಗಣಿಯಲ್ಲಿ ಹಚ್ಚಿಟ್ಟು, ಸವಟಿನಲ್ಲಿ ತಾಮ್ರ ಅಥವಾ ಕಂಚನ್ನು ತವರದ ಜೊತೆ ಕರಗಿಸಿ ಅದನ್ನು ರಂಧ್ರದಲ್ಲಿ ಎರೆಯುತ್ತಾರೆ. ಈ ಪ್ರಕಾರ ನಾಣ್ಯಗಳು ತಯಾರಾದ ಮೇಲೆ ಅವುಗಳ ಅಂಚುಗಳನ್ನು ಕತ್ತರಿಸಿ, ಅರ್ನದಿಂದ ತಿಕ್ಕುತ್ತಾರೆ. ನಾಣ್ಯಗಳು ಹಳೆಯದು ರೀತಿಯಲ್ಲಿ ಕಾಣಿಸಲು ಅವುಗಳನ್ನು ಕಪ್ಪು ಮಾಡುತ್ತಾರೆ, ಒಂದು ಅಚ್ಚಿನಿಂದ ೧೦ ಅಥವಾ ೨೦ ನಾಣ್ಯಗಳನ್ನು ಮಾಡಬಹುದು, ಒಮ್ಮೊಮ್ಮೆ ೫೦ಕ್ಕಿಂತ ಹೆಚ್ಚು ನಾಣ್ಯಗಳನ್ನು ಸಹ ಮಾಡಬಹುದಿತ್ತು. ಈ ಪ್ರಕಾರ ತಯಾರು ಮಾಡಿದ ನಾಣ್ಯಗಳು ಬಣ್ಣದಲ್ಲಿ, ಗಾತ್ರದಲ್ಲಿ, ತೂಕದಲ್ಲಿ ಸ್ವಲ್ಪಮಟ್ಟಿಗೆ ಕಳಪೆಯಾಗಿರುತ್ತಿದ್ದವು. (ಕೆನಡಿ ಎಂ: ೧೯೦೮: ೫೮)

**ನಕಲಿ ನಾಣ್ಯಗಳನ್ನು ಚಲಾವಣೆ ಮಾಡುತ್ತಿದ್ದ ವಿಧಾನಗಳು**

➤ ಗುಂಪಿನ ೫–೬ ಜನ ಒಳ್ಳೆ ಬಟ್ಟೆ ಧರಿಸಿ, ಬಂಗಾರದ ಪವನುಗಳನ್ನು (ನಾಣ್ಯಗಳನ್ನು) ಮಾರುವವನ ಅಂಗಡಿಗೆ ಹೋಗುವರು. ಅಂಗಡಿಗೆ ಹೋಗುವ ಮೊದಲೇ ಒಂದೇ ತರಹದ ಎರಡು ಚೀಲಗಳನ್ನು ತಯಾರಿಸಿ, ಒಂದರಲ್ಲಿ ಪವನಿನಷ್ಟು ಗಾತ್ರದ ದೊಡ್ಡ

ಸೀಸದ ತಗಡುಗಳನ್ನು ತುಂಬಿ, ಮತ್ತೊಂದು ಚೀಲದಲ್ಲಿ ಸ್ವಲ್ಪ ಉದ್ದಿನ ಕಾಳು ಹಾಕಿ ಸಂಗಡ ಒಯ್ಯುತ್ತಾರೆ. ತಮ್ಮ ಹತ್ತಿರ ಎಷ್ಟು ಸೀಸದ ತುಂಡುಗಳಿವೆಯೋ, ಅಷ್ಟೇ ಪವನುಗಳ ಬೆಲೆಯನ್ನು ನಿಶ್ಚಯಿಸಿ ಅವುಗಳನ್ನು ಉದ್ದಿನ ಕಾಳು ಹಾಕಿದ ಚೀಲದಲ್ಲಿ ತುಂಬುವರು. ಅದರ ಹಣ ಎಣಿಸಿ ಕೊಡುವಷ್ಟರೊಳಗೆ ಮತ್ತೊಬ್ಬನು ಬಂದು ನಾವು ಇವುಗಳನ್ನು ಕೊಂಡುಕೊಳ್ಳುವ ಮೊದಲು ಯಜಮಾನರನ್ನು ಕೇಳುವುದು ಉತ್ತಮ ಎಂದು ಹೇಳಿ, ಅವರೆಲ್ಲರೂ ಆ ಪವನು ಮತ್ತು ಉದ್ದಿನ ಕಾಳು ಇದ್ದ ಚೀಲವನ್ನು ಅಂಗಡಿಯಾತನ ಹತ್ತಿರ ಬಿಟ್ಟು ಹೋಗುತ್ತಾರೆ. ಸ್ವಲ್ಪ ಹೊತ್ತು ನಂತರ ಬಂದು, ಬೆಲೆಯಲ್ಲಿ ಸ್ವಲ್ಪ ಕಡಿಮೆ ಮಾಡಬೇಕೆಂದು ಹೇಳುತ್ತಾರೆ. ಅಂಗಡಿಯವನು ಇಲ್ಲ ಎಂದು ಹೇಳಿದ ಕೂಡಲೆ, ತಮ್ಮ ಚೀಲ ತಿರುಗಿ ಕೊಡಬೇಕೆಂದು ಕೇಳುತ್ತಾರೆ. ಅಂಗಡಿಯವನು ಚೀಲದಲ್ಲಿದ್ದ ಪವನುಗಳನ್ನು ಕೆಳಗೆ ಸುರಿಯುವನು (ಸುರಿಯುವಾಗ ಅವುಗಳ ಮೇಲೆ ಬಿದ್ದ ಉದ್ದಿನ ಕಾಳುಗಳು ಆತನ ಗಮನಕ್ಕೆ ಬಾರದಿದ್ದರೆ ಆತನನ್ನು ವಂಚಿಸುವುದು ಸುಲಭ ಎಂದು ತಿಳಿಯುತ್ತಾರೆ). ಇಷ್ಟರಲ್ಲಿ ಇನ್ನೂ ಇಬ್ಬರು ಬಂದು ಯಜಮಾನರು ಮೊದಲು ನಿಶ್ಚಯಿಸಿದ ಬೆಲೆ ಕೊಡಲು ಒಪ್ಪಿದ್ದಾರೆ ಎನ್ನುತ್ತಾನೆ. ಆ ಮೇಲೆ ಪುನಃ ಆ ತವನುಗಳನ್ನು ಚೀಲದಲ್ಲಿ ತುಂಬಿದ ಕೂಡಲೆ, ಇನ್ನಿಬ್ಬರು ಅಪರಿಚಿತರಂತೆ ಬಂದು, ಪವನುಗಳ ಬೆಲೆ ಕೇಳಿ ಅಂಗಡಿಯಾತನ ಗಮನವನ್ನು ತಮ್ಮ ಕಡೆಗೆ ಬರುವಂತೆ ಮಾಡುತ್ತಾರೆ. ಕೂಡಲೆ ಮೊದಲಿನವರು ಪವನಿನ ಚೀಲದ ಬದಲು ಸೀಸ ತುಂಬಿದ ಚೀಲವಿಟ್ಟು, ತಾವು ಯಜಮಾನರ ಬಳಿ ಹೋಗಿ ಕೊನೆ ಬಾರಿ ಬೆಲೆ ಕೇಳಿ ಬರುತ್ತೇವೆ ಎಂದು ಹೇಳಿ ಹೋದವರು ಪುನಃ ತಿರುಗಿ ಬರುವುದಿಲ್ಲ"(ಕೆನಡಿ ಎಂ: ೧೯೦೮: ೫೬).

- ಇವರು ಒಂದೇ ತರಹದ ಎರಡು ಚೀಲ ತಯಾರು ಮಾಡಿ, ಒಂದರಲ್ಲಿ ನಕಲಿ ರೂಪಾಯಿಗಳನ್ನು ತುಂಬಿ, ಜೊತೆಗೆ ಸುಮಾರು ೨೦ ತೊಲೆ ಬಂಗಾರ ತೆಗೆದುಕೊಂಡು, ತಾವು ಮಾರುಕಟ್ಟೆ ದರಕ್ಕಿಂತ ಕಡಿಮೆ ದರದಲ್ಲಿ ಬಂಗಾರ ಮಾರುತ್ತೇವೆಂದು, ಕಳ್ಳ ಸರಕು ಕೊಂಡು ಕೊಳ್ಳುವವರಲ್ಲಿ ಒಬ್ಬನನ್ನು ದೂರ ಕರೆದುಕೊಂಡು ಹೋಗಿ, ತಾವು ತಂದ ನಕಲಿ ರೂಪಾಯಿಗಳಷ್ಟೇ ಬೆಲೆ ನಿಶ್ಚಯಿಸಿ, ಬಂಗಾರ ಆತನಿಗೆ ಕೊಟ್ಟು, ಆತನು ಕೊಟ್ಟ ರೂಪಾಯಿಗಳನ್ನು ಮತ್ತೊಂದು ಚೀಲದಲ್ಲಿ ತುಂಬುತ್ತಾರೆ. ಅಷ್ಟರಲ್ಲಿ, ಅಲ್ಲಿ ಇನ್ನೊಬ್ಬನು ಬಂದು ತಾನು ಪೋಲಿಸರಿಗೆ ಹೇಳುತ್ತೇನೆ ಎಂದು ಬೆದರಿಸಿದ ಕೂಡಲೇ, ಇವನು ಅಂಜಿದಂತೆ ಮಾಡಿ ಗಡಿಬಿಡಿಯಲ್ಲಿ ನಕಲಿ ರೂಪಾಯಿಗಳ ಚೀಲ ಕೊಟ್ಟು, ಬಂಗಾರದ ಚೀಲವನ್ನು ಗಿರಾಕಿಯಿಂದ ವಾಪಸ್ಸು ತೆಗೆದುಕೊಂಡು ಹೋಗುತ್ತಾನೆ (ಅದೇ: ೫೭).

- ಬಜಾರಿನಲ್ಲಿ ಮಾರಾಟದ ಸಲುವಾಗಿ ಕೆಲವು ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಗಿರಾಕಿಗಳು ಸಾಮಾನು ಕೊಂಡು, ಹಣ ಕೊಟ್ಟ ಮೇಲೆ, ಏನಾದರೂ ತಕರಾರು ಮಾಡಿ, ತಮ್ಮ ಸಾಮಾನು ವಾಪಸ್ಸು ಪಡೆದು, ಹಣ ಹಿಂದಿರುಗಿಸುವಾಗ ಕೈ ಚಳಕದಿಂದ, ಅದರಲ್ಲಿ ನಕಲಿ ನಾಣ್ಯ ಸೇರಿಸಿ ಕೊಡುತ್ತಾರೆ, ಇಲ್ಲವೆ ಅಂಗಡಿಗೆ ಹೋಗಿ ಅಸಲಿ ನಾಣ್ಯಗಳನ್ನು ಮೊದಲು ತೋರಿಸಿ, ಸಾಮಾನು ತೆಗೆದುಕೊಂಡು, ಹಣ ಕೊಡುವಾಗ ನಕಲಿ ನಾಣ್ಯಗಳನ್ನು ಕೊಡುತ್ತಾರೆ (ಅದೇ: ೬೦).

ಚಪ್ಪರ್‌ಬಂದ್ ಸಮುದಾಯದವರು ನಕಲಿ ನಾಣ್ಯಗಳನ್ನು ಚಲಾವಣೆ ಮಾಡಲು ಕೆಲವು ವೇಳೆ ಫಕೀರನ ವೇಷ ಹಾಕಿಕೊಂಡು, ಭಿಕ್ಷೆ ಬೇಡುತ್ತಾ ಹೋಗುತ್ತಿದ್ದರು, ಇವರು ಹೆಚ್ಚಾಗಿ ಮಹಿಳೆಯರನ್ನು ತಮ್ಮ ನಕಲಿ ನಾಣ್ಯ ಚಲಾವಣೆ ಮಾಡಲು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಪ್ರಯಾಣದ ವೇಳೆ ಕುಟುಂಬವನ್ನು ಜೊತೆಗೆ ಕರೆದುಕೊಂಡು ಹೋಗುತ್ತಿರಲಿಲ್ಲ. ನಕಲಿ ನಾಣ್ಯ ತಯಾರಿಸಿ, ಚಲಾವಣೆ ಮಾಡಿ ಹಣ ಸಂಪಾದಿಸಿದ ಮೇಲೆ, ಎಲ್ಲರೂ ಊರಿಗೆ ಹಿಂತಿರುಗುತ್ತಿದ್ದರು. ತಮ್ಮ ಮೇಲೆ ಯಾರಿಗೂ ಅನುಮಾನ ಬರಬಾರದೆಂದು, ಫಕೀರನ ವೇಷ ತೊಡುತ್ತಿದ್ದರು. ಇದರ ಜೊತೆಗೆ ಇವರು ಹೊಲಗಳಲ್ಲಿ ಕೂಲಿ ಸಹ ಮಾಡುತ್ತಿದ್ದರು. ಹೆಂಗಸರು ಚಾಪೆ ನೇಯುವುದು, ಕೌದಿ ಹೊಲಿಯುವುದು ಸಹ ಮಾಡುತ್ತಿದ್ದರು.

ಚಪ್ಪರ್‌ಬಂದ್ ಸಮುದಾಯದ ಎಲ್ಲ ನಡವಳಿಕೆಗಳನ್ನು ಗಮನಿಸಿದ ಬ್ರಿಟಿಷರು ಇವರನ್ನು ಅಪರಾಧಿ ಬುಡಕಟ್ಟು ಕಾಯ್ದೆಯಡಿಯಲ್ಲಿ ಬಾಂಬೆ ಪ್ರೆಸಿಡೆನ್ಸಿಯಲ್ಲಿ ಸ್ಥಾಪಿಸಿದ್ದ ಬೇರೆ ಬೇರೆ ಸೆಟ್ಲ್‌ಮೆಂಟ್‌ಗಳಲ್ಲಿ ಬಂಧಿಸಿಟ್ಟರು ಸೆಟ್ಲ್‌ಮೆಂಟ್‌ಗಳ ಹತ್ತಿರದಲ್ಲಿಯೇ ಫ್ರೀ ಕಾಲೋನಿಗಳನ್ನು ಸಹ ನಿರ್ಮಿಸಿದರು. ಸೆಟ್ಲ್‌ಮೆಂಟ್‌ಗಳಲ್ಲಿ ಅವರಿಗೆ ಉದ್ಯೋಗಾವಕಾಶಗಳನ್ನು ನೀಡಿದರು. ಯುವ ಜನರಿಗೆ ನೇಯ್ಗೆ, ಬಡಿಗೆ, ಪ್ರಿಂಟಿಂಗ್‌ಪ್ರೆಸ್, ಪಾದರಕ್ಷೆ ತಯಾರಿಕೆ ಮುಂತಾದ ತರಬೇತಿಗಳನ್ನು ನೀಡಲಾಗುತ್ತಿತ್ತು. ಅವರು ತಮ್ಮ ಜೀವನಕ್ಕೆ ಬೇಕಾದ ಗಳಿಕೆಯನ್ನು ತಾವೇ ಸಂಪಾದಿಸಲು ಈ ತರಬೇತಿಗಳನ್ನು ನೀಡಲಾಗುತ್ತಿತ್ತು. ಇವರು ಸ್ವಂತ ಮನೆಗಳನ್ನು ಹೊಂದಲು ಇವರಿಗೆ ಅತೀ ಕಡಿಮೆ ದರದಲ್ಲಿ ಮನೆಗಳನ್ನು ನೀಡಲಾಗುತ್ತಿತ್ತು. ಬೇರೆ-ಬೇರೆ ಕೃಷಿಯಾಧಾರಿತ ಸೆಟ್ಲ್‌ಮೆಂಟ್‌ಗಳಲ್ಲಿ ಅವರ ಜೀವನ ನಿರ್ವಹಣೆಗಾಗಿ ಅವರಿಗೆ ಭೂಮಿಯನ್ನು ಸಹ ನೀಡಲಾಗುತ್ತಿತ್ತು. ಹಾಗಾಗಿ ಈ ವೇಳೆ ಇವರ ಆರ್ಥಿಕ ಮಟ್ಟ ಸ್ವಲ್ಪ ಪ್ರಮಾಣದಲ್ಲಿ ಉತ್ತಮವಾಗಿತ್ತು.

ಭಾರತ ಸ್ವಾತಂತ್ರ್ಯಗೊಂಡ ನಂತರ ಇಂತಹ ಅನೇಕ ಸಮುದಾಯಗಳು ಸರ್ಕಾರದಿಂದ, ಸಮಾಜದಿಂದ ಕಡೆಗಣಿಸಲ್ಪಟ್ಟವು. ಚಪ್ಪರ್‌ಬಂದ್ ಸಮುದಾಯವು ಕೆಲಸವನ್ನು ಹುಡುಕುತ್ತಾ ಧಾರವಾಡ, ಪೂನ, ಸೋಲಾಪುರ, ಗೋವಾ ಇತ್ಯಾದಿ ಕಡೆ ವಲಸೆ ಹೋಗಲಾರಂಭಿಸಿತು. ಸೆಟ್ಲ್‌ಮೆಂಟ್‌ಗಳಲ್ಲಿ ವಿವಿಧ ವೃತ್ತಿಗಳ ತರಬೇತಿ ಪಡೆದವರು ಅಲ್ಲೆ ಬಡಗಿತನ, ಗಾರೆ ಕೆಲಸ,

ರಸ್ತೆಕಾಮಗಾರಿ ಕೆಲಸ ಇನ್ನೂ ಮುಂತಾದ ಕೆಲಸಗಳಲ್ಲಿ ತೊಡಗಿದರು. ಕೆಲವರು ನಗರಗಳಲ್ಲಿ ಕಟ್ಟಡ ನಿರ್ಮಾಣ ಮತ್ತು ಇತ್ಯಾದಿ ಕಡೆ ಕೂಲಿಗಳಾಗಿ ದುಡಿಯಲಾರಂಭಿಸಿದರು ಕೆಲವರು ಪಶುಪಾಲನೆ ಮಾಡುವುದು, ಕೃಷಿ ಭೂಮಿಯಲ್ಲಿ ಕೂಲಿ ಮಾಡುವುದು, ಜಾತ್ರೆಗಳಲ್ಲಿ ಗರ್ದಿಗಮ್ಮತ್ ತೋರಿಸುವುದು, ಉಯ್ಯಾಲೆ ಆಡಿಸುವುದು ಮಾಡುತ್ತಿದ್ದರು. ಹೆಂಗಸರು ಬುಟ್ಟಿ ಹೆಣೆಯುವುದು, ಚಾಪೆ ಮಾಡುವುದು ಮಾಡುತ್ತಿದ್ದರು.

**ಕೋಷ್ಟಕ ೫.೪: ನಕಲಿ ನಾಣ್ಯ ಮಾಡಲು ಬಳಸುತ್ತಿದ್ದ ಸಾಮಾನುಗಳು**

| | |
|---|---|
| ಕತ್ತರಿ | ದೊಡ್ಡ ಅಲಗಿನ ಚೂರಿ |
| ಚಿಮಟೆ | ಸವಣ |
| ಸವಟು | ಮಣ್ಣಿನ ಪಾತ್ರೆ |
| ಅರ್ನ | ಅಗಸಿ ಎಣ್ಣೆ ಅಂಟು |
| ಕಂಚು | ಊದುಗೊಳವೆ |
| ಕಾಟ ಕೋನ ಕೊಳವೆ | ಒರೆಗಲ್ಲು ಪಾದರಸ |
| ಸೀಸ | ಸೀಸ ಬೆರೆಸಿದ ತವರ |
| ಗಂಧಕ | ಇದ್ದಲಿನ ಪುಡಿ |
| ತೊಗಲಿನ ತುಂಡು | ಉಸುಕು |
| ರಾಜಶಾಹೀ ನಾಣ್ಯಗಳು | ತೊಗಲಿನ ಚೀಲ |
| ಸಣ್ಣ ಸಾಣೆ ಕಲ್ಲು | ಕರೀಪುಡಿ ಹಾಕಿದ ಡಬ್ಬಿ |
| ಬಿದರಿನ ಕೊಳವೆಯಲ್ಲಿ ಹಾಕಿದ ಸೂಜಿಗಳು | ಅಚ್ಚು |
| ನಕಲಿ ನಾಣ್ಯ ಮಾಡುವ ಧಾತು ಮತ್ತು ಮಣ್ಣು | |

➢ **ಆಧುನಿಕ ಆರ್ಥಿಕತೆ**

ಪ್ರಸ್ತುತದಲ್ಲಿ ಚಪ್ಪರ್‌ಬಂದ್ ಸಮುದಾಯದವರು ಕಾರ್ಪೆಂಟರಿ, ಗಾರೆ ಕೆಲಸ, ರಸ್ತೆ ಕಾಮಗಾರಿ ಕೆಲಸ, ಕೃಷಿ ಕೂಲಿ, ಕಾಂಕ್ರಿಟ್ ಕೆಲಸ, ವೆಲ್ಡಿಂಗ್, ಟೈಲ್ಸ್ ಹಾಕುವ ಕೆಲಸ, ಟೈಲರಿಂಗ್, ಪ್ರಿಂಟಿಂಗ್ ಪ್ರೆಸ್ ಕೆಲಸ, ಆಟೋ ಚಾಲಕ, ಮೆಕಾನಿಕ್ ಕೆಲಸ, ದಿನಗೂಲಿ ಕೆಲಸ, ಸೈಕಲ್ ಶಾಪ್, ಸಣ್ಣ-ಪುಟ್ಟ ವ್ಯಾಪಾರಗಳು ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದಾರೆ. ಬೆರಳೆಣಿಕೆಯಷ್ಟು ಜನ ಮಾತ್ರ ಸರ್ಕಾರಿ ಕೆಲಸಗಳಲ್ಲಿದ್ದಾರೆ. ಶಿಕ್ಷಕರಾಗಿ, ಪೋಲಿಸ್ ಇಲಾಖೆಯಲ್ಲಿ,

ಸೈನ್ಯದಲ್ಲಿ, ಲಾಯರ್‌ರಾಗಿ ದುಡಿಯುತ್ತಿದ್ದಾರೆ. ಈ ಸಮುದಾಯದಲ್ಲಿ ನಿವೃತ್ತ ಬಿ ಇ ಓ ಆಧಿಕಾರಿ ಕೂಡ ಇದ್ದಾರೆ. ಮಹಿಳೆಯರು ದಿನ ಗೂಲಿ ಕಾರ್ಮಿಕರಾಗಿ, ಮನೆ ಕೆಲಸದವರಾಗಿ ಜೊತೆಗೆ ಬೀಡಿ ಕಟ್ಟುವ ಕೆಲಸ ಮಾಡುತ್ತಿದ್ದಾರೆ. ಒಂದಿಬ್ಬರು ಸರ್ಕಾರಿ ಮತ್ತು ಖಾಸಗಿ ನೌಕರರಾಗಿ ದುಡಿಯುತ್ತಿದ್ದಾರೆ. 'ಬಡೇ ಭಾಯಿ' ಗುಂಪಿಗೆ ಹೋಲಿಸಿದರೆ, 'ಛೋಟೆ ಭಾಯಿ' ಗುಂಪು ಹೆಚ್ಚಿನ ಪ್ರಮಾಣದಲ್ಲಿ ಸರ್ಕಾರಿ ಕೆಲಸಗಳಲ್ಲಿದ್ದಾರೆ. ಆದರೂ ಸಹ ಈ ಸಮುದಾಯ ಇನ್ನೂ ಸಹ ಆರ್ಥಿಕವಾಗಿ ತುಂಬಾನೆ ಹಿಂದುಳಿದಿದೆ ಹಾಗೂ ಸರ್ಕಾರದಿಂದ ಕೂಡ ಕಡೆಗಣಿಸಲ್ಪಟ್ಟಿದೆ.

**ಕೋಷ್ಟಕ ೫.೫: ಚಪ್ಪರ್‌ಬಂದ್ ಸಮುದಾಯದ ಕಾಯಕರ್ಹರಲ್ಲದ ಮತ್ತು ಅವಲಂಬಿತ ವರ್ಗದ ಪ್ರಮಾಣ**

| ಜಿಲ್ಲೆಗಳು | ಕುಟುಂಬ ಗಳು | ೦-೧೭ ಕಾಯಕರ್ಹರಲ್ಲದವರು | | | ೬೧+ ಅವಲಂಬಿತರು | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಗದಗ | ೨೧೫ | ೧೨೭ | ೧೧೭ | ೨೪೪ | ೨೬ | ೨೮ | ೫೪ |
| ದಾವಣಗೆರೆ | ೧೦ | ೬ | ೩ | ೯ | ೧ | ೦ | ೧ |
| ಧಾರವಾಡ | ೮೯ | ೭೫ | ೭೮ | ೧೫೩ | ೭ | ೨ | ೯ |
| ಬಾಗಲಕೋಟೆ | ೬೩ | ೪೬ | ೬೧ | ೧೦೭ | ೭ | ೯ | ೧೬ |
| ವಿಜಯಪುರ | ೨೬೭ | ೨೯೯ | ೨೫೧ | ೫೫೦ | ೪೧ | ೨೮ | ೬೯ |
| **ಒಟ್ಟು** | **೬೪೪** | **೫೫೩** | **೫೧೦** | **೧೦೬೩** | **೮೨** | **೬೭** | **೧೪೯** |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ೦-೧೭ ವಯಸ್ಸಿನವರು ಶೇ.೩೫ ರಷ್ಟು ಪ್ರಮಾಣದಲ್ಲಿದ್ದು, ಇವರು ಕಾಯಕರ್ಹರಲ್ಲದವರಾಗಿದ್ದಾರೆ. ೬೧+ ವಯಸ್ಸಿನವರು ಶೇ.೫ರಷ್ಟು ಪ್ರಮಾಣದಲ್ಲಿದ್ದು, ಇವರು ಅವಲಂಬಿತರಾಗಿದ್ದಾರೆ. ಕಾಯಕರ್ಹರಲ್ಲದವರ ಪ್ರಮಾಣದಲ್ಲಿ ಪುರುಷರು ಶೇ.೧೮.೨ ರಷ್ಟು, ಮಹಿಳೆಯರು ಶೇ.೧೬.೮ ರಷ್ಟು ಪ್ರಮಾಣದಲ್ಲಿದ್ದಾರೆ. ಅವಲಂಬಿತರ ಪ್ರಮಾಣದಲ್ಲಿ ಪುರುಷರು ಶೇ.೨.೭ ರಷ್ಟು, ಮಹಿಳೆಯರು ಶೇ.೨.೩ ರಷ್ಟು ಪ್ರಮಾಣದಲ್ಲಿದ್ದಾರೆ. ಇವರಲ್ಲಿ ಅವಲಂಬಿತ ಗುಂಪಿಗಿಂತ ಕಾಯಕರ್ಹರಲ್ಲದವರ ಪ್ರಮಾಣ ಹೆಚ್ಚಿದೆ.

ಕೋಷ್ಟಕ ೫.೬: ಚಪ್ಪರ್‌ಬಂದ್ ಸಮುದಾಯದ ಕಾಯಕರ್ಹರು, ಕಾಯಕಸ್ಥರು ಮತ್ತು ನಿರುದ್ಯೋಗಿಗಳ ಪ್ರಮಾಣ

| ಕ್ರ.ಸಂ. | ಜಿಲ್ಲೆಗಳು | ಕುಟುಂಬ | ಕಾಯಕರ್ಹರು(18–60) | | | ಕಾಯಕಸ್ಥರು | | | ನಿರುದ್ಯೋಗಿಗಳು | | |
|---|---|---|---|---|---|---|---|---|---|---|---|
| | | ಗಳು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ೨೧೫ | ೨೪೧ | ೨೪೩ | ೪೮೪ | ೨೫೨ | ೩೯ | ೨೯೧ | ೧೧ | ೨೦೪ | ೧೯೩ |
| ೨ | ದಾವಣಗೆರೆ | ೧೦ | ೧೫ | ೧೮ | ೩೩ | ೧೩ | ೦ | ೧೩ | ೨ | ೧೮ | ೨೦ |
| ೩ | ಧಾರವಾಡ | ೮೯ | ೧೧೯ | ೧೨೧ | ೨೪೦ | ೯೫ | ೧೮ | ೧೧೩ | ೨೪ | ೧೦೩ | ೧೨೭ |
| ೪ | ಬಾಗಲಕೋಟೆ | ೬೩ | ೯೬ | ೧೧೧ | ೨೦೭ | ೭೯ | ೨೧ | ೧೦೦ | ೧೭ | ೯೦ | ೧೦೭ |
| ೫ | ವಿಜಯಪುರ | ೨೬೭ | ೪೫೧ | ೪೧೨ | ೮೬೩ | ೪೦೪ | ೫೦ | ೪೫೪ | ೪೭ | ೩೬೨ | ೪೦೯ |
| | ಒಟ್ಟು | ೬೪೪ | ೯೨೨ | ೯೦೫ | ೧೮೨೭ | ೮೪೩ | ೧೨೮ | ೯೭೧ | ೭೯ | ೭೭೭ | ೮೫೬ |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ಕಾಯಕರ್ಹರು ಶೇ.೬೦ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೩೦.೪ ರಷ್ಟು, ಮಹಿಳೆಯರು ಶೇ.೨೯.೬ ರಷ್ಟು ಪ್ರಮಾಣದಲ್ಲಿದ್ದಾರೆ. ಕಾಯಕರ್ಹರ ವರ್ಗದಲ್ಲಿ ಮತ್ತೆ ಕಾಯಕಸ್ಥರು ಮತ್ತು ನಿರುದ್ಯೋಗಿಗಳು ಎಂಬ ಎರಡು ಗುಂಪುಗಳನ್ನು ಮಾಡಲಾಗಿದೆ. ಕಾಯಕಸ್ಥರು ಶೇ.೩೨ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨೭.೮ ರಷ್ಟು, ಮಹಿಳೆಯರು ಶೇ.೪.೨ ರಷ್ಟು ಪ್ರಮಾಣದಲ್ಲಿದ್ದಾರೆ. ನಿರುದ್ಯೋಗಿಗಳು ಶೇ.೨೮ ರಷ್ಟು ಪ್ರಮಾಣದಲ್ಲಿದ್ದು, ಅದರಲ್ಲಿ ಪುರುಷರು ಶೇ.೨.೬ ರಷ್ಟು, ಮಹಿಳೆಯರು ಶೇ.೨೫.೪ ರಷ್ಟು ಪ್ರಮಾಣದಲ್ಲಿದ್ದಾರೆ. ಈ ಅಂಕಿಅಂಶಗಳಿಂದ ಇವರಲ್ಲಿ ಮಹಿಳೆಯರು ದುಡಿಯುವ ಪ್ರಮಾಣ ತುಂಬಾನೆ ಕಡಿಮೆ ಇರುವುದು ಕಂಡುಬರುತ್ತದೆ. ಈ ಸಮುದಾಯ ಇಸ್ಲಾಂ ಧರ್ಮದ ಪ್ರಭಾವಕ್ಕೊಳಗಾಗಿರುವುದರಿಂದ, ಇವರು ಮಹಿಳೆಯರನ್ನು ದುಡಿಯಲು ಹೊರಗೆ ಕಳುಹಿಸುವುದಿಲ್ಲ. ಹಾಗಾಗಿ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ನಿರುದ್ಯೋಗಿಗಳಾಗಿದ್ದು, ಬೆರೆಯವರ ಮೇಲೆ ಅವಲಂಬಿತರಾಗಿದ್ದಾರೆ. ಇದೊಂದು ಶೋಚನೀಯವಾದ ಪರಿಸ್ಥಿತಿಯಾಗಿದೆ.

**ಲಂಬಚಿತ್ರ ೫.೨: ಚಪ್ಪರ್‌ಬಂದ್ ಸಮುದಾಯದ ಕಾಯಕಸ್ಥರು ಮತ್ತು ನಿರುದ್ಯೋಗಿಗಳ ಪ್ರಮಾಣ**




ಮೇಲಿನ ಲಂಬಚಿತ್ರವು ಕಾಯಕಸ್ಥರ ಮತ್ತು ನಿರುದ್ಯೋಗಿಗಳ ಲಿಂಗಾವಾರು ಪ್ರಮಾಣವನ್ನು ಸೂಚಿಸುತ್ತಿದೆ.

**ಕೋಷ್ಟಕ ೫.೭: ಕರ್ನಾಟಕದ ಚಪ್ಪರ್‌ಬಂದ್ ಸಮುದಾಯದ ಲಿಂಗವಾರು ಅವಲಂಬಿಸಿದ ಕಸುಬುಗಳು**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಕೃಷಿ | ೨೧ | ೦ | ೨೧ |
| ಕೃಷಿಕೂಲಿ | ೫೯೬ | ೯೪ | ೬೯೦ |
| ಗಾರೆಕೆಲಸ | ೧೫ | ೦ | ೧೫ |
| ಸಣ್ಣ ವ್ಯಾಪಾರ | ೨೯ | ೧೩ | ೪೨ |
| ಸರ್ಕಾರಿ | ೪೧ | ೮ | ೪೯ |
| ಖಾಸಗಿ | ೮ | ೩ | ೧೧ |
| ಇತರೆ | ೧೩೩ | ೧೦ | ೧೪೩ |
| **ಒಟ್ಟು** | **೮೪೩** | **೧೨೮** | **೯೭೧** |

ಸಮೀಕ್ಷೆಗೊಳಪಟ್ಟ ಕಾಯಕಸ್ಥರ ಶೇ.೬೦ ರಷ್ಟು ಜನಸಂಖ್ಯೆಯಲ್ಲಿ ಕೃಷಿ ಮಾಡುವವರು ಶೇ.೦.೭ ರಷ್ಟು ಪ್ರಮಾಣದಲ್ಲಿ ಪುರುಷರು ಮಾತ್ರ ಇದ್ದಾರೆ. ಕೃಷಿಕೂಲಿ ಮಾಡುವವರ ಪ್ರಮಾಣ ಶೇ.೨೨.೬ ರಷ್ಟು ಇದ್ದು, ಅದರಲ್ಲಿ ಪುರುಷರು ಶೇ.೧೯.೬ ರಷ್ಟು, ಮಹಿಳೆಯರು ಶೇ.೩ ರಷ್ಟಿದ್ದಾರೆ. ಗಾರೆಕೆಲಸ ಮಾಡುವವರು ಶೇ.೦.೫ ರಷ್ಟು ಪ್ರಮಾಣದಲ್ಲಿ ಪುರುಷರು ಮಾತ್ರ ಇದ್ದಾರೆ. ಸಣ್ಣ ವ್ಯಾಪಾರ ಮಾಡುವವರ ಪ್ರಮಾಣ ಶೇ.೧.೪ ರಷ್ಟು ಇದ್ದು, ಅದರಲ್ಲಿ ಪುರುಷರು ಶೇ.೧ ರಷ್ಟು, ಮಹಿಳೆಯರು ಶೇ.೦.೪ ರಷ್ಟಿದ್ದಾರೆ. ಸರ್ಕಾರಿ ಕೆಲಸ ಮಾಡುವವರ ಪ್ರಮಾಣ ಶೇ.೧.೭ ರಷ್ಟು ಇದ್ದು, ಅದರಲ್ಲಿ ಪುರುಷರು ಶೇ.೧.೪ ರಷ್ಟು, ಮಹಿಳೆಯರು ಶೇ.೦.೩ ರಷ್ಟಿದ್ದಾರೆ. ಖಾಸಗಿ ಕೆಲಸ ಮಾಡುವವರ ಪ್ರಮಾಣ ಶೇ.೦.೪ ರಷ್ಟು ಇದ್ದು, ಅದರಲ್ಲಿ ಪುರುಷರು ಶೇ.೦.೩ ರಷ್ಟು, ಮಹಿಳೆಯರು ಶೇ.೦.೧ ರಷ್ಟಿದ್ದಾರೆ. ಇತರೆ ಕೆಲಸ ಮಾಡುವವರ ಪ್ರಮಾಣ ಶೇ.೪.೭ ರಷ್ಟು ಇದ್ದು, ಅದರಲ್ಲಿ ಪುರುಷರು ಶೇ.೪.೪ ರಷ್ಟು, ಮಹಿಳೆಯರು ಶೇ.೦.೩ ರಷ್ಟು ಪ್ರಮಾಣದಲ್ಲಿದ್ದಾರೆ.

ಮೇಲಿನ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ, ಈ ಸಮುದಾಯದವರು ಹೆಚ್ಚಾಗಿ ಕಡಿಮೆ ಆದಾಯದ ಕೆಲಸಗಳಲ್ಲಿದ್ದಾರೆ, ಹಾಗೂ ಸರ್ಕಾರಿ ಕೆಲಸದಲ್ಲಿ ಬೆರಳೆಣಿಕೆಯಷ್ಟು ಜನ ಮಾತ್ರ ಇದ್ದಾರೆ. ಇವರಲ್ಲಿ ನಿರುದ್ಯೋಗ ಪ್ರಮಾಣ ತುಂಬಾನೆ ಕಡಿಮೆ ಇದೆ. ಅಂದರೆ ಈ

ಸಮುದಾಯದವರು ಚಿಕ್ಕ ವಯಸ್ಸಿನಲ್ಲೆ ಒಂದಲ್ಲ ಒಂದು ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕಾರಣ ಇವರು ಆರ್ಥಿಕವಾಗಿ ಹಿಂದುಳಿದುದ್ದರಿಂದ ಕುಟುಂಬದ ಆರ್ಥಿಕತೆಗೆ ಎಲ್ಲರೂ ಬೆನ್ನೆಲುಬಾಗಿ ನಿಲ್ಲುತ್ತಾರೆ. ಮಹಿಳೆಯರು ಸಹ ಕುಟುಂಬದ ಆರ್ಥಿಕತೆಗಾಗಿ ಬೆನ್ನೆಲುಬಾಗಿ ನಿಂತು ದುಡಿಯುತ್ತಿರುವುದನ್ನು ಕಾಣಬಹುದು. ಆದರೆ ಅದು ಅಲ್ಪ ಪ್ರಮಾಣದಲ್ಲಿ ಮಾತ್ರ. ಅದು ಹಳ್ಳಿಗಳಲ್ಲಿ ಮಹಿಳೆಯರು ಹೆಚ್ಚಾಗಿ ದುಡಿಯುತ್ತಿರುವುದನ್ನು ಕಾಣಬಹುದಾಗಿದೆ. ಬಹುತೇಕ ಮಹಿಳೆಯರು ಗೃಹಿಣಿಯರಾಗಿಯೇ ಇರುವುದನ್ನು ಕಾಣಬಹುದಾಗಿದೆ.

**ವೃತ್ತಚಿತ್ರ ೫.೨: ಚಪ್ಪರ್‌ಬಂದ್ ಕುಟುಂಬಗಳು ಅವಲಂಬಿಸಿದ ಕಸುಬುಗಳ ಪ್ರಮಾಣ**




ಮೇಲಿನ ವೃತ್ತಚಿತ್ರವು ಚಪ್ಪರ್‌ಬಂದ್ ಕುಟುಂಬಗಳು ಅವಲಂಬಿಸಿದ ಕಸುಬುಗಳ ಪ್ರಮಾಣವನ್ನು ಸೂಚಿಸುತ್ತದೆ.

## ಕೋಷ್ಟಕ ೫.೮: ಚಪ್ಪರ್‌ಬಂದ್ ಸಮುದಾಯದ ಕುಟುಂಬಗಳ ಮನೆಗಳ ಮಾದರಿ

| ಕ್ರ.ಸಂ. | ಜಿಲ್ಲೆಗಳು | ಕುಟುಂಬಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|---|
| | | | ಗುಡಿಸಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ |
| ೧ | ಗದಗ | ೨೧೫ | ೦ | ೧೫೭ | ೦ | ೩ | ೦ | ೭ | ೪೮ |
| ೨ | ದಾವಣಗೆರೆ | ೧೦ | ೦ | ೨ | ೦ | ೪ | ೪ | ೦ | ೦ |
| ೩ | ಧಾರವಾಡ | ೮೯ | ೨ | ೪೧ | ೨ | ೧೭ | ೨೭ | ೦ | ೦ |
| ೪ | ಬಾಗಲಕೋಟೆ | ೬೩ | ೯ | ೧೨ | ೮ | ೯ | ೧ | ೦ | ೨೪ |
| ೫ | ವಿಜಯಪುರ | ೨೬೭ | ೧೬ | ೮೧ | ೧೨೬ | ೧೭ | ೧೪ | ೦ | ೧೩ |
| | ಒಟ್ಟು | ೬೪೪ | ೨೭ | ೨೯೩ | ೧೩೬ | ೫೦ | ೪೬ | ೭ | ೮೫ |

### ವೃತ್ತಚಿತ್ರ ೫.೩: ಚಪ್ಪರ್‌ಬಂದ್ ಸಮುದಾಯದ ಕುಟುಂಬಗಳ ಮನೆಗಳ ಪ್ರಮಾಣ




ಮೇಲಿನ ಕೋಷ್ಟಕ ಮತ್ತು ವೃತ್ತಚಿತ್ರವು ಚಪ್ಪರ್‌ಬಂದ್ ಸಮುದಾಯದ ಕುಟುಂಬಗಳ ಮನೆಗಳ ಮಾದರಿ ಮತ್ತು ಮನೆಗಳ ಪ್ರಮಾಣವನ್ನು ಸೂಚಿಸುತ್ತದೆ. ಇವರು ಹೆಚ್ಚಿನ ಪ್ರಮಾಣದಲ್ಲಿ ಟಿನ್ ಮತ್ತು ಮಾಳಿಗೆ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಇವರು ವಾಸಿಸುವ ಮನೆಗಳ ಮಾದರಿ ಮತ್ತು ಮನೆಗಳ ಪ್ರಮಾಣವು ಅವರ ಆರ್ಥಿಕ ಪರಿಸ್ಥಿತಿಯನ್ನು ಬಿಂಬಿಸುತ್ತದೆ. ಇವರು ಈಗಲೂ ಸಹ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ.

### ಕೋಷ್ಟಕ ೫.೯: ಸಮೀಕ್ಷೆಗೊಳಪಟ್ಟ ಚಪ್ಪರ್‌ಬಂದ್ ಸಮುದಾಯದ ಒಟ್ಟು ಜನಸಂಖ್ಯೆಯಲ್ಲಿ ವಿಧವಾವೇತನ ಪಡೆಯುತ್ತಿರುವವರ ಪ್ರಮಾಣ

| ಕ್ರ.ಸಂ. | ಜಿಲ್ಲೆಗಳು | ವಿಧವೆಯರು | ವಿಧವಾ ವೇತನ ಪಡೆಯುತ್ತಿರುವವರು |
|---|---|---|---|
| ೧ | ಗದಗ | ೪೫ | ೧೦ |
| ೨ | ದಾವಣಗೆರೆ | ೦ | ೦ |
| ೩ | ಧಾರವಾಡ | ೭ | ೨ |
| ೪ | ಬಾಗಲಕೋಟೆ | ೧೪ | ೪ |
| ೫ | ವಿಜಯಪುರ | ೩೬ | ೮ |
| | ಒಟ್ಟು | ೧೦೨ | ೨೪ |

ಸಮೀಕ್ಷೆಗೊಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ೧೦೨ ಮಹಿಳೆಯರು ವಿಧವೆಯರಿದ್ದು, ಅವರಲ್ಲಿ ಕೇವಲ ೨೪ ಮಹಿಳೆಯರು ಮಾತ್ರ ವಿಧವಾವೇತನ ಪಡೆಯುತ್ತಿದ್ದಾರೆ. ಉಳಿದವರು ಅದರಿಂದ ವಂಚಿತರಾಗಿದ್ದಾರೆ.

**ಕೋಷ್ಟಕ ೫.೧೦: ಸಮೀಕ್ಷೆಗೊಳಪಟ್ಟ ಚಪ್ಪರ್‌ಬಂದ್ ಸಮುದಾಯದ ಒಟ್ಟು ಜನಸಂಖ್ಯೆಯಲ್ಲಿ ಸರಕಾರಿ ಸೌಲಭ್ಯಗಳನ್ನು ಪಡೆದಿರುವವರ ಪ್ರಮಾಣ**

| ಕ್ರ ಸಂ. | ಜಿಲ್ಲೆಗಳು | ಒಟ್ಟು | ಸರ್ಕಾರಿ ಸೌಲಭ್ಯಗಳು | | | | | | | | |
|---|---|---|---|---|---|---|---|---|---|---|---|
| | | | ಅಂಗವಿಕಲ | | | ವೃದ್ಧಾಪ್ಯವೇತನ | | | ಶಿಷ್ಯವೇತನ | | |
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ೨೧೫ | ೦ | ೦ | ೦ | ೦ | ೦ | ೦ | ೦ | ೦ | ೦ |
| ೨ | ದಾವಣಗೆರೆ | ೧೦ | ೦ | ೦ | ೦ | ೦ | ೦ | ೦ | ೦ | ೧ | ೧ |
| ೩ | ಧಾರವಾಡ | ೮೯ | ೦ | ೦ | ೦ | ೦ | ೦ | ೦ | ೦ | ೦ | ೦ |
| ೪ | ಬಾಗಲಕೋಟೆ | ೬೩ | ೨ | ೧ | ೩ | ೦ | ೨ | ೨ | ೦ | ೨ | ೨ |
| ೫ | ವಿಜಯಪುರ | ೨೬೭ | ೬ | ೦ | ೬ | ೪ | ೫ | ೯ | ೪ | ೩ | ೭ |
| ಒಟ್ಟು | | ೬೪೪ | ೮ | ೧ | ೯ | ೪ | ೭ | ೧೧ | ೪ | ೬ | ೧೦ |

ಮೇಲಿನ ಕೋಷ್ಟಕವು ಚಪ್ಪರ್‌ಬಂದ್ ಸಮುದಾಯದವರು ಪಡೆಯುತ್ತಿರುವ ಸರ್ಕಾರಿ ಸೌಲಭ್ಯಗಳ ವಿವರವನ್ನು ತಿಳಿಸುತ್ತದೆ. ೯ ಜನ ಅಂಗವಿಕಲವೇತನ ಪಡೆಯುತ್ತಿದ್ದು, ಅದರಲ್ಲಿ ೮ ಪುರುಷರು, ೧ ಮಹಿಳೆ ಇದ್ದಾರೆ. ವೃದ್ಧಾಪ್ಯವೇತನವನ್ನು ೧೧ ಜನ ಪಡೆಯುತ್ತಿದ್ದು, ಅದರಲ್ಲಿ ೪ ಪುರುಷರು, ೭ ಮಹಿಳೆಯರಿದ್ದಾರೆ. ೧೦ ಜನ ಶಿಷ್ಯವೇತನವನ್ನು ಪಡೆಯುತ್ತಿದ್ದು, ಅದರಲ್ಲಿ ೪ ಪುರುಷರು, ೬ ಮಹಿಳೆಯರಿದ್ದಾರೆ. ಒಟ್ಟು ಜನಸಂಖ್ಯೆಗೆ ಹೋಲಿಸಿದರೆ, ಇವರಲ್ಲಿ ಸರ್ಕಾರಿ ಸೌಲಭ್ಯಗಳನ್ನು ಪಡೆಯುವವರ ಪ್ರಮಾಣ ಕಡಿಮೆ ಇದೆ.

**ಆಧಾರಗಳು**

Annual Report on the working of the criminal Tribes Act in the Bombay presidency 1934, 1936, 1937.

Channa 5 M (Ed), *Encyclopedia of Indian Tribes and Castes* (New Delhi: Cosmo Publications: 2004) vol-4.

Kennedy M, *Criminal closes in the Bombay presidency* (Bombay: Govt, Central Press: 1908).

# ಅಧ್ಯಾಯ ಆರು

# ಸಮಾರೋಪ

ಒಂದು ಕಾಲದಲ್ಲಿ ಕಾಡಿನಲ್ಲಿ ಸ್ವತಂತ್ರವಾಗಿ, ಸ್ವಚ್ಛಂದ ಬದುಕನ್ನು ಬುಡಕಟ್ಟು ಸಮುದಾಯಗಳು ನಡೆಸುತ್ತಾ ಬಂದಿದ್ದವು. ಒಂದೊಂದು ಬುಡಕಟ್ಟು ಒಂದೊಂದು ಕುಲಕಸುಬನ್ನು ಹೊಂದಿದ್ದವು. ತಮ್ಮ ಜೀವನಕ್ಕೆ ಬೇಕಾದಷ್ಟನ್ನು ಮಾತ್ರ ಕಾಡಿಂದ ಪಡೆಯುತ್ತಿದ್ದು, ಕಾಡಿನ ರಕ್ಷಣೆಯನ್ನು ಸಹ ಮಾಡುತ್ತಿದ್ದರು. ಇದಿದ್ದರಲ್ಲಿಯೇ ಸಂತೋಷದಿಂದ ಒಂದು ಕಡೆಯಿಂದ ಇನ್ನೊಂದು ಕಡೆ ವಲಸೆ ಹೋಗುತ್ತ ಅಲೆಮಾರಿ ಜೀವನವನ್ನು ನಡೆಸುತ್ತಿದ್ದರು. ಬ್ರಿಟಿಷರ ಆಗಮನದಿಂದಾಗಿ ಈ ಸಮುದಾಯಗಳು ತಮ್ಮ ಮೂಲ ಕಸುಬನ್ನು ಕಳೆದುಕೊಂಡು ನಿರ್ಗತಿಕ ವಾದವು. ಕಾಡಿನಿಂದ ತಮ್ಮ ಸಂಬಂಧವನ್ನು ಕಳಚಿಕೊಳ್ಳುವಂತೆ, ಬ್ರಿಟಿಷರು ಇವರ ಮೇಲೆ ಹೊಸ ಹೊಸ ಕಾನೂನುಗಳನ್ನು ಜಾರಿಗೆ ತಂದರು. ಕೊನೆಗೆ ಈ ಸಮುದಾಯಗಳು ಬ್ರಿಟಿಷರ ವಿರುದ್ಧ ತಮಗಾದ ಅನ್ಯಾಯಕ್ಕಾಗಿ ತಿರುಗು ಬೀಳಲು ಆರಂಭಿಸಿದರು. ಬ್ರಿಟಿಷರು ಭಾರತವನ್ನು ಆಳಲು ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರು. ಆದರಂತೆಯೇ ಬ್ರಿಟಿಷರ ಈ ಎಲ್ಲಾ ಸಮುದಾಯಗಳ ಬಗ್ಗೆ ಮಾಹಿತಿ ಪಡೆಯಲು ಸ್ಥಳೀಯ ಸಮುದಾಯಗಳ ಸಹಾಯ ಪಡೆದರು. ಸ್ಥಳೀಯರಿಂದ ಮಾಹಿತಿ ಪಡೆದು, ಈ ಎಲ್ಲಾ ಸಮುದಾಯಗಳನ್ನು ನಿಯಂತ್ರಿಸಲೆಂದೇ, ೧೮೭೧ ರಲ್ಲಿ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಜಾರಿಗೆ ತಂದು, ಆದರಡಿಯಲ್ಲಿ ಅನೇಕ ಬುಡಕಟ್ಟು ಸಮುದಾಯಗಳನ್ನು ಅಪರಾಧಿ ಎಂದು ಪರಿಗಣಿಸಿ, ಸೆಟ್ಲ್‌ಮೆಂಟ್‌ಗಳಲ್ಲಿ ಬಂಧಿಸಿಡು ತ್ತಿದ್ದರು. ಹೀಗೆ ಅಪರಾಧಿ ಎಂಬ ಹಣೆಪಟ್ಟಿಯನ್ನು ಪಡೆದ ಸಮುದಾಯಗಳು ಬ್ರಿಟಿಷರ ನಿಯಂತ್ರಣಕ್ಕೊಳಪಟ್ಟು ಜೀವನ ನಡೆಸುತ್ತಿದ್ದರು. ಇವರು ಬ್ರಿಟಿಷ ಆಳುಗಳಾಗಿ ಉಚಿತವಾಗಿ ದುಡಿಯಬೇಕಿತ್ತು. ಭಾರತ ಸ್ವಾತಂತ್ರ್ಯಗೊಂಡ ನಂತರ ಸಹ ಕೆಲ ವರ್ಷಗಳ ಕಾಲ ಈ ಕಾಯ್ದೆಗಳು ಮತ್ತು ಇವರ ಬಂಧನದ ಜೀವನ ಮುಂದುವರೆಯಿತು. ನಂತರ ೧೯೫೨ರಲ್ಲಿ

ಈ ಎಲ್ಲಾ ಕಾಯ್ದೆಗಳನ್ನು ರದ್ದುಗೊಳಿಸಿದರು. ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದ್ದ ಎಲ್ಲಾ ಸಮುದಾಯಗಳು ಬಂಧನದಿಂದ ವಿಮುಕ್ತವಾದವು. ಆದರೆ ಅವರ ಪರಿಸ್ಥಿತಿಯಲ್ಲೇನೂ ಬದಲಾವಣೆಗಳಾಗಲಿಲ್ಲ. ಅಧಿಕಾರಿಗಳು, ಮೇಲ್ವರ್ಗದವರು ಇನ್ನೂ ಇವರನ್ನು ಅಪರಾಧಿಗಳು ಎಂಬ ದೃಷ್ಟಿಯಿಂದಲೇ ಕಾಣುತ್ತಾರೆ. ಅಂತಹ ಸಮುದಾಯಗಳಲ್ಲಿ 'ಚಪ್ಪರ್‌ಬಂದ್' ಸಹ ಒಂದು. ಎಂದೋ ತಮ್ಮ ಪೂರ್ವಜರು ಮಾಡಿದ ಸಣ್ಣ ತಪ್ಪಿಗೆ, ಈ ಸಮುದಾಯದ ಇಂದಿನ ಪೀಳಿಗೆ ಇನ್ನೂ ಸಹ ಆ ಕೀಳಿರಿಮೆ ಇಂದ ಸಂಪೂರ್ಣವಾಗಿ ಹೊರಬಂದಿಲ್ಲ ಅಥವಾ ಹೊರಬರಲು ನಮ್ಮ ಈ ಮೇನ್‌ಸ್ಟ್ರೀಮ್ ಬಿಡುತ್ತಿಲ್ಲ ಎಂದು ಹೇಳಬಹುದು. ಈ ಸಮುದಾಯವನ್ನು ಈಗಲೂ ಸಹ ಗಮಾನಿಯಿಂದಲೇ ನೋಡುತ್ತಾರೆ. ಅದು ಎಷ್ಟರ ಮಟ್ಟಿಗೆ ಇದೆ ಅಂದರೆ, ಮೊದಲ ಬಾರಿ ಗದಗಕ್ಕೆ ಕ್ಷೇತ್ರಕಾರ್ಯಕ್ಕೆ ಹೋದಾಗ ಸೆಟ್ಲ್‌ಮೆಂಟ್‌ನ ವಿಳಾಸ ಕೇಳಿದಾಗ, ಅಲ್ಲಿನ ಸ್ಥಳೀಯರು ನಿಮಗೆ ಅವರ ವಿಳಾಸ ಏಕೆ ಎಂದು ಗುಮಾನಿಯಿಂದ ಅನೇಕ ಪ್ರಶ್ನೆಗಳನ್ನು ಕೇಳಿದ್ದರು. ನಮ್ಮ ವ್ಯವಸ್ಥೆಯಲ್ಲಿ ದೊಡ್ಡ ದೊಡ್ಡ ಅಪರಾಧಗಳನ್ನು ಮಾಡಿ ಶಿಕ್ಷೆ ಅನುಭವಿಸಿ, ಹೊರಬಂದು ವೈಭವದ ಜೀವನ ನಡೆಸುವವರನ್ನು ನಾವು ಕಾಣುತ್ತೇವೆ ಹಾಗೂ ಅವರ ಅಪಾರಾಧಗಳನ್ನು (ತಪ್ಪುಗಳನ್ನು) ಮರೆತು ಅವರನ್ನು ಒಪ್ಪಿಕೊಳ್ಳುತ್ತೇವೆ. ಆದರೆ ಹೊಟ್ಟೆ ಪಾಡಿಗಾಗಿ ಏನು ತೋಚದೆ ಇದ್ದ ಪರಿಸ್ಥಿತಿಯಲ್ಲಿ ಎಂದೋ ಮಾಡಿದ ಸಣ್ಣ-ಪುಟ್ಟ ತಪ್ಪುಗಳಿಂದಾಗಿ ನಾವು ಅವರನ್ನು ಇಂದಿಗೂ ಸಹ ಅಪರಾಧಿಗಳ ರೀತಿಯಲ್ಲಿಯೇ ನೋಡುತ್ತಿದ್ದೇವೆ. ಅವರನ್ನು ಆ ಕೀಳಿರಿಮೆಯಿಂದ ಹೊರಬರಲು ಬಿಡುತ್ತಿಲ್ಲ. ಚಪ್ಪರ್‌ಬಂದ್ ಸಮುದಾಯ ಹಿಂದೂ-ಇಸ್ಲಾಂ ಎರಡರ ಸಂಸ್ಕೃತಿಯನ್ನು ಅನುಸರಿಸುತ್ತಿರುವ ಬುಡಕಟ್ಟು ಸಮುದಾಯವಾಗಿದೆ. ಈ ಸಮುದಾಯವು ಬುಡಕಟ್ಟುಗಳು ಹೊಂದಿರುವ ಲಕ್ಷಣಗಳನ್ನು ಈಗಲೂ ಹೊಂದಿದೆ. ಆದರೆ ಈ ಸಮುದಾಯವು ಸ್ವಾಂಗೀಕರಣ ಪ್ರಕ್ರಿಯೆಗೊಳಗಾಗಿದ್ದು ತನ್ನನೂ ಸಂಪೂರ್ಣವಾಗಿ ಇಸ್ಲಾಂ ಧರ್ಮಕ್ಕೆ ಪರಿವರ್ತಿಸಿಕೊಳ್ಳುವ ಪ್ರಯತ್ನದಲ್ಲಿದೆ ಎನ್ನಬಹುದು.

**ಸಮಸ್ಯೆಗಳು**

ಪ್ರತಿಯೊಂದು ಸಮಾಜದಲ್ಲಿ ನಾವು ಅನಾದಿಕಾಲದಿಂದಲೂ ಮೇಲು-ಕೀಳು, ಶ್ರೇಷ್ಠ-ಕನಿಷ್ಠ, ಸ್ಪೃಶ್ಯ-ಅಸ್ಪೃಶ್ಯ ಮತ್ತು ಬಡವ-ಶ್ರೀಮಂತ ಎಂಬ ಶ್ರೇಣಿಕೃತ ಸ್ತರವಿನ್ಯಾಸವನ್ನು ಕಾಣುತ್ತಾ ಬರುತ್ತಿದ್ದೇವೆ. ಇಂತಹ ಪರಿಸ್ಥಿತಿಯಲ್ಲಿ ಪ್ರತಿಯೊಂದು ಸಮುದಾಯವೂ ಕೂಡ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುತ್ತದೆ. ಅದರಲ್ಲೂ ಒಂದಾನೊಂದು ಕಾಲದಲ್ಲಿ ಅಪರಾಧಿ ಎಂಬ ಹಣೆಪಟ್ಟಿಯನ್ನು ಪಡೆದಿದ್ದ ವಿಮುಕ್ತ ಬುಡಕಟ್ಟುಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿವೆ. ಸ್ವತಂತ್ರ ಭಾರತದಲ್ಲಿ ಸರ್ಕಾರ ಸಹ ಈ ಸಮುದಾಯಗಳನ್ನು ನಿರ್ಲಕ್ಷಿಸಿತು. ಕೆಲ ಬೆರಳೆಣಿಕೆಯಷ್ಟು ಸಮುದಾಯಗಳ ಬಗ್ಗೆ ಮಾತ್ರ ಕಾಳಜಿ ವಹಿಸಿ, ಇನ್ನುಳಿದ ಅನೇಕ

ಸಮುದಾಯಗಳನ್ನು ಅಭಿವೃದ್ಧಿ ಪಡೆಸುತ್ತೇವೆ ಎಂಬ ಸುಳ್ಳು ಆಶ್ವಾಸನೆ ಕೊಟ್ಟು, ಅವುಗಳನ್ನು ಮರೆತೇ ಹೋಯಿತು. ಹಿಂದುಳಿದ ವರ್ಗಗಳ ಆಯೋಗಗಳು ತಮ್ಮ ವರದಿಯಲ್ಲಿ ಇಂತಹ ಸಮುದಾಯಗಳನ್ನು ಗುರುತಿಸಿ, ಏಳಿಗೆಗೆ ವಿಶೇಷ ಪ್ಯಾಕೇಜ್‌ಗಳನ್ನು ಸೂಚಿಸಿತು. ಆದರೆ ಸರ್ಕಾರ ಅದರ ಅನುಷ್ಠಾನದ ಬಗ್ಗೆ ಗಮನ ಹರಿಸಲೇ ಇಲ್ಲ. ಅಂತಹ ನಿರ್ಲಕ್ಷಕ್ಕೊಳಪಟ್ಟ ಸಮುದಾಯಗಳಲ್ಲಿ ಚಪ್ಪರ್‌ಬಂದ್ ಸಮುದಾಯವೂ ಒಂದು. ಈ ಸಮುದಾಯವೂ ಮೊದಲಿನಿಂದಲೂ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾ ಬರುತ್ತಿದೆ. ಸೆಟ್ಲ್‌ಮೆಂಟ್‌ನಲ್ಲಿ ಹಾಗೂ ಸೆಟ್ಲ್‌ಮೆಂಟ್ ಅಲ್ಲದ ಪ್ರದೇಶದಲ್ಲಿ ನೆಲೆಸಿರುವ ಈ ಸಮುದಾಯದವರು ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಿ ಮುಂದಿನಂತೆ ವಿವರಿಸಲಾಗಿದೆ.

**ವಸತಿ ಸಮಸ್ಯೆ**

ಚಪ್ಪರ್‌ಬಂದ್ ಸಮುದಾಯದವರು ವಸತಿ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಸೆಟ್ಲ್‌ಮೆಂಟ್‌ಗಳಲ್ಲಿ ನೆಲಸಿರುವವರು ತುಂಬಾನೆ ಚಿಕ್ಕ-ಚಿಕ್ಕ ಇಕ್ಕಟ್ಟಾದ ಹಳೆ ಮನೆಗಳನ್ನು ಹೊಂದಿದ್ದಾರೆ. ಇವರ ಮನೆಗಳಲ್ಲಿ ಸರಿಯಾಗಿ ಗಾಳಿ-ಬೆಳಕು ಸಹ ಪ್ರವೇಶಿಸುವುದಿಲ್ಲ. ಕೆಲ ಸೆಟ್ಲ್‌ಮೆಂಟ್‌ಗಳನ್ನು ನೋಡಿದರೆ ಕೊಳಚೆ ಪ್ರದೇಶಗಳಾಗಿವೆ. ಅಲ್ಲಿ ಸರಿಯಾದ ಕೆಲ ಮೂಲಭೂತ ಸೌಕರ್ಯಗಳು ಸಹ ಇಲ್ಲ. ಸರ್ಕಾರ ಇಲ್ಲಿ ಯಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿಲ್ಲ ಹಾಗೂ ಈ ಸಮುದಾಯದವರಿಗೆ ಮನೆ ಕಟ್ಟಿಕೊಳ್ಳಲು ಯಾವುದೇ ಆರ್ಥಿಕ ನೆರವನ್ನು ಸಹ ನೀಡುತ್ತಿಲ್ಲ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಕೆಲ ಕುಟುಂಬಗಳು ಮಾತ್ರ ಉತ್ತಮ ಮನೆಗಳನ್ನು ಹೊಂದಿದ್ದಾರೆ. ಸರ್ಕಾರದ ಆಶ್ರಯ ಮನೆ ಸೌಲಭ್ಯದಿಂದ ಕೂಡ ಈ ಸಮುದಾಯ ವಂಚಿತವಾಗಿದೆ. ಅನೇಕರು ಸ್ವಂತ ಮನೆ ಇಲ್ಲದೆ ಬಾಡಿಗೆ ಮನೆಯನ್ನು ಹೊಂದಿದ್ದಾರೆ.

**ಆರೋಗ್ಯ ಸಮಸ್ಯೆ**

ಸೆಟ್ಲ್‌ಮೆಂಟ್‌ಗಳಲಿ ನೆಲೆಸಿದ್ದ ಸಮುದಾಯಗಳಿಗಾಗಿ ಬ್ರಿಟಿಷರು ಸೆಟ್ಲ್‌ಮೆಂಟ್‌ಗಳಲ್ಲಿಯೇ ಆಸ್ಪತ್ರೆಗಳನ್ನು ನಿರ್ಮಿಸಿದ್ದರು. ಅಲ್ಲಿನ ಜನರ ಆರೋಗ್ಯದ ಬಗ್ಗೆ ಬ್ರಿಟಿಷರು ಕಾಳಜಿ ವಹಿಸಿದ್ದರು. ಯಾವುದೇ ರೀತಿಯ ರೋಗಗಳು ಹರಡಬಾರದೆಂದು, ತುಂಬಾ ಕಾಳಜಿ ವಹಿಸುತ್ತಿದ್ದರು. ಜೊತೆಗೆ ಸೆಟ್ಲ್‌ಮೆಂಟ್‌ನ ನೈರ್ಮಲ್ಯದ ಕಡೆ ಸಹ ಹೆಚ್ಚಿನ ಗಮನ ಹರಿಸುತ್ತಿದ್ದರು. ಆದರೆ ಭಾರತ ಸ್ವತಂತ್ರಗೊಂಡ ನಂತರ ಆಸ್ಪತ್ರೆಗಳು ಸರ್ಕಾರದಡಿಯಲ್ಲಿ ಹೋದವು. ಹೆಸರಿಗೆ ಮಾತ್ರ ಆಸ್ಪತ್ರೆಗಳಿವೆ. ಆದರೆ ಅಲ್ಲಿ ಯಾವುದೇ ರೀತಿಯ ಸೌಲಭ್ಯಗಳಿಲ್ಲ. ಚಪ್ಪರ್‌ಬಂದ್ ಸಮುದಾಯದವರು ಅಪೌಷ್ಟಿಕತೆಯಿಂದ ಸಹ ಬಳಲುತ್ತಿದ್ದಾರೆ. ಇಂದು ಸೆಟ್ಲ್‌ಮೆಂಟ್‌ಗಳು ಕೊಳಚೆ ಪ್ರದೇಶಗಳಂತೆ ಭಾಸವಾಗುತ್ತವೆ. ಸ್ಥಳೀಯ ಸರ್ಕಾರಗಳು ಸಹ ಅಲ್ಲಿನ ನೈರ್ಮಲ್ಯದ

ಕಡೆ ಗಮನ ಹರಿಸುತ್ತಿಲ್ಲ. ಚಪ್ಪರ್‌ಬಂದ್ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆ ಅತಿ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡುವುದರಿಂದ ಆ ಹೆಣ್ಣುಮಕ್ಕಳು ಅಪೌಷ್ಟಿಕತೆ, ಪದೇ ಪದೇ ಗರ್ಭಪಾತವಾಗುವುದು, ಋತುಸ್ರಾವ ಇತ್ಯಾದಿ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಹುಟ್ಟುವ ಕೆಲ ಮಕ್ಕಳಿಗು ಸಹ ಅಪೌಷ್ಠಿಕತೆ ಸಮಸ್ಯೆ ಇರುತ್ತದೆ. ಒಟ್ಟಿನಲ್ಲಿ ಸರ್ಕಾರ ಇವರ ಆರೋಗ್ಯಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಮುಂಜಾಗ್ರತೆ ಕ್ರಮಗಳನ್ನು ಮತ್ತು ಯೋಜನೆಗಳನ್ನು ರೂಪಿಸದೆ ನಿರ್ಲಕ್ಷ್ಯ ಧೋರಣೆ ತಾಳಿರುವುದು ಕಂಡುಬರುತ್ತದೆ.

**ಶೈಕ್ಷಣಿಕ ಸಮಸ್ಯೆ**

ಬ್ರಿಟಿಷರು ಸೆಟ್ಲ್‌ಮೆಂಟ್‌ಗಳಲ್ಲಿ ಮಕ್ಕಳಿಗಾಗಿ ಶಾಲೆಗಳನ್ನು ಸ್ಥಾಪಿಸಿದ್ದರು. ಅಲ್ಲಿನ ಮಕ್ಕಳಿಗೆ ಶಿಕ್ಷಣದ ಜೊತೆಗೆ ವಿವಿಧ ರೀತಿಯ ಕ್ರೀಡೆಗಳನ್ನು ಕಲಿಸಿ, ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಬ್ರಿಟಿಷರು ಸೆಟ್ಲ್‌ಮೆಂಟ್‌ನಲ್ಲಿ ನೆಲೆಸಿದ್ದ ಮಕ್ಕಳ ಶಿಕ್ಷಣಕ್ಕಾಗಿ ಶ್ರಮಿಸುತ್ತಿತ್ತು. ಜೊತೆಗೆ ಕ್ರೈಸ್ತ ಮಿಶನರಿಗಳು ಶ್ರಮಿಸುತ್ತಿದ್ದವು. ಭಾರತ ಸ್ವಾತಂತ್ರಗೊಂಡ ನಂತರವೂ ಈ ಶಾಲೆಗಳು ಇನ್ನೂ ಇಲ್ಲಿಯೇ ಕಾರ್ಯನಿರ್ವಹಿಸುತ್ತಿವೆ. ಆದರೂ ಚಪ್ಪರ್‌ಬಂದ್ ಸಮುದಾಯದ ಸಾಕ್ಷರತೆಯ ಪ್ರಮಾಣವು ಹೆಚ್ಚುತ್ತಿಲ್ಲ. ಸರ್ಕಾರ ಉಚಿತ ಕಡ್ಡಾಯ ಶಿಕ್ಷಣ, ಬಿಸಿಯೂಟ ಯೋಜನೆ, ನಲಿಕಲಿ ಇತ್ಯಾದಿ ಅನೇಕ ಶೈಕ್ಷಣಿಕ ಯೋಜನೆಗಳನ್ನು ಹಮ್ಮಿಕೊಂಡಿದ್ದರೂ ಈ ಸಮುದಾಯ ಇನ್ನೂ ಸಹ ಶಿಕ್ಷಣದ ಕಡೆ ಹೆಚ್ಚಿನ ಒಲವು ತೋರಿಸುತ್ತಿಲ್ಲ. ಈ ಸಮುದಾಯದವರು ತಮ್ಮ ಮಕ್ಕಳಿಗೆ ಪ್ರಾಥಮಿಕ ಮಟ್ಟದ ಶಿಕ್ಷಣವನ್ನು ಮಾತ್ರ ಕೊಡಿಸುತ್ತಾರೆ. ನಂತರ ಕುಟುಂಬದ ಆರ್ಥಿಕತೆಗೆ ಅನುಕೂಲವಾಗಲಿ ಎಂದು ಗಂಡು ಮಕ್ಕಳನ್ನು ದುಡಿಯಲು ಕಳುಹಿಸುತ್ತಾರೆ. ಜೊತೆಗೆ ಸಮುದಾಯದವರು ಹೆಚ್ಚಿನ ಶಿಕ್ಷಣ ಪಡೆಯಲು ಯಾವುದೇ ವಿಶೇಷ ರೀತಿಯ ಶೈಕ್ಷಣಿಕ ಮೀಸಲಾತಿ, ಪ್ರೋತ್ಸಾಹ ಧನ, ಶಿಷ್ಯವೇತನ, ಉಚಿತ ವೃತ್ತಿಪರ ಕೋರ್ಸಗಳ ತರಬೇತಿ, ಉಚಿತ ವಿದ್ಯಾರ್ಥಿನಿಲಯಗಳ ನಿರ್ಮಾಣ ಮುಂತಾದ ಸೌಲಭ್ಯಗಳನ್ನು ನೀಡುತ್ತಿಲ್ಲ. ಇವರು ಆರ್ಥಿಕವಾಗಿ ತುಂಬಾನೆ ಹಿಂದುಳಿದಿರುವುದರಿಂದ, ಹೆಚ್ಚಿನ ಹಣ ಕೊಟ್ಟು ಶಿಕ್ಷಣ ಪಡೆಯಲು ಆಗುತ್ತಿಲ್ಲ. ಹಾಗಾಗಿ ಈ ಸಮುದಾಯದ ಸಾಕ್ಷರತೆಯ ಪ್ರಮಾಣ ಕುಂಠಿತವಾಗಿಯೇ ಇದೆ. ಅದರಲ್ಲೂ ಹೆಣ್ಣು ಮಕ್ಕಳು ಶೈಕ್ಷಣಿಕವಾಗಿ ತುಂಬಾನೆ ಹಿಂದುಳಿದಿದ್ದಾರೆ. ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಮಾತ್ರ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ, ಅದರಲ್ಲೂ ಉನ್ನತ ಶಿಕ್ಷಣದ ಪ್ರಮಾಣವು ತೀರಾ ಕಡಿಮೆ ಇದೆ ಎಂದು ಹೇಳಬಹುದು.

**ಸರ್ಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ಸಮಸ್ಯೆ**

ಚಪ್ಪರ್‌ಬಂದ್ ಸಮುದಾಯವು ವಿಮುಕ್ತ ಬುಡಕಟ್ಟಾಗಿದ್ದು, ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಪ್ರವರ್ಗ ೧ ರಲ್ಲಿ ಸೇರ್ಪಡೆಗೊಂಡಿದೆ. ಈ ಸಮುದಾಯದವರು ಹೇಳುವ ಪ್ರಕಾರ

ಜಾತಿ ಪ್ರಮಾಣ ಪತ್ರ, ಪಡಿತರ ಚೀಟಿ, ಮಕ್ಕಳ ಶಿಷ್ಯವೇತನ ಇತ್ಯಾದಿ ಸೌಲಭ್ಯಗಳನ್ನು ಪಡೆಯುವಲ್ಲಿ ತುಂಬಾನೆ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಜೊತೆಗೆ ಸರ್ಕಾರ ನೀಡುವ ಯಾವುದೇ ರೀತಿಯ ಸವಲತ್ತುಗಳನ್ನು ಇವರು ಪಡೆಯಲಾಗುತ್ತಿಲ್ಲ. ಜಾತಿ ಪ್ರಮಾಣ ಪತ್ರ ನೀಡಲು ನೀವು ಇದೇ ಜಾತಿಯವರೆಂದು ಏನು ಗ್ಯಾರೆಂಟಿ ಎಂದು ಕೇಳಿ ಅಧಿಕಾರಿಗಳು ಇವರನ್ನು ಪದೇ ಪದೇ ಕಛೇರಿಗೆ ಬರುವಂತೆ ಹೇಳುತ್ತಾರೆ, ಮತ್ತು ಬೇಗನೆ ಕೆಲಸ ಮಾಡಿ ಕೊಡುವುದಿಲ್ಲ. ಜೊತೆಗೆ ಸೆಟ್ಲ್‌ಮೆಂಟ್‌ನಲ್ಲಿ ಇತರೆ ವಿಮುಕ್ತ ಬುಡಕಟ್ಟುಗಳಿಗಿರುವ ಸವಲತ್ತುಗಳು ಈ ಸಮುದಾಯದವರಿಗೆ ಇಲ್ಲ. ಚಪ್ಪರ್‌ಬಂದ್ ಸಮುದಾಯಕ್ಕಿಂತ ಉಳಿದ ವಿಮುಕ್ತ ಬುಡಕಟ್ಟುಗಳು ಸರ್ಕಾರದಿಂದ ಹೆಚ್ಚಿನ ಸವಲತ್ತುಗಳನ್ನು–ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಸರ್ಕಾರ ಈ ಸಮುದಾಯವನ್ನು ಕಡೆಗಣಿಸಿದೆ ಎಂದು ಹೇಳಬಹುದು. ಇತ್ತೀಚಿಗೆ ಬೇರೆ ಸಮುದಾಯದವರು ತಾವು ಚಪ್ಪರ್‌ಬಂದ್ ಸಮುದಾಯದವರೆಂದು ಹೇಳಿ ಸೌಲಭ್ಯಗಳನ್ನು ಪಡೆಯುತ್ತಿರುವುದು ಮತ್ತು ಸುಳ್ಳು ಜಾತಿ ಪ್ರಮಾಣ ಪತ್ರ ಪಡೆಯುತ್ತಿರುವುದು ಬೆಳಕಿಗೆ ಬಂದಿದೆ ಎಂದು ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿದೆ.

**ಸಾಮಾಜಿಕ ಸಮಸ್ಯೆ**

ಚಪ್ಪರ್‌ಬಂದ್ ಸಮುದಾಯದವರು ಅಪರಾಧಿ ಬುಡಕಟ್ಟು ಹಿನ್ನೆಲೆಯನ್ನು ಹೊಂದಿರುವುದರಿಂದ ಇವರು ಇನ್ನೂ ಸಹ ಕೀಳಿರಿಮೆಯನ್ನು ಹೊಂದಿದ್ದಾರೆ. ಜೊತೆಗೆ ಸಮಾಜದ ಇತರೆ ಸಮುದಾಯಗಳು ಇವರನ್ನು ಕೆಳಮಟ್ಟದ ದೃಷ್ಟಿಕೋನದಿಂದ ನೋಡುತ್ತಾರೆ. ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದವರು ಎಂದು ತಕ್ಷಣ ಇವರು ಅಪರಾಧಿಗಳು ಎನ್ನುವಂತೆ ವರ್ತಿಸುತ್ತಾರೆ. ಸರ್ಕಾರಿ ಅಧಿಕಾರಿಗಳು ಸಹ ಇದೇ ರೀತಿಯಲ್ಲಿ ವರ್ತಿಸುತ್ತಾರೆ. ಚಪ್ಪರ್‌ಬಂದ್ ಸಮುದಾಯವು ಮೂಲತಃ ಬುಡಕಟ್ಟು ಸಮುದಾಯವಾಗಿದ್ದು, ಇದು ಬುಡಕಟ್ಟು–ಇಸ್ಲಾಂ ಎರಡರ ಸಂಸ್ಕೃತಿಯನ್ನು ಹೊಂದಿದೆ. ಆದರೆ ಮೂಲತಃ ಇದು ಬುಡಕಟ್ಟು ಸಮುದಾಯವಾಗಿದ್ದು, ನಂತರ ಹಿಂದೂ ಅಥವಾ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರಬಹುದು. ಚಪ್ಪರ್‌ಬಂದ್ ಸಮುದಾಯ ಸ್ವಾಂಗೀಕರಣ ಪ್ರಕ್ರಿಯೆಗೊಳಗಾಗಿದ್ದು, ಮೂಲ ಸಂಸ್ಕೃತಿಯನ್ನೂ ಬಿಡದೆ, ಇನ್ನೊಂದು ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲಾಗದೆ ಗೊಂದಲದಲ್ಲಿದೆ. ಜೊತೆಗೆ ಇಸ್ಲಾಂ ಧರ್ಮದ ಇತರೆ ಸಮುದಾಯದವರು ಸಹ ಇವರನ್ನು ಕೀಳಾಗಿ ಕಾಣುತ್ತಾರೆ. ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿದರೆ ಈ ತೊಂದರೆ ಎಂದು ಹಲವು ಕುಟುಂಬಗಳು, ಸೆಟ್ಲ್‌ಮೆಂಟ್ ಹೊರಗೆ ಹೋಗಿ ನೆಲೆಸಿವೆ. ಈ ಸಮುದಾಯ ಇಸ್ಲಾಂ ಧರ್ಮದ ಒಂದು ಒಳಪಂಗಡವಾಗಿದ್ದುಕೊಂಡೇ, ತನ್ನ ಮೂಲ ಸಂಸ್ಕೃತಿಯ ಚಹರೆಯನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದೆ.

**ಆರ್ಥಿಕ ಸಮಸ್ಯೆ**

ಚಪ್ಪರ್‌ಬಂದ್ ಸಮುದಾಯ ಆರ್ಥಿಕವಾಗಿ ತುಂಬಾನೆ ಸಮಸ್ಯೆಯನ್ನು ಅನುಭವಿಸುತ್ತಿದೆ. ಈ ಸಮುದಾಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಡಿಮೆ ಆದಾಯ ಬರುವ ಕೆಲಸಗಳಲ್ಲಿ ತೊಡಗಿದ್ದಾರೆ. ಇವರು ಹೆಚ್ಚಾಗಿ ಗೌಂಡಿ, ಬಡಗಿತನ, ಟೈಲ್ಸ್ ಹಾಕುವ ಕೆಲಸಗಳಲ್ಲಿ ತೊಡಗಿದ್ದಾರೆ. ಕೆಲವರು ಸಣ್ಣ-ಪುಟ್ಟ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಕೆಲವರು ಮಾತ್ರ ಸರ್ಕಾರಿ ಕೆಲಸದಲ್ಲಿದ್ದಾರೆ. ಸರ್ಕಾರ ಇವರು ಸ್ವಂತ ವ್ಯಾಪಾರ-ವಹಿವಾಟು ಮಾಡಲು ಯಾವುದೇ ರೀತಿಯ ಸಾಲ ಸೌಲಭ್ಯಗಳನ್ನು ಸಹ ನೀಡುತ್ತಿಲ್ಲ. ಇವರು ಆರ್ಥಿಕವಾಗಿ ಹಿಂದುಳಿದಿರುವುದರಿಂದ, ಬ್ಯಾಂಕುಗಳು ಸಹ ಇವರಿಗೆ ಸಾಲವನ್ನು ನೀಡಲು ಹಿಂದೇಟು ಹಾಕುತ್ತಾರೆ. ಇವರು ಈಗಲೂ ಕೆಲಸವನ್ನಾರಿಸುತ್ತಾ ಒಂದು ಊರಿಂದ ಇನ್ನೊಂದು ಊರಿಗೆ ವಲಸೆ ಹೋಗುತ್ತಿದ್ದಾರೆ. ಇವರು ಸೋಲಾಪುರ, ಪೂನಾ, ಗೋವಾ, ದುಬೈಗಳಿಗೆ ವಲಸೆ ಹೋಗುತ್ತಿರುವುದು ಕಂಡುಬರುತ್ತಿದೆ. ಇವರು ನಗರಗಳಲ್ಲಿ ದಿನಗೂಲಿ ಕೆಲಸವನ್ನು ಸಹ ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿ ಮಾತ್ರ ಕೆಲವರು ಕೃಷಿ ಕೆಲಸ ಮಾಡುತ್ತಿದ್ದಾರೆ. ಮಹಿಳೆಯರು ಅಲ್ಪ ಪ್ರಮಾಣದಲ್ಲಿ ಕೂಲಿ ಕೆಲಸ, ಬೀಡಿ ಕಟ್ಟುವ ಕೆಲಸಗಳನ್ನು ಮಾಡುತ್ತಿದ್ದಾರೆ. ಒಟ್ಟಿನಲ್ಲಿ ಇವರು ಆರ್ಥಿಕವಾಗಿ ಮುಂದುವರೆಯಲು ಸರ್ಕಾರ ಇವರಿಗೆ ಯಾವುದೇ ರೀತಿಯಲ್ಲೂ ಸಹಾಯ ಮಾಡುತ್ತಿಲ್ಲ.

**ಸಂಘಟನಾ ಸಮಸ್ಯೆ**

ಚಪ್ಪರ್‌ಬಂದ್ ಸಮುದಾಯದವರ ಜನಸಂಖ್ಯೆ ತುಂಬಾ ಕಡಿಮೆ ಇದೆ. ಇವರು ತಮ್ಮ ಹಕ್ಕುಗಳನ್ನು-ಸೌಲಭ್ಯಗಳನ್ನು ಪಡೆಯಲು ತಮ್ಮದೇ ಒಂದು ಸಂಘಟನೆಯನ್ನು ಮಾಡಿಕೊಂಡು ಹೋರಾಡುತ್ತಿದ್ದಾರೆ. ಆದರೆ ಇವರಿಗೆ ರಾಜಕೀಯ ಬೆಂಬಲ ಇಲ್ಲದ ಕಾರಣ ಇವರ ಹೋರಾಟ ಅಷ್ಟೊಂದು ಪ್ರಾಮುಖ್ಯತೆ ಪಡೆಯುತ್ತಿಲ್ಲ. ಈ ಸಮುದಾಯದಿಂದ ಯಾರೂ ಕೂಡ ರಾಜಕೀಯದಲ್ಲಿ ಉನ್ನತ ಸ್ಥಾನಕ್ಕೆ ಹೋಗಿಲ್ಲ. ಹಾಗಾಗಿ ಇವರಿಗೆ ರಾಜಕೀಯ ಬೆಂಬಲ ನಗಣ್ಯವಾಗಿದೆ. ಈ ಸಮುದಾಯ ಹಿಂದುಳಿದ ಪಟ್ಟಿಯ ಪ್ರವರ್ಗ ೧ರಲ್ಲಿ ಬರುತ್ತದೆ, ಆದರೆ ಈ ಸಮುದಾಯದವರು ತಮ್ಮನ್ನು 'ಪರಿಶಿಷ್ಟ ಬುಡಕಟ್ಟು(ಎಸ್ ಟಿ)' ಪಟ್ಟಿಯಲ್ಲಿ ಸೇರಿಸಬೇಕೆಂದು ತಮ್ಮ ಸಂಘಟನೆಯ ಮೂಲಕ ಸರ್ಕಾರಕ್ಕೆ ಮನವಿ ಮಾಡುತ್ತಿದ್ದಾರೆ. ಈ ಸಮುದಾಯ ಪರಿಶಿಷ್ಟ ಪಂಗಡ ಹೊಂದಿರಬೇಕಾದ ಲಕ್ಷಣಗಳನ್ನು ಹೊಂದಿದೆ, ಹಾಗಾಗಿ ಈ ಸಮುದಾಯವನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಬಹುದಾಗಿದೆ.

**ಅಧ್ಯಯನದ ಫಲಿತಗಳು**

೧. ಚಪ್ಪರ್‌ಬಂದ್ ಸಮುದಾಯದವರು ಇನ್ನೂ ಸಹ ಅಪರಾಧಿ ಬುಡಕಟ್ಟು ಎಂಬ ಕೀಳರಿಮೆಯಿಂದ ಹೊರ ಬರಲು ಸಾಧ್ಯವಾಗುತ್ತಿಲ್ಲ.

೨. ಇಸ್ಲಾಂ ಧರ್ಮದ ಇತರೆ ಕೆಲ ಸಮುದಾಯಗಳು ಇವರನ್ನು ಹೊರಗಿನವರಂತೆ ನೋಡುತ್ತವೆ. ಮುಸ್ಲಿಂ ಇತರೆ ಸಮುದಾಯಗಳ ಮತ್ತು ಇವರ ನಡುವೆ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ.

೩. ಚಪ್ಪರ್‌ಬಂದ್ ಸಮುದಾಯದಲ್ಲಿ ಕೆಲವರು ತಾವು ಚಪ್ಪರ್‌ಬಂದ್ ಸಮುದಾಯದವರೆಂದು ಹೇಳಿದರೆ, ಜನ ತಮ್ಮನ್ನು ಅನುಮಾನದಿಂದ ಕಾಣುತ್ತಾರೆ ಎಂಬ ಕಾರಣಕ್ಕಾಗಿ, ಇವರು ತಮ್ಮನ್ನು ಇಸ್ಲಾಂ ಧರ್ಮದ ಇತರೆ ಸಮುದಾಯದವರೆಂದು ಹೇಳಿಕೊಳ್ಳುತ್ತಿರುವುದು ಕಂಡುಬಂದಿದೆ.

೪. ಚಪ್ಪರ್‌ಬಂದ್ ಸಮುದಾಯ ಸ್ವಾಂಗೀಕರಣ (Assimilation) ಪ್ರಕ್ರಿಯೆಗೆ ಒಳಗಾಗಿದ್ದು, ಎರಡೂ ಧರ್ಮಗಳ ಸಂಸ್ಕೃತಿಯನ್ನು ಅಳವಡಿಸಿಕೊಂಡು ಗೊಂದಲದ ಪರಿಸ್ಥಿತಿಯಲ್ಲಿದೆ. ಏಕೆಂದರೆ ಒಂದು ವೇಳೆ ಇವರು ತಮ್ಮ ಮೂಲ ಸಂಸ್ಕೃತಿಯನ್ನು ಬಿಟ್ಟರೆ, ಇವರು ತಮ್ಮ ಮೂಲ ಅಸ್ತಿತ್ವವನ್ನೇ ಕಳೆದುಕೊಂಡಂತಾಗುತ್ತದೆ. ಒಂದು ವೇಳೆ ಮೂಲ ಸಂಸ್ಕೃತಿಯನ್ನು ಸಂಪೂರ್ಣವಾಗಿ ಅಳವಡಿಸಿಕೊಂಡರೆ, ಇಸ್ಲಾಂ ಧರ್ಮದ ಇತರೆ ಸಮುದಾಯಗಳು ಇವರನ್ನು ಪರಕೀಯರಂತೆ ಕಾಣುತ್ತವೆ. ಹೀಗಾಗಿ ಅತ್ತ ಬಿಡಲೂ ಆಗದೆ, ಇತ್ತ ಒಪ್ಪಲೂ ಆಗದೆ ಗೊಂದಲದಲ್ಲಿದೆ.

೫. ಇವರು ಇಸ್ಲಾಂ ಧರ್ಮವನ್ನು ಅನುಸರಿಸುತ್ತಿದ್ದರೂ ಸಹ, ಇವರನ್ನು ಸಂಪೂರ್ಣವಾಗಿ ಇಸ್ಲಾಂ ಧರ್ಮದವರೆಂದು ಪರಿಗಣಿಸಲಾಗುವುದಿಲ್ಲ. ಕಾರಣ ಇವರು ಈಗಲೂ ಸಹ ಅನೇಕ ಬುಡಕಟ್ಟು ಲಕ್ಷಣಗಳನ್ನು ತಮ್ಮಲ್ಲಿ ಉಳಿಸಿಕೊಂಡಿದ್ದಾರೆ. ಅವು– ಇವರಲ್ಲಿ ಈಗಲೂ ಬೆಡಗು ಪದ್ಧತಿಯನ್ನು ಕಾಣಬಹುದು. ಹಾಗೆಯೇ ಇವರಲ್ಲಿ ಸಗುಂಪು, ಸಬೆಡಗು ವಿವಾಹ ನಿಷೇಧವಿದೆ. ಈಗಲೂ ಇವರು ಮೂರ್ತಿ ಪೂಜೆಯನ್ನು ಮಾಡುತ್ತಾರೆ. ಈ ಅಂಶಗಳನ್ನು ನಾವು ಇಸ್ಲಾಂ ಧರ್ಮದಲ್ಲಿ ಕಾಣುವುದಿಲ್ಲ. ಆದರೆ ಇವರನ್ನು ಹಿಂದೂ ಧರ್ಮದವರೆಂದು ಸಹ ಕರೆಯಲಾಗುವುದಿಲ್ಲ. ಜೊತೆಗೆ ತಮ್ಮದೇ ಆದ ಪ್ರತ್ಯೇಕ ಭಾಷೆಯನ್ನು ಉಳಿಸಿ ಕೊಂಡಿದ್ದಾರೆ. ಈ ಎಲ್ಲಾ ಬುಡಕಟ್ಟು ಲಕ್ಷಣಗಳನ್ನು ಹೊಂದಿರುವುದರಿಂದ ಇವರು ತಮ್ಮನ್ನು ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ಸೇರಿಸುವಂತೆ ಹೋರಾಟ ಮಾಡುತ್ತಿದ್ದಾರೆ.

೬. 'ಬಡೇಬಾಯಿ' ಗುಂಪು 'ಛೋಟಭಾಯಿ'ಗುಂಪನ್ನು ತನಗಿಂತ ಕೆಳಮಟ್ಟದ ಸ್ಥಾನದಿಂದ ಕಾಣುತ್ತದೆ

೭. ಚಪ್ಪರ್‌ಬಂದ್ ಸಮುದಾಯದಲ್ಲಿ 'ಬಡೇಭಾಯಿ' ಗುಂಪಿಗೆ ಹೋಲಿಸಿದರೆ 'ಛೋಟೆಬಾಯಿ' ಗುಂಪು ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ ಹಾಗೂ ಸರ್ಕಾರ ಕೆಲಸಗಳನ್ನು ಪಡೆದಿದ್ದಾರೆ.

೮. ಚಪ್ಪರ್‌ಬಂದ್ ಸಮುದಾಯದಲ್ಲಿ 'ಬಡೇಭಾಯಿ' ಗುಂಪಿಗೆ ಹೋಲಿಸಿದರೆ 'ಛೋಟೆಬಾಯಿ' ಗುಂಪು ಹೆಚ್ಚಾಗಿ ಇಸ್ಲಾಂ ಧರ್ಮವನ್ನು ಅನುಸರಿಸುತ್ತಿದೆ.

೯. ಚಪ್ಪರ್‌ಬಂದರು ನೆಲೆಸಿರುವ ಕೆಲಸ ಸೆಟ್ಲ್‌ಮೆಂಟ್‌ಗಳು ಕೊಳಚೆ ಪ್ರದೇಶದಂತಿವೆ. ಅಲ್ಲಿ ಕೆಲ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಕಂಡುಬಂದಿದೆ.

೧೦. ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿರುವ ಚಪ್ಪರ್‌ಬಂದ್ ಸಮುದಾಯದವರಿಗಿಂತ, ಸೆಟ್ಲ್‌ಮೆಂಟ್‌ಗಳಲ್ಲದ ಪ್ರದೇಶಗಳಲ್ಲಿ ನೆಲೆಸಿರುವ ಚಪ್ಪರ್‌ಬಂದ್ ಸಮುದಾಯದವರು ಸಾಮಾಜಿಕ ಮತ್ತು ಧಾರ್ಮಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ.

೧೧. ಚಪ್ಪರ್‌ಬಂದ್ ಸಮುದಾಯದವರು ಕೆಲಸವನ್ನಾರಿಸುತ್ತ ಈಗಲೂ ಸಹ ವಲಸೆ ಹೋಗುತ್ತಿದ್ದಾರೆ.

೧೨. ಸರ್ಕಾರ ಇವರಿಗೆ ಅನೇಕ ಯೋಜನೆಗಳನ್ನು ರೂಪಿಸಿದ್ದರೂ ಸಹ, ಅವು ಇವರಿಗೆ ಸಮರ್ಪಕವಾಗಿ ದೊರೆಯುತ್ತಿಲ್ಲ.

೧೩. ಸೆಟ್ಲ್‌ಮೆಂಟ್‌ಗಳಲ್ಲಿ ನೆಲೆಸಿರುವ ಇತರೆ ವಿಮುಕ್ತ ಬುಡಕಟ್ಟುಗಳಿಗಿಂತ ಇವರು ತುಂಬಾನೆ ಹಿಂದುಳಿದಿದ್ದಾರೆ.

೧೪. ಚಪ್ಪರ್‌ಬಂದ್ ಸಮುದಾಯದವರ ಸಾಕ್ಷರತೆಯ ಪ್ರಮಾಣ ಶೇ. ೬೨.೭ರಷ್ಟಿದೆ. ಅದರಲ್ಲಿ ಪುರುಷರ ಪ್ರಮಾಣ ಶೇ. ೩೪.೯ರಷ್ಟಿದ್ದರೆ, ಮಹಿಳೆಯರು ಕೇವಲ ಶೇ. ೨೭.೮ರಷ್ಟು ಪ್ರಮಾಣದಲ್ಲಿದ್ದು, ಪರಿಸ್ಥಿತಿ ಶೋಚನೀಯವಾಗಿದೆ.

೧೫. ಬ್ರಿಟೀಷರು ತಮಗೆ ವಸತಿ, ಕೆಲಸ, ಶಿಕ್ಷಣವಾದರು ಕೊಡುತ್ತಿದ್ದರು. ಆದರೆ ನಮ್ಮ ಸರ್ಕಾರ ಏನೂ ಕೊಡುತ್ತಿಲ್ಲ. ಒಂದು ರೀತಿಯಲ್ಲಿ ಬ್ರಿಟಿಷರ ಅವಧಿಯಲ್ಲಿಯೇ ನಾವು ಸುಖವಾಗಿದ್ದೇವು ಎಂಬ ಅಭಿಪ್ರಾಯ ಇವರಲ್ಲಿದೆ.

೧೬. ಚಪ್ಪರ್‌ಬಂದ್ ಸಮುದಾಯದಲ್ಲಿ ಸ್ವಲ್ಪ ಮಟ್ಟದಲ್ಲಿ ಶಿಕ್ಷಣದ ಬಗ್ಗೆ ಕೆಲವರಲ್ಲಿ ಕಾಳಜಿ ಕಂಡುಬರುತ್ತಿದೆ. ಹಾಗಾಗಿ ತಮ್ಮ ಮಕ್ಕಳನ್ನು ದುಡಿಯಲು ಕಳುಹಿಸದೆ ಶಾಲೆಗೆ ಕಳುಹಿಸಲು ಇಷ್ಟ ಪಡುತ್ತಿದ್ದಾರೆ.

೧೭. ಚಪ್ಪರ್‌ಬಂದ್ ಸಮುದಾಯದ ಜನಸಂಖ್ಯೆ ೩೦೪೫ ಇದೆ.

೧೮. ಚಪ್ಪರ್‌ಬಂದ್ ಸಮುದಾಯದಲ್ಲಿ ಪ್ರಸ್ತುತದಲ್ಲಿ ೨೩ ಬೆಡಗುಗಳಿವೆ. ಅವು– ಬಕ್ಕವಾಲೆ, ಗಾರೆವಾಲೆ, ಅಡ್‌ಗಾರೆವಾಲೆ, ಸೂಜಿವಾಲೆ, ಪೀರ್‌ಜಾದೆ, ಜಾದೂವಾಲೆ, ಗೋರಿವಾಲೆ, ಬಳ್ಳಾರಿವಾಲೆ, ಸತಿಬಾವಾಲೆ, ಧತೋರೆವಾಲೆ, ಕೇಡಗಿವಾಲೆ, ಟಿಟಿವಾಲೆ, ಜಬಲ್‌ಪುರಿವಾಲೆ,

ಪುಂಗಿವಾಲೆ, ಕಾರಾವಾಲೆ, ಬಿರದಿವಾಲೆ, ಗುಡುವಾಲೆ, ಮಾಲಾವಾಲೆ, ರಾವುತವಾಲೆ, ಲಂಬುವಾಲೆ, ತಿಗಳವಾಲೆ, ಮತೋಡೆವಾಲೆ, ತಿಗಡವಾಲೆ.

೧೯. ಚಪ್ಪರ್‌ಬಂದ್ ಸಮುದಾಯದಲ್ಲಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಮಹಿಳೆಯರು ತುಂಬಾನೆ ಹಿಂದುಳಿದಿದ್ದಾರೆ. ಇವರಲ್ಲಿ ಹೊರಗೆ ಹೋಗಿ ದುಡಿಯುವ ಮಹಿಳೆಯರ ಪ್ರಮಾಣ ಬೆಳವಣಿಕೆಯಷ್ಟು ಮಾತ್ರ.

೨೦. ಚಪ್ಪರ್‌ಬಂದ್ ಸಮುದಾಯದವರ ಪಾತ್ರ ರಾಜಕೀಯದಲ್ಲಿ ನಗಣ್ಯವಾಗಿರುವುದು ಕಂಡು ಬರುತ್ತದೆ.

೨೧. ಕೆಲ ಮುಸ್ಲಿಂ ಸಮುದಾಯದವರು ತಾವು ಚಪ್ಪರ್‌ಬಂದ್ ಸಮುದಾಯದವರೆಂದು ಸುಳ್ಳು ಹೇಳಿ ಜಾತಿ ಪ್ರಮಾಣ ಪತ್ರ ಪಡೆಯುತ್ತಿರುವುದು ಕಂಡುಬರುತ್ತಿದೆ. ಹಾಗಾಗಿ ಇವರಿಗೆ ಜಾತಿ ಪ್ರಮಾಣಪತ್ರ ಪಡೆಯುವಲ್ಲಿ ಸರ್ಕಾರಿ ಅಧಿಕಾರಿಗಳಿಂದ ಸಮಸ್ಯೆಯಾಗುತ್ತಿರುವುದು ಕಂಡುಬರುತ್ತಿದೆ.

೨೨. ಪ್ರಸ್ತುತದಲ್ಲಿ ಇವರು ತಮ್ಮ ಸಮುದಾಯದ ಮೂಲವನ್ನು, ಸಂಸ್ಕೃತಿಯನ್ನು, ವಿಶೇಷತೆಯನ್ನು, ಭಾಷೆಯನ್ನು ಒಟ್ಟಿನಲ್ಲಿ ತಮ್ಮಲ್ಲಿರುವ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿ ಕಾಪಾಡುವ ಪ್ರಯತ್ನವನ್ನು, ತಮ್ಮದೇ ಆದ ಸಂಘಟನೆಯ ಮೂಲಕ ಮಾಡುತ್ತಿದ್ದಾರೆ.

**ಸಲಹೆಗಳು**

೧. ದ್ವಾರಕಾನಾಥ್ ಆಯೋಗದ ವರದಿಯಲ್ಲಿ ಚಪ್ಪರ್‌ಬಂದ್ ಸಮುದಾಯಕ್ಕಾಗಿ ಸೂಚಿಸಿದ್ದ ವೀಶೇಷ ಪ್ಯಾಕೇಜ್ ಅನ್ನು ರೂಪಿಸುವ ಕುರಿತು ಸರ್ಕಾರ ಗಮನ ಹರಿಸಬೇಕು.

೨. ಚಪ್ಪರ್‌ಬಂದ್ ಸಮುದಾಯ ಪರಿಶಿಷ್ಟ ಬುಡಕಟ್ಟು (ಎಸ್‌ಟಿ) ಹೊಂದಿರಬೇಕಾದ ಲಕ್ಷಣಗಳನ್ನು ಹೊಂದಿದೆ. ಹಾಗಾಗಿ ಈ ವಿಮುಕ್ತ ಬುಡಕಟ್ಟನ್ನು ಪರಿಶಿಷ್ಟ ಬುಡಕಟ್ಟು ಪಟ್ಟಿಯಲ್ಲಿ ಸೇರಿಸಲು ಸರ್ಕಾರ ಕ್ರಮ ಕೈಗೊಳ್ಳಬೇಕು.

೩. ಚಪ್ಪರ್‌ಬಂದ್ ಸಮುದಾಯದ ಭಾಷೆ ನಶಿಸುವ ಹಂತದಲ್ಲಿದೆ, ಸರ್ಕಾರ ಮತ್ತು ಸಮುದಾಯ ಅದನ್ನು ಉಳಿಸುವ ಕುರಿತು ಕ್ರಮ ಕೈಗೊಳ್ಳಬೇಕು.

೪. ಇವರು ಅಪರಾಧಿ ಬುಡಕಟ್ಟು ಹಿನ್ನೆಲೆಯನ್ನು ಹೊಂದಿರುವ ಕಾರಣ ಪೋಲಿಸರು, ಅಧಿಕಾರಿಗಳು, ಜನ ಸಾಮಾನ್ಯರು ಇವರ ಬಗ್ಗೆ ತಾತ್ಸಾರ ಮನೋಭಾವನೆಯನ್ನು ಹೊಂದಿದ್ದಾರೆ ಹಾಗೂ ಕೆಲವು ವೇಳೆ ಕಿರುಕುಳವನ್ನು ಸಹ ಕೋಡುತ್ತಾರೆ. ಈ ರೀತಿಯ ಅವಮಾನ ಮತ್ತು ಕಿರುಕುಳದಿಂದ ಈ ಸಮುದಾಯವನ್ನು ಹೊರ ತರಲು ಸರ್ಕಾರ ಮತ್ತು ಸಾಮಾನ್ಯ ಸಮುದಾಯಗಳು ಪ್ರಯತ್ನಿಸಬೇಕು.

೫. ಚಪ್ಪರ್‌ಬಂದ್ ಸಮುದಾಯಕ್ಕಾಗಿ ವಸತಿ, ಶಿಕ್ಷಣ, ಆರೋಗ್ಯ, ಉದ್ಯೋಗಕ್ಕೆ ಸಂಬಂಧಿಸಿದಂತೆ ಸರ್ಕಾರ ಹೊಸ ಹೊಸ ಯೋಜನೆಗಳನ್ನು ರೂಪಿಸಿ, ಅವುಗಳು ಸಮರ್ಪಕವಾಗಿ ಜಾರಿಯಾಗುವಂತೆ ನೋಡಿಕೊಳ್ಳಬೇಕು.

೬. ಚಪ್ಪರ್‌ಬಂದ್ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗಾಗಿ ಸರ್ಕಾರ ವಿಶೇಷ ಯೋಜನೆಯನ್ನು ಜಾರಿಗೊಳಿಸಬೇಕು.

೭. ಚಪ್ಪರ್‌ಬಂದರು ನೆಲೆಸಿರುವ ಸೆಟ್ಲ್‌ಮೆಂಟ್‌ಗಳು ಮತ್ತು ಸೆಟ್ಲ್‌ಮೆಂಟ್ ಅಲ್ಲದ ಪ್ರದೇಶಗಳ ನೈರ್ಮಲ್ಯದ ಬಗ್ಗೆ ಇವರಲ್ಲಿ ಕಾಳಜಿ ಮೂಡಿಸಿವ ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಳ್ಳಬೇಕು, ಇದಕ್ಕೆ ಸಹಾಯಕವಾಗಿ ಎನ್‌ಜಿಓ ಗಳನ್ನು ಬಳಸಿಕೊಳ್ಳಬೇಕು. ಹಾಗೂ ಅಲ್ಲಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಬೇಕು.

೮. ಚಪ್ಪರ್‌ಬಂದ್ ಸಮುದಾಯದವರು ಸ್ವಂತ ಉದ್ಯೋಗಗಳನ್ನು, ವ್ಯಾಪಾರಗಳನ್ನು ಮಾಡು ತ್ತಿದ್ದಾರೆ. ಅದಕ್ಕಾಗಿ ಸರ್ಕಾರ ಕಡಿಮೆ ಬಡ್ಡಿ ದರದಲ್ಲಿ ಅವರಿಗೆ ವಿಶೇಷ ಸಾಲ ಸೌಲಭ್ಯ ಗಳನ್ನು ರೂಪಿಸಬೇಕು.

೯. ಚಪ್ಪರ್‌ಬಂದ್ ಸಮುದಾಯಕ್ಕಾಗಿಯೇ ವಿಶೇಷ ಶೈಕ್ಷಣಿಕ ಯೋಜನೆಗಳನ್ನು ರೂಪಿಸಬೇಕು. ಇದರಡಿಯಲ್ಲಿ ಈ ಸಮುದಾಯದ ಮಕ್ಕಳಿಗೆ ಉಚಿತ ಶಿಕ್ಷಣ, ವಿದ್ಯಾರ್ಥಿವೇತನ, ಉಚಿತ ವಿದ್ಯಾರ್ಥಿನಿಲಯಗಳ ವ್ಯವಸ್ಥೆ, ಉಚಿತವಾಗಿ ಉನ್ನತ ಶಿಕ್ಷಣ, ಶೈಕ್ಷಣಿಕ ಮೀಸಲಾತಿ, ಹೆಣ್ಣು ಮಕ್ಕಳನ್ನು ಶಿಕ್ಷಣ ಕೊಡಿಸಲು ಪ್ರೋತ್ಸಾಹಿಸಿ ಕೆಲ ಕಾರ್ಯಕ್ರಮಗಳನ್ನು ಮತ್ತು ಉನ್ನತ ಶಿಕ್ಷಣಕ್ಕಾಗಿ ಬಡ್ಡಿದರಹಿತ ಸಾಲ ಸೌಲಭ್ಯ ಸರ್ಕಾರ ರೂಪಿಸಿ, ಅದು ಸಮರ್ಪಕವಾಗಿ ಜಾರಿಯಾಗುವಂತೆ ನೋಡಿಕೊಳ್ಳಬೇಕು.

೧೦. ಚಪ್ಪರ್‌ಬಂದ್ ಸಮುದಾಯದವರ ಹೆಸರು ಹೇಳಿ ಬೇರೆ ಯಾರೂ ಸಹ ಇವರಿಗಿರುವ ಸವಲತ್ತುಗಳನ್ನು ಪಡೆಯದಂತೆ ತಡೆಯಲು ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳಬೇಕು. ಜೊತೆಗೆ ಇವರು ಸುಲಭವಾಗಿ ಜಾತಿ ಪ್ರಮಾಣಪತ್ರ ಪಡೆಯುವ ಹಾಗೆ ಸರ್ಕಾರ ಕ್ರಮಕೈಗೊಳ್ಳಬೇಕು.

೧೧. ಇವರ ಸಂಸ್ಕೃತಿ, ಆಚಾರ-ವಿಚಾರ, ಸಂಪ್ರದಾಯಗಳನ್ನು ಉಳಿಸಿ ಬೆಳೆಸುವ ಕುರಿತು ಸರ್ಕಾರ ಮತ್ತು ಸಮುದಾಯ ಕ್ರಮ ಕೈಗೊಳ್ಳಬೇಕು.

೧೨. ಅಶಿಕ್ಷಿತ ಮಹಿಳೆಯರಿಗೆ ಮತ್ತು ಪುರುಷರಿಗಾಗಿ ಪ್ರತ್ಯೇಕವಾದ ವೃತ್ತಿ ತರಬೇತಿ ನೀಡುವ ಕೇಂದ್ರಗಳನ್ನು ಸ್ಥಾಪಿಸಿ, ಅದರಡಿಯಲ್ಲಿ ತರಬೇತಿ ನೀಡಿ, ಅವರು ಕೆಲಸ ಪ್ರಾರಂಭಿಸಲು ಅವರಿಗೆ ಸಬ್ಸಿಡಿ ರೂಪದಲ್ಲಿ ಸಾಲದ ವ್ಯವಸ್ಥೆ ಮಾಡಬೇಕು.

೧೩. ಮಹಿಳಾ ಮತ್ತು ಮಕ್ಕಳಿಗಾಗಿ ವಿಶೇಷ ಘಟಕ ರೂಪಿಸಿ, ಅದರ ಮೂಲಕ ಅವರ ಆರೋಗ್ಯದ ಬಗ್ಗೆ ಗಮನ ಹರಿಸಬೇಕು.

೧೪. ವೃದ್ಧರಿಗೆ, ವಿಧವೆಯರಿಗೆ, ಅಂಗವಿಕಲರಿಗೆ ಸರಿಯಾಗಿ ಮಾಸಾಶನ ದೊರೆಯುವಂತೆ ಮಾಡಬೇಕು.

೧೫. ಸೆಟ್ಲ್‌ಮೆಂಟ್‌ಗಳಲ್ಲಿ ಇವರಿಗಾಗಿಯೇ ಸರ್ಕಾರಿ ಶಾಲೆಗಳನ್ನು, ಆಟದ ಮೈದಾನವನ್ನು ರೂಪಿಸಬೇಕು. ಜೊತೆಗೆ ಕ್ರೀಡೆಗಳು ಆಡುವಂತೆ ಇವರನ್ನು ಪ್ರೋತ್ಸಾಹಿಸಬೇಕು.

೧೬. ಸೆಟ್ಲ್‌ಮೆಂಟ್‌ಗಳಲ್ಲಿ ಸರ್ಕಾರಿ ಆಸ್ಪತ್ರೆಗಳನ್ನು ನಿರ್ಮಿಸಬೇಕು. ಜೊತೆಗೆ ವಿಮುಕ್ತ ಬುಡಕಟ್ಟುಗಳಿಗಾಗಿ ಅಲ್ಲಿ ಆರೋಗ್ಯಕ್ಕೆ ಸಂಬಂಧಿಸಿದಂತೆ ವಿಶೇಷ ಸವಲತ್ತುಗಳನ್ನು ನೀಡಬೇಕು.

೧೭. ಈ ಸಮುದಾಯದ ಶಿಕ್ಷಿತ ನಿರುದ್ಯೋಗಿಗಳಿಗೆ ಎಲೆಕ್ಟ್ರಿಕಲ್, ಎಲೆಕ್ಟ್ರಾನಿಕ್, ಆಟೋ ಮೋಬೈಲ್ ಇತ್ಯಾದಿಗಳಿಗೆ ಸಂಬಂಧಿಸಿದ ವ್ಯಾಪಾರ ಆರಂಭಿಸಲು ಹಣಕಾಸಿನ ನೆರವು ನೀಡುವುದು.

೧೮. ಸರ್ಕಾರದ ಮೂಲಕ ಇವರಿಗೆ ವಸತಿ ಸೌಲಭ್ಯವನ್ನು ಒದಗಿಸಬೇಕು.

೧೯. ತಾವು ಕೂಡ ಈ ಸಮಾಜದ ದೇಶದ ಸಾಮಾನ್ಯ ನಾಗರೀಕರಂತೆಯೇ ಎಂಬ ಭಾವನೆಯನ್ನು ಇವರಲ್ಲಿ ಮೂಡಿಸಲು ನಾವು-ನೀವೆಲ್ಲರೂ ಪ್ರಯತ್ನಿಸಬೇಕು.

೨೦. ಕೃಷಿ ಮಾಡಬಯಸುವವರಿಗೆ ಕೃಷಿ ಭೂಮಿಯನ್ನು ಒದಗಿಸಿ, ಕೃಷಿ ಸಾಲವನ್ನು ನೀಡಬೇಕು.

೨೧. ಈ ಸಮುದಾಯದ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡುವ ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಳ್ಳಬೇಕು.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಈ ರೀತಿಯಾಗಿ ಕರ್ನಾಟಕದ ಕೆಲ ಕಡೆ ಮಾತ್ರ ಸೀಮಿತವಾಗಿ ನೆಲೆಸಿರುವ ಚಪ್ಪರ್‌ಬಂದ್ ಸಮುದಾಯ ಕುರಿತು ಅಧ್ಯಯನ ಮಾಡುವವರಿಗೆ ಪ್ರಸ್ತುತ ಅಧ್ಯಯನವು ಮಾರ್ಗಸೂಚಿಯಾಗಬಹುದು. ಒಟ್ಟಿನಲ್ಲಿ ಈ ಅಧ್ಯಯನವು ಈ ಸಮುದಾಯದ ವಿವಿಧ ಅಂಶಗಳ ಕುರಿತು ಮಾಹಿತಿ ನೀಡಬಲ್ಲ ಒಂದು ಪ್ರಮಾಣಿಕ ಪ್ರಯತ್ನವಾಗಿದೆ. ಅದರಾಚೆಗೆ ನನ್ನ ಗಮನಕ್ಕೆ ಬಾರದೇ ಇರುವ ಇನ್ನೂ ಅನೇಕ ವಿಷಯಗಳಿರಬಹುದು, ಅನೇಕ ಸಂಗತಿಗಳು ಉಳಿದುಕೊಂಡಿರಲೂಬಹುದು. ಅದನ್ನು ಕರಿತು ಆಸಕ್ತಿ ಇರುವವರು ಹೆಚ್ಚಿನ ಅಧ್ಯಯನಗಳನ್ನು ಮಾಡಬಹುದಾಗಿದೆ.

# ಅನುಬಂಧಗಳು

ಮಾಹಿತಿದಾರರ ಪಟ್ಟಿ (ವಕ್ತೃ ಮಾಹಿತಿ)

ಅಂಕಿ ಅಂಶಗಳು

ಪ್ರಶ್ನಾವಳಿ

ವರದಿಗಳು

ಚಪ್ಪರ್‌ಬಂದ್ ಸಮುದಾಯದ ವೃತ್ತಿ ಪದಕೋಶ

ಚಪ್ಪರ್‌ಬಂದ್ ಭಾಷೆಯ ಪದಕೋಶ

ಪರಾಮರ್ಶನ ಗ್ರಂಥಗಳು

ಛಾಯಾಚಿತ್ರಗಳು

## ಮಾಹಿತಿದಾರರ ಪಟ್ಟಿ (ವಕ್ತೃ ವಿವರ)

| ಕ್ರಸಂ. | ಹೆಸರು | ವಯಸ್ಸು | ಲಿಂಗ | ವೃತ್ತಿ | ವಿಳಾಸ |
|---|---|---|---|---|---|
| ೧ | ಆರ್. ಐ. ಚಪ್ಪರ್‌ಬಂದ್ | ೫೦ | ಗಂ | ಬಡಗಿ | ಸೆಟ್ಲ್‌ಮೆಂಟ್, ಗದಗ |
| ೨ | ಖಾಜಾಬಿ | ೫೫ | ಹೆ | ಗೃಹಿಣಿ | ಸೆಟ್ಲ್‌ಮೆಂಟ್, ಗದಗ |
| ೩ | ಹುಸೇನ್ ಆರ್ ಚಪ್ಪರ್‌ಬಂದ್ | ೪೫ | ಗಂ | ಸರ್ಕಾರಿ ನೌಕರ | ಸೆಟ್ಲ್‌ಮೆಂಟ್, ಗದಗ |
| ೪ | ಆಸಿಯಾ ಚಪ್ಪರ್‌ಬಂದ್ | ೪೫ | ಹೆ | ಗೃಹಿಣಿ | ಸೆಟ್ಲ್‌ಮೆಂಟ್, ಗದಗ |
| ೫ | ಬಾನು ಬಿ | ೩೦ | ಹೆ | ಗೃಹಿಣಿ | ಸೆಟ್ಲ್‌ಮೆಂಟ್, ಗದಗ |
| ೬ | ಹಾಜಿ ಸಿಂದಗಿ ಚಾಚಾ | ೯೩ | ಗಂ | ನಿವೃತ್ತ ಸ. ನೌಕರ | ಸೆಟ್ಲ್‌ಮೆಂಟ್, ಗದಗ |
| ೭ | ಸುಲ್ತಾನ್ ಉ. ಸಿಂದಗಿ | ೩೮ | ಹೆ | ಕೂಲಿ | ಸೆಟ್ಲ್‌ಮೆಂಟ್, ಗದಗ |
| ೮ | ದುಲೇಸಾಬ್ ಎಂ. ಚಪ್ಪರ್‌ಬಂದ್ | ೬೫ | ಗಂ | ಗೌಂಡಿ ಕೆಲಸ | ಸೆಟ್ಲ್‌ಮೆಂಟ್, ಗದಗ |
| ೯ | ರಸೂಲ್ ಬಿ ಬಿಜಾಪುರ್ | ೬೭ | ಹೆ | ಕೂಲಿ | ಸೆಟ್ಲ್‌ಮೆಂಟ್, ಗದಗ |
| ೧೦ | ಬಾಷಾ ರಾಜೇಸಾಬ್ ಬಾಗೇವಾಡಿ | ೨೪ | ಗಂ | ಸ ನೌಕರ | ಸೆಟ್ಲ್‌ಮೆಂಟ್, ಗದಗ |
| ೧೧ | ಅನ್ವರ್ ಹುಸೇನ್ ಹುಲ್ಲೂರು | ೩೬ | ಗಂ | ಡ್ರೈವರ್ | ಸೆಟ್ಲ್‌ಮೆಂಟ್, ಗದಗ |
| ೧೨ | ಗೌಸ್ | ೩೫ | ಗಂ | ಸ. ನೌಕರ | ಸೆಟ್ಲ್‌ಮೆಂಟ್, ಗದಗ |

| ಕ್ರ.ಸಂ. | ಹೆಸರು | ವಯಸ್ಸು | ಲಿಂಗ | ವೃತ್ತಿ | ವಿಳಾಸ |
|---|---|---|---|---|---|
| ೧೩ | ಇಮಾಂ ಸಾಬ್ ಫ. ವಡ್ಡೋಡ್ಡಿ | ೫೨ | ಗಂ | ಕಾರ್ಪೆಂಟರ್ | ಸೆಟ್ಲ್‌ಮೆಂಟ್, ಗದಗ |
| ೧೪ | ಬಿ. ಬಾಬು | ೫೦ | ಗಂ | ಜರ್ನಲಿಸ್ಟ್ | ಮುಂಡರಗಿ |
| ೧೫ | ಬಾಬಾ ಜಾನ್ ಚಪ್ಪರ್‌ಬಂದ್ | ೭೦ | ಗಂ | ಗಾರೆ ಕೆಲಸ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೧೬ | ಎಂ. ಚಪ್ಪರ್‌ಬಂದ್ | ೫೦ | ಗಂ | ಕೂಲಿ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೧೭ | ವಜೀರ್ ಸಾಬ್ ಕೊಡಗನೂರು | ೫೫ | ಗಂ | ಬಡಗಿ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೧೮ | ಫಾತೀಮಾ ಬಿ | ೬೦ | ಹೆ | ಗೃಹಿಣಿ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೧೯ | ಮಹಮದ್ ಸಾಬ್ ಬಾಬಾ ಸಾಬ್ ಚಪ್ಪರ್‌ಬಂದ್ | | ಗಂ | | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೨೦ | ಹುಸೇನ್ ಬಿ ಚಪ್ಪರ್‌ಬಂದ್ | ೩೮ | ಗಂ | ಕೂಲಿ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೨೧ | ಚಾಂದ್ ಸಾಬ್ ವ. ಕೊಡಗನೂರ್ | ೩೫ | ಗಂ | ಸಿವಿಲ್ ಇಂಜನಿಯರ್ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೨೨ | ಬಿಬಿ ಜಾನ್ ಚಪ್ಪರ್‌ಬಂದ್ | ೪೦ | ಹೆ | ಕೂಲಿ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೨೩ | ಗೌಸ್ ಹೆಬ್ಬಾಳ್ | ೩೮ | ಗಂ | ಗೌಂಡಿ ಕೆಲಸ | ಸೆಟ್ಲ್‌ಮೆಂಟ್, ಹುಬ್ಬಳ್ಳಿ |
| ೨೪ | ಮಹಮ್ಮದ್ ಅಲಿ | ೫೦ | ಗಂ | ಸ. ನೌಕರ | ಜನತ್ ನಗರ, ಧಾರವಾಡ |

| ಕ್ರ.ಸಂ. | ಹೆಸರು | ವಯಸ್ಸು | ಲಿಂಗ | ವೃತ್ತಿ | ವಿಳಾಸ |
|---|---|---|---|---|---|
| ೨೫ | ಮಹಮ್ಮದ್ ಶರೀಫ್ ಕಿರ್‌ಶಾಳ್ | ೨೩ | ಗಂ | ಗೌಂಡಿ ಕೆಲಸ | ಜನತ್ ನಗರ, ಧಾರವಾಡ |
| ೨೬ | ದಿ. ಮಹಬೂಬ್ ಅಲಿ ಸಾಬ್ | ೬೫ | ಗಂ | ಕೂಲಿ | ಜನತ್ ನಗರ, ಧಾರವಾಡ |
| ೨೭ | ಉಮರ್ ಎಂ ಬಿಜಾಪುರ್ | ೫೫ | ಗಂ | ವ್ಯಾಪಾರ | ಜನತ್ ನಗರ, ಧಾರವಾಡ |
| ೨೮ | ಮಹಬೂಬ್ ಇಮಾಂ ಸಾಬ್ ಬಳ್ಳಾರಿ | ೪೧ | ಗಂ | ಕೂಲಿ | ಜನತ್ ನಗರ, ಧಾರವಾಡ |
| ೨೯ | ಇಲಿಯಾಸ್ ಅಹಮದ್ | ೩೭ | ಗಂ | ಸೆಂಟ್ರಿಂಗ್ | ಜನತ್ ನಗರ, ಧಾರವಾಡ |
| ೩೦ | ಇಮಾಂ ಫಕೀರ್ ಸಾಬ್ | ೩೫ | ಗಂ | ಗೌಂಡಿ ಕೆಲಸ | ಜನತ್ ನಗರ, ಧಾರವಾಡ |
| ೩೧ | ಆಬೀದ್ ಅಲಿ | ೩೫ | ಗಂ | ಸ. ನೌಕರ | ಜನತ್ ನಗರ, ಧಾರವಾಡ |
| ೩೨ | ಫಾತೀಮಾ | ೩೦ | ಹೆ | ಕೂಲಿ | ಜನತ್ ನಗರ, ಧಾರವಾಡ |
| ೩೩ | ಬಿಸ್ಮಿಲ್ಲಾ ಬಿ | ೬೦ | ಹೆ | ಕೂಲಿ | ಜನತ್, ನಗರ ಧಾರವಾಡ |
| ೩೪ | ಸಲೀಂ ಪೀರ್‌ಜಾದೆ | ೫೦ | ಗಂ | ವ್ಯಾಪಾರ | ಸೆಟ್ಲ್‌ಮೆಂಟ್, ವಿಜಯಪುರ |
| ೩೫ | ನಕೀಬ್ ಸಾಬ್ | ೭೦ | ಗಂ | ನಿ. ಸ. ನೌಕರ | ಸೆಟ್ಲ್‌ಮೆಂಟ್, ವಿಜಯಪುರ |
| ೩೬ | ಹಾಜಿಲಾ | ೭೫ | ಗಂ | ಕೂಲಿ | ಸೆಟ್ಲ್‌ಮೆಂಟ್, ವಿಜಯಪುರ |
| ೩೭ | ಮಹಬೂಬ್ ಬಿ | ೮೦ | ಹೆ | ಗೃಹಿಣಿ | ಸೆಟ್ಲ್‌ಮೆಂಟ್, ವಿಜಯಪುರ |

| ಕ್ರಸಂ. | ಹೆಸರು | ವಯಸ್ಸು | ಲಿಂಗ | ವೃತ್ತಿ | ವಿಳಾಸ |
|---|---|---|---|---|---|
| ೩೮ | ರಾಜಾ ಸಾಹೇಬ್ | ೫೫ | ಗಂ | ಗೃಹಿಣಿ | ಸೆಟ್ಲ್‌ಮೆಂಟ್, ವಿಜಯಪುರ |
| ೩೯ | ಮಹಮದ್ ಹುಸೇನ್ | ೫೦ | ಗಂ | ವಕೀಲ | ಮುದ್ದೇಬಿಹಾಳ್ |
| ೪೦ | ಇಮಾಂ ಸಾ. ಮ.ಅಲಿ ಬಳಬಟ್ಟಿ | ೬೫ | ಗಂ | ನಿ. ಸ. ನೌಕರ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೧ | ಹುಸೇನ್ ಸಾಬ್ ಚಪ್ಪರ್‌ಬಂದ್ | ೫೨ | ಗಂ | ಸ. ನೌಕರ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೨ | ಹುಸೇನ್ ಸಾಬ್ ನಸರುದ್ದೀನ್ ನಾಗೂರ್ | ೬೫ | ಗಂ | ನಿ. ಸ. ನೌಕರ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೩ | ಹೈದರ್ ಮಾ ಚಾ. ಮುದ್ದಾಪರ | ೫೫ | ಹೆ | ಕೂಲಿ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೪ | ಫಾತೀಮಾ ಚಾ. ಬೂದಿಹಾಳ್ | ೫೦ | ಹೆ | ಕೂಲಿ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೫ | ಮಹಬೂಬ್ ಬಾ. ವಾಲಿಕಾರ | ೫೦ | ಗಂ | ಕೃಷಿ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೬ | ಸಲೀಂ ಬಾಬುಲಾಲ್ ಹಂದಗಲ್ | ೩೨ | ಗಂ | ಗ್ಯಾರೇಜ್ ಕೆಲಸ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೭ | ಸೈಫುದೀನ್ ಕಾ. ಮುದ್ದಾಪುರ | ೪೫ | ಗಂ | ಕೂಲಿ | ಸೆಟ್ಲ್‌ಮೆಂಟ್, ಬಾಗಲಕೋಟೆ |
| ೪೮ | ಖಾಜಾವಲಿ | ೬೦ | ಗಂ | ಕೂಲಿ | ಸರ್ ಮಿರ್ಜಾ ಇಸ್ಮಾಯಿಲ್ ನಗರ, ದಾವಣಗೆರೆ |
| ೪೯ | ದಸ್ತಗೀರ್ | ೩೫ | ಗಂ | ಕೂಲಿ | ಸರ್ ಮಿರ್ಜಾ ಇಸ್ಮಾಯಿಲ್ ನಗರ, ದಾವಣಗೆರೆ |
| ೫೦ | ಆರ್.ಹೆಚ್. ಚಪ್ಪರ್‌ಬಂದ್ | ೩೫ | ಗಂ | ಸ. ನೌಕರ | ಬೆಂಗಳೂರು |

ಅಂಕಿ ಅಂಶಗಳು ೧. ಸಮೀಕ್ಷೆಗೊಳಪಟ್ಟ ಚಪ್ಪರ್‌ಬಂದ್ ಸಮುದಾಯದ ಜಿಲ್ಲಾವಾರು, ತಾಲೂಕುವಾರು, ನೆಲೆಗಳವಾರು, ಕುಟುಂಬವಾರು ಲಿಂಗವಾರು ಜನಸಂಖ್ಯೆ ಹಾಗೂ ಲಿಂಗವಾರು ವಯೋಗುಂಪು

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | | ವಯೋಗುಂಪು | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | ೦-೫ | | | ೬-೧೮ | | | ೧೯-೪೦ | | | ೪೧-೬೦ | | | ೬೧ರ ಮೇಲ್ಪಟ್ಟ | | |
| | | | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ಗದಗ | ಗದಗ | ೨೧೫ | ೩೯೪ | ೩೮೭ | ೭೮೧ | ೨೯ | ೩೯ | ೬೮ | ೯೭ | ೭೮ | ೧೭೫ | ೧೭೧ | ೧೭೩ | ೩೪೪ | ೭೦ | ೭೦ | ೧೪೦ | ೨೬ | ೨೮ | ೫೪ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೨೨ | ೨೧ | ೪೩ | ೧ | ೦ | ೧ | ೫ | ೩ | ೮ | ೮ | ೧೦ | ೧೮ | ೭ | ೮ | ೧೫ | ೧ | ೦ | ೧ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | ೧೦೯ | ೧೧೬ | ೨೨೫ | ೧೦ | ೧೧ | ೨೧ | ೩೬ | ೪೪ | ೮೦ | ೪೩ | ೫೨ | ೯೫ | ೨೦ | ೯ | ೨೯ | ೦ | ೦ | ೦ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೯೨ | ೮೫ | ೧೭೭ | ೭ | ೮ | ೧೫ | ೨೩ | ೧೫ | ೩೮ | ೪೨ | ೪೭ | ೮೯ | ೧೪ | ೧೩ | ೨೭ | ೭ | ೨ | ೯ |
| | | | | ೮೯ | ೨೦೧ | ೨೦೧ | ೪೦೨ | ೧೭ | ೧೯ | ೩೬ | ೫೯ | ೫೯ | ೧೧೮ | ೮೫ | ೯೯ | ೧೮೪ | ೩೪ | ೨೨ | ೫೬ | ೭ | ೨ | ೯ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೧೨೬ | ೧೫೩ | ೨೭೯ | ೧೨ | ೨೧ | ೩೩ | ೨೭ | ೨೮ | ೫೫ | ೫೬ | ೭೭ | ೧೩೩ | ೨೫ | ೧೭ | ೪೨ | ೭ | ೯ | ೧೬ |
| | | ಹುನಗುಂದ | ಹುನಗುಂದ | ೭ | ೧೨ | ೨೪ | ೩೬ | ೧ | ೦ | ೧ | ೧ | ೧೧ | ೧೨ | ೫ | ೮ | ೧೩ | ೫ | ೫ | ೧೦ | ೦ | ೦ | ೦ |
| | | | ಬಾದಾಮಿ | ೩ | ೧೦ | ೫ | ೧೫ | ೦ | ೦ | ೦ | ೫ | ೧ | ೬ | ೩ | ೩ | ೬ | ೨ | ೧ | ೩ | ೦ | ೦ | ೦ |
| | | | | ೬೩ | ೧೪೮ | ೧೮೨ | ೩೩೦ | ೧೩ | ೨೧ | ೩೪ | ೩೩ | ೪೦ | ೭೩ | ೬೪ | ೮೮ | ೧೫೨ | ೩೨ | ೨೩ | ೫೫ | ೭ | ೯ | ೧೬ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೮೯ | ೬೯ | ೧೫೮ | ೫ | ೭ | ೧೨ | ೨೬ | ೧೯ | ೪೫ | ೩೮ | ೨೬ | ೬೪ | ೧೫ | ೧೫ | ೩೦ | ೫ | ೨ | ೭ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೯೨ | ೯೧ | ೧೮೩ | ೦ | ೪ | ೪ | ೨೪ | ೨೩ | ೪೭ | ೩೭ | ೪೨ | ೭೯ | ೨೫ | ೧೫ | ೪೦ | ೬ | ೭ | ೧೩ |
| | | ವಿಜಯಪುರ | ವಿಜಯಪುರ | ೨೦೧ | ೬೧೧ | ೫೩೧ | ೧೧೪೨ | ೭೦ | ೫೫ | ೧೨೫ | ೧೭೫ | ೧೪೩ | ೩೧೮ | ೨೪೮ | ೨೪೦ | ೪೮೮ | ೮೮ | ೭೪ | ೧೬೨ | ೩೦ | ೧೯ | ೪೯ |
| | | | | ೨೬೭ | ೭೯೨ | ೬೯೧ | ೧೪೮೩ | ೭೫ | ೬೬ | ೧೪೧ | ೨೨೫ | ೧೮೫ | ೪೧೦ | ೩೨೩ | ೩೦೮ | ೬೩೧ | ೧೨೮ | ೧೦೪ | ೨೩೨ | ೪೧ | ೨೮ | ೬೯ |
| | | | ಒಟ್ಟು | ೬೪೪ | ೧೫೫೭ | ೧೪೮೨ | ೩೦೩೯ | ೧೩೫ | ೧೪೫ | ೨೮೦ | ೪೧೯ | ೩೬೫ | ೭೮೪ | ೬೫೧ | ೬೭೮ | ೧೩೨೯ | ೨೭೧ | ೨೨೭ | ೪೯೮ | ೮೨ | ೬೭ | ೧೪೯ |

ಅಂಕಿ ಅಂಶಗಳು ೨. ಸಮೀಕ್ಷೆಗೊಳಪಟ್ಟ ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಶೈಕ್ಷಣಿಕ ಹಂತಗಳು

| ಕ್ರ. ಸಂ. | ತಾಲೂಕುಗಳು | ನೆಲೆಗಳು | ಕುಟುಂಬ ಗಳು | ಶೈಕ್ಷಣಿಕ ಮಟ್ಟ | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | ಪ್ರಾಥಮಿಕ | | | ಮಾಧ್ಯಮಿಕ | | | ಪ್ರೌಢಶಾಲೆ | | | ಡಿಪ್ಲೋಮಾ | | | ಪದವಿಪೂರ್ವ | | | ಪದವಿ | | | ಸ್ನಾತಕೋತ್ತರ | | | ಇತರೆ | | |
| | | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧ | ಗದಗ | ಗದಗ | ೨೧೫ | ೧೧೧ | ೯೦ | ೨೦೧ | ೫೧ | ೫೯ | ೧೧೦ | ೯೬ | ೭೨ | ೧೬೮ | ೧೬ | ೧ | ೧೭ | ೧೫ | ೧೧ | ೨೬ | ೪ | ೩ | ೭ | ೬ | ೯ | ೧೫ | ೦ | ೦ | ೦ |
| ೨ | ದಾವಣಗೆರೆ | ದಾವಣಗೆರೆ | ೧೦ | ೪ | ೫ | ೯ | ೪ | ೪ | ೮ | ೫ | ೨ | ೭ | ೦ | ೦ | ೦ | ೩ | ೧ | ೪ | ೦ | ೦ | ೦ | ೦ | ೨ | ೨ | ೦ | ೦ | ೦ |
| ೩ | ಧಾರವಾಡ | ಧಾರವಾಡ | ೪೮ | ೨೬ | ೪೨ | ೬೮ | ೧೭ | ೧೪ | ೩೧ | ೨೪ | ೨೧ | ೪೫ | ೧ | ೦ | ೧ | ೯ | ೬ | ೧೫ | ೨ | ೧ | ೩ | ೦ | ೦ | ೦ | ೦ | ೦ | ೦ |
| | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೧೫ | ೧೩ | ೨೮ | ೧೪ | ೨೨ | ೩೬ | ೨೭ | ೧೩ | ೪೦ | ೯ | ೧ | ೧೦ | ೧ | ೨ | ೩ | ೩ | ೦ | ೩ | ೦ | ೦ | ೦ | ೦ | ೦ | ೦ |
| | | | ೮೯ | ೪೧ | ೫೫ | ೯೬ | ೩೧ | ೩೬ | ೬೭ | ೫೧ | ೩೪ | ೮೫ | ೧೦ | ೧ | ೧೧ | ೧೦ | ೮ | ೧೮ | ೫ | ೧ | ೬ | ೦ | ೦ | ೦ | ೦ | ೦ | ೦ |
| ೪ | ಬಾಗಲಕೋಟೆ | ಬಾಗಲಕೋಟೆ | ೫೩ | ೧೫ | ೨೦ | ೩೫ | ೧೨ | ೨೪ | ೩೬ | ೪೪ | ೩೨ | ೭೬ | ೯ | ೧ | ೧೦ | ೮ | ೧೫ | ೨೩ | ೧೦ | ೪ | ೧೪ | ೨ | ೩ | ೫ | ೦ | ೦ | ೦ |
| | ಹುನಗುಂದ | ಹುನಗುಂದ | ೭ | ೧ | ೪ | ೫ | ೦ | ೩ | ೩ | ೪ | ೯ | ೧೩ | ೧ | ೧ | ೨ | ೧ | ೧ | ೨ | ೧ | ೧ | ೨ | ೧ | ೦ | ೧ | ೦ | ೦ | ೦ |
| | | ಬಾದಾಮಿ | ೩ | ೪ | ೦ | ೪ | ೧ | ೦ | ೧ | ೨ | ೨ | ೪ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| | | | ೬೩ | ೨೦ | ೨೪ | ೪೪ | ೧೩ | ೨೭ | ೪೦ | ೫೦ | ೪೩ | ೯೩ | ೧೦ | ೨ | ೧೨ | ೯ | ೧೬ | ೨೫ | ೧೧ | ೫ | ೧೬ | ೩ | ೩ | ೬ | ೦ | ೦ | ೦ |
| ೫ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೧೯ | ೮ | ೨೭ | ೧೩ | ೬ | ೧೯ | ೧೫ | ೧೨ | ೨೭ | ೦ | ೧ | ೧ | ೮ | ೧ | ೯ | ೧ | ೧ | ೨ | ೨ | ೧ | ೩ | ೦ | ೦ | ೦ |
| | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೮ | ೯ | ೧೭ | ೫ | ೯ | ೧೪ | ೧೫ | ೧೪ | ೨೯ | ೨ | ೦ | ೨ | ೧೧ | ೧೦ | ೨೧ | ೮ | ೨ | ೧೦ | ೪ | ೩ | ೭ | ೦ | ೦ | ೦ |
| | ವಿಜಯಪುರ | ವಿಜಯಪುರ | ೨೦೧ | ೧೩೮ | ೧೦೦ | ೨೩೮ | ೮೮ | ೬೪ | ೧೫೨ | ೧೧೦ | ೮೨ | ೧೯೨ | ೩ | ೦ | ೩ | ೧೭ | ೧೦ | ೨೭ | ೩ | ೧ | ೪ | ೭ | ೩ | ೧೦ | ೦ | ೦ | ೦ |
| | | | ೨೬೭ | ೧೬೫ | ೧೧೭ | ೨೮೨ | ೧೦೬ | ೭೯ | ೧೮೫ | ೧೪೦ | ೧೦೮ | ೨೪೮ | ೫ | ೧ | ೬ | ೩೬ | ೨೧ | ೫೭ | ೧೨ | ೪ | ೧೬ | ೧೩ | ೭ | ೨೦ | ೦ | ೦ | ೦ |
| | | ಒಟ್ಟು | ೬೪೪ | ೩೪೧ | ೨೯೧ | ೬೩೨ | ೨೦೫ | ೨೦೫ | ೪೧೦ | ೩೪೨ | ೨೫೯ | ೬೦೧ | ೪೧ | ೫ | ೪೬ | ೭೩ | ೫೭ | ೧೩೦ | ೩೨ | ೧೩ | ೪೫ | ೨೨ | ೨೧ | ೪೩ | ೦ | ೦ | ೦ |

ಅಂಕಿ ಅಂಶಗಳು ೩. ಸಮೀಕ್ಷೆಗೊಳಪಟ್ಟ ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ವೈವಾಹಿಕ ಸ್ಥಾನಮಾನ

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬಗಳು | ವೈವಾಹಿಕ ಸ್ಥಾನಮಾನ | | | | | | | | |
|---|---|---|---|---|---|---|---|---|---|---|---|---|---|
| | | | | | ಅವಿವಾಹಿತ | | | ವಿವಾಹಿತ | | | ವಿಧುರ ಮತ್ತು ವಿಧವೆಯರು | | |
| | | | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ಗದಗ | ಗದಗ | ೨೧೫ | ೨೦೮ | ೧೬೧ | ೩೬೯ | ೧೮೨ | ೧೮೩ | ೩೬೨ | ೩ | ೪೫ | ೪೮ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೯ | ೧೦ | ೧೯ | ೧೨ | ೧೨ | ೨೪ | ೦ | ೦ | ೦ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | ೫೮ | ೬೩ | ೧೨೧ | ೫೧ | ೫೧ | ೧೦೨ | ೦ | ೨ | ೨ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೪೮ | ೪೨ | ೯೦ | ೩೮ | ೩೮ | ೭೬ | ೬ | ೫ | ೧೧ |
| | | | | ೮೯ | ೧೦೬ | ೧೦೫ | ೨೧೧ | ೮೯ | ೮೯ | ೧೭೮ | ೬ | ೭ | ೧೩ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೬೬ | ೮೦ | ೧೪೬ | ೫೯ | ೬೦ | ೧೧೯ | ೧ | ೧೩ | ೧೪ |
| | | ಹುನಗುಂದ | ಹುನಗುಂದ | ೭ | ೬ | ೧೭ | ೨೩ | ೬ | ೬ | ೧೨ | ೦ | ೧ | ೧ |
| | | | ಬಾದಾಮಿ | ೩ | ೭ | ೨ | ೯ | ೩ | ೩ | ೬ | ೦ | ೦ | ೦ |
| | | | | ೬೩ | ೭೯ | ೯೯ | ೧೭೮ | ೬೮ | ೬೯ | ೧೩೭ | ೧ | ೧೪ | ೧೫ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೫೪ | ೩೦ | ೮೪ | ೩೫ | ೩೫ | ೭೦ | ೦ | ೪ | ೪ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೫೦ | ೪೫ | ೯೫ | ೪೨ | ೪೨ | ೮೪ | ೦ | ೪ | ೪ |
| | | ವಿಜಯಪುರ | ವಿಜಯಪುರ | ೨೦೧ | ೩೩೪ | ೨೩೮ | ೫೭೨ | ೨೬೫ | ೨೬೫ | ೫೩೦ | ೧೨ | ೨೮ | ೪೦ |
| | | | | ೨೬೭ | ೪೩೮ | ೩೧೩ | ೭೫೧ | ೩೪೨ | ೩೪೨ | ೬೮೪ | ೧೨ | ೩೬ | ೪೮ |
| | ಒಟ್ಟು | | | ೬೪೪ | ೮೪೦ | ೬೮೮ | ೧೫೨೮ | ೬೯೩ | ೬೯೫ | ೧೩೮೫ | ೨೨ | ೧೦೨ | ೧೨೪ |

ಅಂಕಿ ಅಂಶಗಳು ೪. ಸಮೀಕ್ಷೆಗೊಳಪಟ್ಟ ಜಿಲ್ಲಾವಾರು, ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಕಸುಬುಗಳು

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬ ಗಳು | ಕಸುಬುಗಳು | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | | | | ಕೃಷಿ | | | ಕೃಷಿಕೂಲಿ | | | ಸರ್ಕಾರಿ | | | ಖಾಸಗಿ | | | ಇತರೆ | | |
| | | | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ಗದಗ | ಗದಗ | ೨೧೫ | ೦ | ೦ | ೦ | ೧೫೯ | ೧೫ | ೧೭೪ | ೮ | ೨ | ೧೦ | ೫ | ೩ | ೬ | ೮೦ | ೧೯ | ೯೭ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೦ | ೦ | ೦ | ೧೩ | ೦ | ೧೩ | ೦ | ೦ | ೦ | ೦ | ೦ | ೦ | ೦ | ೦ | ೦ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | ೦ | ೦ | ೦ | ೩೮ | ೨ | ೪೦ | ೨ | ೦ | ೨ | ೧ | ೦ | ೧ | ೧೨ | ೦ | ೧೨ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೦ | ೦ | ೦ | ೩೭ | ೧೫ | ೫೨ | ೦ | ೦ | ೦ | ೦ | ೦ | ೦ | ೫ | ೧ | ೬ |
| | | | | ೮೯ | ೦ | ೦ | ೦ | ೭೫ | ೧೭ | ೯೨ | ೨ | ೦ | ೨ | ೧ | ೦ | ೧ | ೧೭ | ೧ | ೧೮ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೦ | ೦ | ೦ | ೨೦ | ೧೭ | ೩೮ | ೯ | ೨ | ೧೦ | ೦ | ೦ | ೦ | ೩೯ | ೧ | ೪೦ |
| | | ಹುನಗುಂದ | ಹುನಗುಂದ | ೭ | ೦ | ೦ | ೦ | ೫ | ೧ | ೪ | ೩ | ೦ | ೧ | ೦ | ೦ | ೦ | ೦ | ೦ | ೦ |
| | | | ಬಾದಾಮಿ | ೩ | ೦ | ೦ | ೦ | ೩ | ೦ | ೩ | ೦ | ೦ | ೦ | ೦ | ೦ | ೦ | ೦ | ೦ | ೦ |
| | | | | ೬೩ | ೦ | ೦ | ೦ | ೨೮ | ೧೮ | ೪೫ | ೧೨ | ೨ | ೧೧ | ೦ | ೦ | ೦ | ೩೯ | ೧ | ೪೦ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೦ | ೦ | ೦ | ೩೩ | ೫ | ೩೮ | ೨ | ೦ | ೨ | ೦ | ೦ | ೦ | ೩ | ೦ | ೩ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೨೦ | ೦ | ೨೦ | ೧೮ | ೧ | ೧೯ | ೯ | ೧ | ೧೦ | ೦ | ೦ | ೦ | ೨ | ೦ | ೨ |
| | | ವಿಜಯಪುರ | ವಿಜಯಪುರ | ೨೦೧ | ೧ | ೦ | ೧ | ೨೭೦ | ೩೮ | ೩೦೮ | ೮ | ೩ | ೧೧ | ೨ | ೦ | ೨ | ೩೬ | ೨ | ೩೮ |
| | | | | ೨೬೭ | ೨೧ | ೦ | ೨೧ | ೩೨೧ | ೪೪ | ೩೬೫ | ೧೯ | ೪ | ೨೩ | ೨ | ೦ | ೨ | ೪೧ | ೨ | ೪೩ |
| | | | ಒಟ್ಟು | ೬೪೪ | ೨೧ | ೦ | ೨೧ | ೫೯೬ | ೯೪ | ೬೮೯ | ೪೧ | ೮ | ೪೬ | ೮ | ೩ | ೯ | ೧೭೭ | ೨೩ | ೧೯೮ |

ಅಂಕಿ ಅಂಶಗಳು ೫. ಸಮೀಕ್ಷೆಗೊಳಪಟ್ಟ ಜಿಲ್ಲಾವಾರು, ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಸರ್ಕಾರಿ ಸೌಲಭ್ಯಗಳು

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬ ಗಳು | ಸರ್ಕಾರಿ ಸೌಲಭ್ಯಗಳು | | | | | | | | | | | | |
|---|---|---|---|---|---|---|---|---|---|---|---|---|---|---|---|---|---|
| | | | | | ಓಟಿನ ಕಾರ್ಡ್ | | | ವಿಧವಾ ವೇತನ | ಅಂಗವಿಕಲ | | | ವೃದ್ಧಾಪ್ಯ ವೇತನ | | | ಶಿಷ್ಯವೇತನ | | |
| | | | | | ಗಂಡು | ಹೆಣ್ಣು | ಒಟ್ಟು | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಗದಗ | ಗದಗ | ಗದಗ | ೨೧೫ | ೨೪೨ | ೨೩೫ | ೪೭೪ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೪ | ೩ | ೭ | ೦ | ೦ | ೦ | ೦ | ೦ | ೦ | ೦ | ೦ | ೧ | ೧ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | ೫೮ | ೫೫ | ೧೧೩ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೩೩ | ೨೮ | ೬೧ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| | | | | ೮೯ | ೯೧ | ೮೩ | ೧೭೪ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೬೪ | ೬೭ | ೧೩೧ | ೦ | ೨ | ೧ | ೩ | ೦ | ೨ | ೨ | ೦ | ೦ | ೦ |
| | | ಹುನಗುಂದ | ಹುನಗುಂದ | ೭ | ೧೦ | ೧೧ | ೨೧ | ೦ | ೦ | ೦ | ೦ | ೦ | ೦ | ೦ | ೦ | ೧ | ೧ |
| | | | ಬಾದಾಮಿ | ೩ | ೫ | ೪ | ೯ | ೦ | ೦ | ೦ | ೦ | ೦ | ೦ | ೦ | ೦ | ೧ | ೧ |
| | | | | ೬೩ | ೭೯ | ೮೨ | ೧೬೧ | ೦ | ೨ | ೧ | ೩ | ೦ | ೨ | ೨ | ೦ | ೨ | ೨ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೫೬ | ೪೩ | ೯೯ | ೦ | ೦ | ೦ | ೦ | ೧ | ೧ | ೨ | ೧ | ೦ | ೧ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೬೩ | ೫೭ | ೧೨೦ | ೦ | ೦ | ೦ | ೦ | ೧ | ೧ | ೨ | ೨ | ೨ | ೪ |
| | | ವಿಜಯಪುರ | ವಿಜಯಪುರ | ೨೦೧ | ೨೫೧ | ೨೦೮ | ೪೫೯ | | ೬ | ೦ | ೬ | ೨ | ೩ | ೫ | ೧ | ೧ | ೨ |
| | | | | ೨೬೭ | ೩೭೦ | ೩೦೮ | ೬೭೮ | ೦ | ೬ | ೦ | ೬ | ೪ | ೫ | ೯ | ೪ | ೩ | ೭ |
| | | | ಒಟ್ಟು | ೬೪೪ | ೭೮೬ | ೭೧೧ | ೧೪೯೪ | ೦ | ೮ | ೧ | ೯ | ೪ | ೭ | ೧೧ | ೪ | ೬ | ೧೦ |

ಅಂಕಿ ಅಂಶಗಳು ೬ ಸಮೀಕ್ಷೆಗೊಳಪಟ್ಟ ಜಿಲ್ಲಾವಾರು, ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಭೂ ಹಿಡುವಳಿ ಪ್ರಮಾಣ ಮತ್ತು ಭೂ ಶ್ರೇಣಿಗಳು ಹಾಗೂ ಪಶುಸಂಪತ್ತು

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ಭೂ ಹಿಡುವಳಿ ಶ್ರೇಣಿಗಳು (ಎಕರೆಗಳಲ್ಲಿ) | | | | | | ಪಶುಸಂಪತ್ತು | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | | | | ಒಣ ಭೂಮಿ | ನೀರಾವರಿ | ಒಟ್ಟು | ೨೫ರ ಮೇಲ್ಪಟ್ಟು | ೧೦.೧–೨೫ | ೫.೧–೧೦ | ೨.೫೧–೫ | ೦.೫–೨.೫೦ | ಭೂರಹಿತ | | | | | | |
| | | | | | | | | ಎ | ಬಿ | ಸಿ | ಡಿ | ಇ | ಎಫ್ | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
| ೧ | ಗದಗ | ಗದಗ | ಗದಗ | ೨೧೫ | ೦ | ೦ | ೦ | ೦ | ೦ | ೦ | ೦ | ೦ | ೨೧೫ | ೦ | ೦ | ೦ | ೦ | ೦ | ೦ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೦ | ೦ | ೦ | ೦ | ೦ | ೦ | ೦ | ೦ | ೧೦ | ೦ | ೦ | ೦ | ೦ | ೦ | ೦ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | ೦ | ೦ | ೦ | ೦ | ೦ | ೦ | ೦ | ೦ | ೪೮ | ೦ | ೦ | ೦ | ೦ | ೦ | ೦ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೦ | ೦ | ೦ | ೦ | ೦ | ೦ | ೦ | ೦ | ೦ | ೦ | ೪೧ | ೦ | ೦ | ೦ | ೦ |
| | | | | ೮೯ | ೦ | ೦ | ೦ | ೦ | ೦ | ೦ | ೦ | ೦ | ೪೮ | ೦ | ೪೧ | ೦ | ೦ | ೦ | ೦ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೦ | ೦ | ೦ | ೦ | ೦ | ೦ | ೦ | ೦ | ೫೩ | ೦ | ೦ | ೦ | ೦ | ೦ | ೦ |
| | | ಹುನಗುಂದ | ಹುನಗುಂದ | ೭ | ೦ | ೦ | ೦ | ೦ | ೦ | ೦ | ೦ | ೦ | ೭ | ೦ | ೦ | ೦ | ೦ | ೦ | ೦ |
| | | | ಬಾದಾಮಿ | ೩ | ೦ | ೦ | ೦ | ೦ | ೦ | ೦ | ೦ | ೦ | ೩ | ೦ | ೦ | ೦ | ೦ | ೦ | ೦ |
| | | | | ೬೩ | ೦ | ೦ | ೦ | ೦ | ೦ | ೦ | ೦ | ೦ | ೬೩ | ೦ | ೦ | ೦ | ೦ | ೦ | ೦ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೦ | ೦ | ೦ | ೦ | ೦ | ೦ | ೦ | ೦ | ೩೧ | ೦ | ೦ | ೦ | ೦ | ೦ | ೦ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೬೭ | ೦ | ೬೭ | ೦ | ೧ | ೨ | ೭ | ೭ | ೧೮ | ೧ | ೨ | ೦ | ೦ | ೦ | ೦ |
| | | ವಿಜಯಪುರ | ವಿಜಯಪುರ | ೨೦೧ | | | | | | | | | ೨೦೨ | ೦ | ೦ | ೦ | ೦ | ೦ | ೦ |
| | | | | ೨೬೭ | ೬೭ | ೦ | ೬೭ | ೦ | ೧ | ೨ | ೭ | ೭ | ೨೫೧ | ೧ | ೨ | ೦ | ೦ | ೦ | ೦ |
| | | | ಒಟ್ಟು | ೬೪೪ | ೬೭ | ೦ | ೬೭ | ೦ | ೧ | ೨ | ೭ | ೭ | ೫೮೭ | ೧ | ೪೩ | ೦ | ೦ | ೦ | ೦ |

ಅಂಕಿ ಅಂಶಗಳು ೭ ಸಮೀಕ್ಷೆಗೊಳಪಟ್ಟ ಜಿಲ್ಲಾವಾರು, ತಾಲೂಕುವಾರು, ನೆಲೆಗಳವಾರು, ಕುಟುಂಬವಾರು, ಮನೆಗಳ ಮಾದರಿ, ನಿವೇಶನ, ಮನೆ, ವಿದ್ಯುತ್, ಪಡಿತರ ಚೀಟಿ

| ಕ್ರ ಸಂ. | ಜಿಲ್ಲೆಗಳು | ತಾಲೂಕುಗಳು | ನೆಲೆಗಳು | ಕುಟುಂಬಗಳು | ಮನೆಗಳ ಮಾದರಿ | | | | | | | | ನಿವೇಶನ | | ಮನೆ | | ವಿದ್ಯುತ್ | | ಪಡಿತರ ಚೀಟಿ |
|---|---|---|---|---|---|---|---|---|---|---|---|---|---|---|---|---|---|---|---|
| | | | | | ಗುಡಾರ | ಗುಡಿಸಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ | ಸ್ವಂತದ್ದು | ಸರ್ಕಾರ | ಸ್ವಂತದ್ದು | ಸರ್ಕಾರ | ಸ್ವಂತದ್ದು | ಸರ್ಕಾರ | |
| ೧ | ಗದಗ | ಗದಗ | ಗದಗ | ೨೧೫ | ೦ | ೦ | ೧೬೪ | ೦ | ೩ | ೦ | ೦ | ೪೮ | ೦ | ೦ | ೦ | ೦ | ೦ | ೦ | ೧೮೧ |
| ೨ | ದಾವಣಗೆರೆ | ದಾವಣಗೆರೆ | ದಾವಣಗೆರೆ | ೧೦ | ೦ | ೦ | ೨ | ೦ | ೪ | ೪ | ೦ | ೦ | ೦ | ೦ | ೨ | ೦ | ೦ | ೧ | ೦ |
| ೩ | ಧಾರವಾಡ | ಧಾರವಾಡ | ಧಾರವಾಡ | ೪೮ | | ೨ | ೮ | ೨ | ೯ | ೨೭ | ೦ | ೦ | ೦ | ೦ | ೨೮ | ೦ | ೦ | ೦ | ೦ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೪೧ | ೦ | ೦ | ೩೩ | ೦ | ೮ | ೦ | ೦ | ೦ | ೦ | ೩೩ | ೦ | ೦ | ೦ | ೦ | ೦ |
| | | | | ೮೯ | ೦ | ೨ | ೪೧ | ೨ | ೧೭ | ೨೭ | ೦ | ೦ | ೦ | ೩೩ | ೨೮ | ೦ | ೦ | ೦ | ೦ |
| ೪ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ೫೩ | ೦ | ೯ | ೧೦ | ೨ | ೮ | ೦ | ೦ | ೨೪ | ೧೨ | ೧೯ | ೦ | ೦ | ೦ | ೦ | ೩೧ |
| | | ಹುನಗುಂದ | ಹುನಗುಂದ | ೭ | ೦ | ೦ | ೨ | ೩ | ೧ | ೧ | ೦ | ೦ | ೦ | ೦ | ೫ | ೦ | ೦ | ೦ | ೦ |
| | | | ಬಾದಾಮಿ | ೩ | ೦ | ೦ | ೦ | ೩ | ೦ | ೦ | ೦ | ೦ | ೦ | ೦ | ೨ | ೦ | ೦ | ೦ | ೦ |
| | | | | ೬೩ | ೦ | ೯ | ೧೨ | ೮ | ೯ | ೧ | ೦ | ೨೪ | ೧೨ | ೧೯ | ೭ | ೦ | ೦ | ೦ | ೩೧ |
| ೫ | ವಿಜಯಪುರ | ಮುದ್ದೆಬಿಹಾಳ್ | ಬಸವನಬಾಗೇವಾಡಿ | ೩೧ | ೪ | ೩ | ೫ | ೧೬ | ೨ | ೧ | ೦ | ೦ | ೦ | ೦ | ೧೮ | ೦ | ೦ | ೦ | ೦ |
| | | ಮುದ್ದೆಬಿಹಾಳ್ | ಮುದ್ದೆಬಿಹಾಳ್ | ೩೫ | ೦ | ೯ | ೧ | ೧೫ | ೪ | ೬ | ೦ | ೦ | ೦ | ೦ | ೩೪ | ೦ | ೦ | ೦ | ೦ |
| | | ವಿಜಯಪುರ | ವಿಜಯಪುರ | ೨೦೧ | | ೦ | ೭೫ | ೯೫ | ೧೧ | ೭ | ೦ | ೧೩ | ೩೮ | ೯ | ೨ | ೨ | ೦ | ೧೪೩ | ೧೬೪ |
| | | | | ೨೬೭ | ೪ | ೧೨ | ೮೧ | ೧೨೬ | ೧೭ | ೧೪ | ೦ | ೧೩ | ೩೮ | ೯ | ೫೪ | ೨ | ೦ | ೧೪೩ | ೧೬೪ |
| | | | ಒಟ್ಟು | ೬೪೪ | ೪ | ೨೩ | ೩೦೦ | ೧೩೬ | ೫೦ | ೪೬ | ೦ | ೮೫ | ೫೦ | ೬೧ | ೯೧ | ೨ | ೦ | ೧೪೪ | ೩೭೬ |

ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬
ಚಪ್ಪರ್‌ಬಂದ್: ವಿಮುಕ್ತ ಬುಡಕಟ್ಟಿನ ಸಾಮಾಜಿಕ ಅಧ್ಯಯನ

# ಪ್ರಶ್ನಾವಳಿ

i. ಸಾಮಾನ್ಯ ಮಾಹಿತಿ

A. ಸಮೀಕ್ಷೆ ದಿನಾಂಕ:
B. ಮಾತೃಭಾಷೆ:
C. ಗುಂಪು:
D. ಬೆಡಗು:
E. ಮನೆತನದ ಹೆಸರು:
F. ವಾಸಸ್ಥಾನ (ಗ್ರಾಮ/ಪಟ್ಟಣ):
G. ವಾರ್ಡ:
H. ಪಂಚಾಯ್ತಿ:

I. ತಾಲ್ಲುಕು:
J. ಜಿಲ್ಲೆ:
K. ಭೂಯಿಡುವಳಿ: (ಎಕರೆಗಳಲ್ಲಿ)
ಅ) ಖುಷ್ಕಿ:
ಆ) ತರಿ:
L. ನಿವೇಶನ & ಮನೆ
ಇದೆ/ಇಲ್ಲ

M. ಪಶು ಸಂಪತ್ತು (ಸಂಖ್ಯೆಗಳಲ್ಲಿ:
೧. ಎತ್ತು, ಹೋರಿ:
೨. ಆಕಳು, ಕರು:
೩. ಎಮ್ಮೆ, ಕೋಣ:
೪. ಕುರಿ/ಮೇಕೆ:
೫. ನಾಯಿ:
೬. ಕೋಳಿ:
೭ ಇತರೆ

N. ಮನೆ ಸ್ವರೂಪ
೧. ಗುಡಾರ
೨. ಗುಡಿಸಲು
೩. ಟಿನ್ ಮನೆ
೪. ಡಾಬಾ/ಮಾಳಿಗೆ
೫. ಆರ್ ಸಿಸಿ
೬. ಹೆಂಚಿನ ಮನೆ
O.ಮನೆಯ ವಿವರ
ಅ) ಸ್ವಂತದ್ದು
ಆ) ಸರಕಾರದ್ದು

ಇ) ಆಶ್ರಯ ಮನೆ
ಈ) ಬಾಡಿಗೆ ಮನೆ
P. ವಿದ್ಯುತ್ ಸೌಲಭ್ಯ:
ಇದೆ/ಇಲ್ಲ
Q. ಇತರೆ ಸೌಲಭ್ಯಗಳು
ಗ್ಯಾಸ್

ನಳ್ಳಿ
ಶೌಚಾಲಯ
ಸೈಕಲ್
ದ್ವಿಚಕ್ರ ವಾಹನ
ಟೇಪ್
ರೆಕಾರ್ಡರ್:
ಟಿ. ವಿ

ii. ವೈಯುಕ್ತಿಕ ಮಾಹಿತಿ

ಮೊಬೈಲ್ ಸಂಖ್ಯೆ:

| ಕ್ರ ಸಂ. | ಸಂಬಂಧ | ಸಂಬಂಧ | ಲಿಂಗ | ವಯಸ್ಸು | ಶಿಕ್ಷಣ | ವೈವಾಹಿಕ ಸ್ಥಾನ ಮಾನ | | | ಸರಕಾರಿ ಸೌಲಭ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|
| | | | | | | ವಿವಾಹಿತರು | ವಿಚ್ಛೇಧನ | ವಿಧುರ/ ವಿಧವೆ | ಓಟಿನ ಕಾರ್ಡ್ | ವಿಧವಾ ವೇತನ | ಅಂಗ ವಿಕಲ | ವೃದ್ಧಾಪ್ಯ | ಶಿಷ್ಯ ವೇತನ | ಸಾಲ | ಪಡಿತರ ಚೀಟಿ | ಇತರೆ |
| 1 | | | | | | | | | | | | | | | | |
| 2 | | | | | | | | | | | | | | | | |
| 3 | | | | | | | | | | | | | | | | |
| 4 | | | | | | | | | | | | | | | | |
| 5 | | | | | | | | | | | | | | | | |
| 6 | | | | | | | | | | | | | | | | |
| 7 | | | | | | | | | | | | | | | | |
| 8 | | | | | | | | | | | | | | | | |
| 9 | | | | | | | | | | | | | | | | |
| 10 | | | | | | | | | | | | | | | | |
| 11 | | | | | | | | | | | | | | | | |
| 12 | | | | | | | | | | | | | | | | |
| 13 | | | | | | | | | | | | | | | | |
| 14 | | | | | | | | | | | | | | | | |
| 15 | | | | | | | | | | | | | | | | |
| 16 | | | | | | | | | | | | | | | | |

ಸಂಶೋಧಕರು
ಸಬಿಹ ನಾಜ್

ಮಾರ್ಗದರ್ಶಕರು
ಡಾ ಕೆ ಎಂ ಮೇತ್ರಿ

ಮಾಹಿತಿದಾರರ ಸಹಿ ಮತ್ತು ವಿಳಾಸ

## ಅನುಬಂಧ- ವರದಿಗಳು

### ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ,

### ಬೆಂಗಳೂರು.

### ವಿಶೇಷ ವರದಿ – 24 / 2010

**ವಿಷಯ: ಚಪ್ಪರ್‌ಬಂದ್ (ಮುಸ್ಲಿಂ) ಜನಾಂಗದ ಸಾಮಾಜಿಕ, ಶೈಕ್ಷಣಿಕ ಸ್ಥಿತಿ–ಗತಿ ಅಧ್ಯಯನ ಮತ್ತು ವಿಶೇಷ ಪ್ಯಾಕೇಜ್.**

### ವಿಶೇಷ ವರದಿ – 24 / 2010

**ಚಪ್ಪರ್‌ಬಂದ್ (ಮುಸ್ಲಿಂ) ಜನಾಂಗದ ಸಾಮಾಜಿಕ, ಶೈಕ್ಷಣಿಕ ಸ್ಥಿತಿ–ಗತಿ ಅಧ್ಯಯನ ಮತ್ತು ವಿಶೇಷ ಪ್ಯಾಕೇಜ್.**

**ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಸ್ವರೂಪ ಮತ್ತು ವ್ಯಾಪ್ತಿ:**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಅಧಿನಿಯಮ 1995 ರಂತೆ ರಚಿತವಾಗಿದ್ದು, ಈ ಅಧಿನಿಯಮವನ್ನು ಭಾರತದ ಸರ್ವೋಚ್ಚ ನ್ಯಾಯಾಲಯವು ಮಂಡಲ್ ಮೊಕದ್ದಮೆಯಲ್ಲಿ ಎಲ್ಲಾ ರಾಜ್ಯಗಳಲ್ಲಿ ಮತ್ತು ಕೇಂದ್ರದಲ್ಲಿ ಶಾಶ್ವತ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸುವಂತೆ ನೀಡಿದ ನಿರ್ದೇಶದನ್ವಯ ರಚಿಸಲಾಗಿದೆ. ತದನಂತರ, ಈ ಅಧಿನಿಯಮವನ್ನು ಕರ್ನಾಟಕ ರಾಜ್ಯದ 28ನೇ ವಿಧೇಯಕ 1997 ರಂತೆ ತಿದ್ದುಪಡಿ ಮಾಡಿ, ದಿನಾಂಕ: 01.12.1997 ರಂದು ಜಾರಿಗೊಳಿಸಲಾಗಿದೆ.

ಈ 28ನೇ ವಿಧೇಯಕದ ಅಡಿಯಲ್ಲಿ ಆಯೋಗವು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಪರಿಚ್ಛೇದ (9)ರಂತೆ ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ:

1. ನಾಗರೀಕರ ಯಾವುದೇ ವರ್ಗವನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಬಂದ ಕೋರಿಕೆಗಳನ್ನು ಪರಿಶೀಲಿಸುವುದು ಮತ್ತು ಯಾವುದೇ ಹಿಂದುಳಿದ ವರ್ಗವನ್ನು ಅಂತಹ ಪಟ್ಟಿಯಲ್ಲಿ ಹೆಚ್ಚಾಗಿ ಸೇರಿಸಲಾಗಿದೆ ಅಥವಾ ಸೇರಿಸಲಾಗಿಲ್ಲವೆಂದು ಬಂದ ದೂರುಗಳನ್ನು ವಿಚಾರಣೆ ಮಾಡುವುದು ಮತ್ತು ಸರ್ಕಾರಕ್ಕೆ ಅದು ಸೂಕ್ತವೆಂದು ತೋರುವ ಸಲಹೆಗಳನ್ನು ನೀಡುವುದು.

2. ಹಿಂದುಳಿದ ವರ್ಗಗಳಿಗೆ ಸೇರಿದ ಜನರ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗಳ ಸಮಸ್ಯೆಗಳ ಬಗ್ಗೆ ಸಮೀಕ್ಷೆ ನಡೆಸುವುದು.

3. ಹಿಂದುಳಿದ ವರ್ಗಗಳಿಗಾಗಿ ಇರುವ ಅನೇಕ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮೇಲ್ವಿಚಾರಣೆ ಮಾಡುವುದು.

ಈ ಪ್ರಕಾರ್ಯಗಳ ಅಂಗವಾಗಿ ಆಯೋಗವು ಕರ್ನಾಟಕ ರಾಜ್ಯದ ಎಲ್ಲಾ ಹಿಂದುಳಿದ ವರ್ಗಗಳ ಅಧ್ಯಯನವನ್ನು ಕೈಗೊಂಡು, ಅವುಗಳ ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತು ವರದಿ ಮಾಡುವ ಉದ್ದೇಶವನ್ನು ಹೊಂದಿದೆ. ಈ ಉದ್ದೇಶದ ಅನ್ವಯ ಕರ್ನಾಟಕದ ಪ್ರಮುಖ ಹಿಂದುಳಿದ ಜಾತಿಗಳಲ್ಲಿ ಒಂದಾದ ಮುಸ್ಲಿಂ ಚಪ್ಪರ್ ಬಂದ್ ಜನಾಂಗದ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳ ಕುರಿತು ಅಧ್ಯಯನ ಕೈಗೊಂಡಿದೆ. ಕರ್ನಾಟಕ ರಾಜ್ಯದಲ್ಲಿ ಚಪ್ಪರ್‌ಬಂದ್ (ಮುಸ್ಲಿಂ) ಜನಾಂಗವು ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಈ ಜನಾಂಗವನ್ನು ಹಿಂದುಳಿದ ವರ್ಗಗಳ ಪಟ್ಟಿಯ **ಪ್ರವರ್ಗ–1** 66(ಎ)ರಲ್ಲಿ ಸೇರಿಸಲಾಗಿದೆ.

**ಹಿನ್ನೆಲೆ:** ಮೂಲತಃ ಮೊಗಲ ರಾಜರ ಆಳ್ವಿಕೆಯಲ್ಲಿ ಸೈನಿಕರಿಗೆ ಚಪ್ಪರ್/ಡೇರೆ ಕಟ್ಟಿಕೊಡುವ ಕಸುಬನ್ನೆ ಮಾಡುತ್ತಿದ್ದ ಮುಸ್ಲಿಂ ಸಮುದಾಯವೇ ಚಪ್ಪರ್‌ಬಂದ್. ಕರ್ನಾಟಕದಲ್ಲಿ ಇವರು ಮೂಲತಃ ಬಿಹಾರ ರಾಜ್ಯದಿಂದ ಬಿಜಾಪುರಕ್ಕೆ ಆದಿಲ್‌ಶಾಹಿ ರಾಜರೊಡನೆ ಡೇರೆ ಹಾಕುತ್ತಾ ಬಂದು ನೆಲೆಸಿದರು ಎಂಬುದು ಇತಿಹಾಸ. ಇವರು ಮುಖ್ಯವಾಗಿ, ಬಿಜಾಪುರ, ಧಾರವಾಡ, ಗದಗ, ಜಿಲ್ಲೆಯಲ್ಲಿ ಕಾಣಸಿಗುತ್ತಾರೆ. ಮುಖ್ಯವಾಗಿ ಚಪ್ಪರ್‌ಬಂದ್ ಸಮುದಾಯವು ವಾಸಮಾಡುವ ಸ್ಥಳವೇ ರೈಲ್ವೆ ಸ್ಟೇಷನ್ ಆಜುಬಾಜು. ಮೊಗಲರ ಆಳ್ವಿಕೆಯಲ್ಲಿ ಡೇರೆ ಹಾಕುವುದನ್ನು ಮೂಲ ಕಸುಬನ್ನಾಗಿಸಿಕೊಂಡಿದ್ದ ಇವರು ಮೊಗಲರ ಆಳ್ವಿಕೆಯ ನಂತರ ಬ್ರಿಟಿಷರ ಕಾಲದಲ್ಲಿ ತಮ್ಮ ಮೂಲ ಕಸುಬಿನಿಂದ ಅವಕಾಶ ವಂಚಿತರಾದರು. ಈ ಜನಾಂಗ ಕ್ರಮೇಣ ಖೋಟಾ ನಾಣ್ಯ ವನ್ನು ಮಾಡಲು ಪ್ರಾರಂಭಿಸಿದರೆಂದು ಎಡ್ಗರ್ ಥರ್ಸ್ಟನ್ (1909) ಹೇಳಿರುತ್ತಾರೆ. ತಮ್ಮ ಮೂಲ ಕಸುಬನ್ನು ಕಳೆದುಕೊಂಡ ಕಾರಣ ಬ್ರಿಟಿಷರ ಆಡಳಿತ ವಿರುದ್ಧ ಖೋಟಾ ನಾಣ್ಯಗಳನ್ನು ಮಾಡಲಾರಂಭಿಸಿದರು. ಅದೇ ರೀತಿ ವಿಶಿಷ್ಟವಾದ ಚಪ್ಪರ್‌ಬಂದ್ ಭಾಷೆಯನ್ನೇ ಮಾತನಾಡ ಲಾರಂಭಿಸಿದರು. ಈ ಭಾಷೆಯು ಕೇವಲ ಚಪ್ಪರ್ ಬಂದ್ ಸಮುದಾಯಕಷ್ಟೇ ತಿಳಿಯುವುದೇ ವಿನಹಃ ಬೇರೆ ಜನಾಂಗದವರಿಗೆ ಅರ್ಥವಾಗುವುದಿಲ್ಲ.

ಈ ಚಪ್ಪರ್‌ಬಂದ್ ಸಮುದಾಯವು ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಸಮುದಾಯವಾಗಿದೆ. ಈ ಸಮುದಾಯ ಕುರಿತಂತೆ ಆಯೋಗಕ್ಕೆ ಅನೇಕ ಅಹವಾಲುಗಳು ಬಂದಿವೆ. ಈ ಅಹವಾಲುಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಬಿಜಾಪುರ, ಗದಗ, ಧಾರವಾಡ ಪ್ರದೇಶಗಳಿಗೆ ಭೇಟಿ ನೀಡಿ ಕ್ಷೇತ್ರ ಕಾರ್ಯ ಕೈಗೊಂಡು ಈ ಸಮುದಾಯ ಬಡತನ ರೇಖೆಗಿಂತಲೂ ಅತ್ಯಂತ ಕೆಳಮಟ್ಟದಲ್ಲಿದೆ ಎಂದು ಆಯೋಗಕ್ಕೆ ಮನವರಿಕೆಯಾಗಿ ಈ ಸಮುದಾಯದ ಸ್ಥಿತಿಗತಿಗಳ ಬಗ್ಗೆ ಆಯೋಗ ಅಧ್ಯಯನವನ್ನು ಮಾಡುವುದರ ಮೂಲಕ ಈ ಸಮುದಾಯದ ನೋವು ನಲಿವುಗಳನ್ನು

ಅರಿತು, ಈ ಸಮುದಾಯವನ್ನು ಅಭಿವೃದ್ಧಿ ಪ್ರಧಾನ ಧಾರೆಯಲ್ಲಿ ಕೊಂಡೊಯ್ಯಲು ಸರ್ಕಾರಕ್ಕೆ ಕೆಲವು ಪರಿಹಾರೋಪಾಯಗಳನ್ನು ಸೂಚಿಸಲು ಈ ಸಮಗ್ರ ವರದಿಯನ್ನು ಮಾಡಲಾಯಿತು.

**I. ಅಧ್ಯಯನದ ಉದ್ದೇಶ:**

ಚಪ್ಪರ್‌ಬಂದ್ ಜನಾಂಗದ ಸಾಮಾಜಿಕ, ಶೈಕ್ಷಣಿಕ, ಮತ್ತು ಆರ್ಥಿಕ ಸ್ಥಿತಿಗಳನ್ನು ಒಳಗೊಂಡಂತೆ ಸಮಗ್ರ ಜೀವನ ಸ್ವರೂಪವನ್ನು ಅಧ್ಯಯನದ ಮೂಲಕ ಅರಿತು ಈ ಎಲ್ಲಾ ರಂಗಗಳಲ್ಲಿಯೂ ಈ ಸಮುದಾಯವು ಎಷ್ಟು ದುರ್ಬಲವಾಗಿದೆ ಮತ್ತು ಹಿಂದುಳಿದಿದೆ ಎಂಬುದನ್ನು ಮಾಹಿತಿ ಮೂಲಕ ಸಂಗ್ರಹಿಸಿ, ಅವುಗಳ ಆಧಾರದಲ್ಲಿ ಚಪ್ಪರ್‌ಬಂದ್ ಸಮುದಾಯ ಯಾವ ಕಾರಣದಿಂದ ಹಿಂದುಳಿದಿದೆ ಎಂಬುದನ್ನು ವಿಶ್ಲೇಷಿಸುವುದು ಮತ್ತು ಅಧ್ಯಯನ ಮೂಲಕ ದತ್ತವಾದ ಶೋಧಿತ ಕಾರ್ಯಗಳ ಆಧಾರ ಹಾಗೂ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ಚಪ್ಪರ್‌ಬಂದ್ ಸಮುದಾಯದ ಸಮಗ್ರ ಅಭಿವೃದ್ಧಿಗೆ ಪರಿಹಾರೋಪಾಯಗಳನ್ನು ಮತ್ತು ಅವುಗಳ ಅನುಷ್ಠಾನಕ್ಕೆ ಸಾಧ್ಯವಿರಬಹುದಾದ ಮಾರ್ಗ ಗಳನ್ನು ಕಂಡುಕೊಳ್ಳುವುದು ಹಾಗೂ ಇವುಗಳ ಆಧಾರದ ಮೇಲೆ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡುವುದು.

**II. ಅಧ್ಯಯನದ ವಿಧಾನ:**

ಚಪ್ಪರ್‌ಬಂದ್ ಸಮುದಾಯದ ಸಮಗ್ರ ಅಭಿವೃದ್ಧಿಗಾಗಿ ಕೈಗೊಂಡಿರುವ ಈ ಅಧ್ಯಯನವು ಲಭ್ಯವಿರುವ ಮಾಹಿತಿಗಳ ಆಧಾರದಲ್ಲಿ ಈ ಸಮುದಾಯದ ಜನಸಂಖ್ಯೆಯ ಸಾಂದ್ರತೆಯು ಹೆಚ್ಚಾಗಿರುವ ಪ್ರದೇಶ ಮತ್ತು ಜಿಲ್ಲೆ ತಾಲ್ಲೂಕುಗಳನ್ನು ಆಯೋಗ ಗುರುತಿಸಿದೆ. ಈ ಸಮುದಾಯದ ಜನಸಂಖ್ಯೆಯು ಹೆಚ್ಚಿರುವ ಪ್ರದೇಶಗಳಾದ ಗದಗ, ಧಾರವಾಡ, ಬಿಜಾಪುರ ಪ್ರದೇಶಗಳಲ್ಲಿ ಕ್ಷೇತ್ರ ಕಾರ್ಯದ ಮೂಲಕ ಈ ಸಮುದಾಯದ ಜನ ಮತ್ತು ಕುಟುಂಬಗಳ ವೃತ್ತಿ ಸ್ವರೂಪ, ಭೌಗೋಳಿಕ ಸ್ವರೂಪ, ಶೈಕ್ಷಣಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಆಯೋಗವು ಸ್ಥೂಲವಾದ ಸಮೀಕ್ಷೆಯನ್ನು ನಡೆಸಿದೆ.

**III. ಕುಲವೃತ್ತಿ ಸಂಬಂಧಿ ಅಂಶಗಳು:**

ಈಗಾಗಲೇ ತಿಳಿಸಿದಂತೆ ಚಪ್ಪರ್‌ಬಂದ್ ಸಮುದಾಯದ ಮೂಲ ಕಸುಬು ಚಪ್ಪರ ಅಥವಾ ಡೇರೆ ಹಾಕುವುದು. ಮೊಗಲ ರಾಜರು ಹಾಗೂ ಮೊಗಲರ ಸೈನ್ಯವು ಯಾವ ದಿಕ್ಕಿನಲ್ಲಿ ಸಾಗುತ್ತಿದ್ದವೋ ಅಲ್ಲಿ ಇವರು ಡೇರೆ ಹಾಕುವ ಕೆಲಸ. ಆದರೆ ಈ ಮೂಲ ಕಸುಬನ್ನು ಇತ್ತೀಚಿನ ದಿನಗಳಲ್ಲಿ ಕೈಗೆತ್ತಿಕೊಂಡಿರುವುದು ನಮ್ಮಲ್ಲಿ ಕಾಣ ಸಿಗುವುದಿಲ್ಲ. ಬ್ರಿಟಿಷರ ಆಳ್ವಿಕೆಯಲ್ಲಿ ಇವರು ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿರುವುದರಿಂದ ಈ ಸಮುದಾಯವರನ್ನು ಅಪರಾಧಿಗಳನ್ನಾಗಿ ಪರಿಗಣಿಸಿದ್ದರು. ಇದರಿಂದಾಗಿ ತಮ್ಮ ಮೂಲ ಕಸುಬನ್ನು ಕಳೆದುಕೊಂಡರು. ಮೂಲತಃ ಕರ್ನಾಟಕದ ಬಿಜಾಪುರದಲ್ಲಿ ಬಂದು ನೆಲೆಸಿದ ಇವರಿಗೆ ಬ್ರಿಟಿಷರೇ ಬಿಜಾಪುರದಲ್ಲಿ ಕೆಲವೊಂದು ಪ್ರದೇಶಗಳನ್ನು ಆಯ್ಕೆಮಾಡಿ ಕೊಂಡು ಖಾಯಂ ಆಗಿ ಒಂದೇ ಪ್ರದೇಶದಲ್ಲಿ ವಾಸಿಸುವಂತೆ ಸವಲತ್ತನ್ನು ಒದಗಿಸಿದರು.

ಅದುವರೆಗೂ ಸಮಾಜ ಬಾಹಿರವಾದ ಅಪರಾಧಿ ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯವೆಂದು ಗುರುತಿಸಲ್ಪಟ್ಟದ್ದ ಚಪ್ಪರ್ ಬಂದರು ಖಾಯಂ ಆಗಿ ಒಂದು ಕಡೆ ನೆಲೆಯೂರಿದ್ದಾರೆ. ಇವರು ಮಾತನಾಡುವ ಭಾಷೆ 16 ಭಾಷೆಗಳ ಸಮ್ಮಿಶ್ರಣವಾಗಿ ಐಚ್ಛಿಕ ಭಾಷೆಯಾಗಿದೆ ಎಂದು ಈ ಸಮುದಾಯದ ಮುಖಂಡರು ಹೇಳುತ್ತಾರೆ. ಮುಖ್ಯವಾಗಿ ಇದು ಉರ್ದು, ಕನ್ನಡ, ಮರಾಠಿ, ಅರೇಬಿಕ್, ಹಿಂದಿ, ಬೋಜಪುರಿ ಮುಂತಾದ ಭಾಷೆಗಳ ಮಿಶ್ರಣ.

ಚಪ್ಪರ್‌ಬಂದ್ ಸಮುದಾಯದಲ್ಲಿ ಮುಖ್ಯವಾಗಿ ಎರಡು ವರ್ಗಗಳನ್ನು ಕಾಣಬಹುದು. ಒಂದು ವರ್ಗವನ್ನು **'ಬಡೇಬಾಯಿ'** ಎಂದು ಇನ್ನೊಂದು ವರ್ಗವನ್ನು **'ಚೋಟೆಬಾಯಿ'** ಎಂದು ಕರೆಯುತ್ತಾರೆ. ಈ **'ದೊಡ್ಡಣ್ಣ' 'ಚಿಕ್ಕಣ್ಣ'** ವರ್ಗದ ನಡುವೆ ಸಾಮಾಜಿಕ, ಆರ್ಥಿಕ, ಸಂಬಂಧಗಳು ಪ್ರತ್ಯಕ್ಷವಾಗಿ ಕಾಣಬರುವುದಿಲ್ಲ.

**IV. ಚಪ್ಪರ್‌ಬಂದ್ ಸಮುದಾಯದ ಇತ್ತೀಚಿನ ವೃತ್ತಿಗಳು:**

1. **ಕಟ್ಟಡ ಕಾರ್ಮಿಕರು :** ಇತ್ತೀಚಿನ ದಿನಗಳಲ್ಲಿ ಚಪ್ಪರ್‌ಬಂದ್ ಸಮುದಾಯದ ಬಹುತೇಕ ಯುವಕರು ಕಟ್ಟಡ ಕಾರ್ಮಿಕರಾಗಿರುವುದನ್ನು ಕಾಣಬಹುದು. ಇವರು ಮೇಸ್ತ್ರಿಗಿಂತ ಕೆಳಗಿನ ಹಂತದ ದಿನಗೂಲಿಗಳು. ಸಾಮಾನ್ಯ ದಿನಗೂಲಿಗಳಂತೆ ಇವರಿಗೆ ವಿಶೇಷ ಭತ್ಯೆ, ಬೋನಸ್ ಅಪಘಾತ ವಿಮೆ ಇಲ್ಲದೆ ಆರ್ಥಿಕವಾಗಿ ಕಷ್ಟಕರವಾದ ಜೀವನವನ್ನು ಸಾಗಿಸುತ್ತಿದ್ದಾರೆ.

2. ಸೈಕಲ್ ಶಾಪ್ ಗ್ಯಾರೇಜ್/ವರ್ಕ ಶಾಪ್ ಸಹಾಯಕರು ಅನೇಕ ಚಪ್ಪರ್‌ಬಂದ್ ಸಹಾಯಕರು ಸೈಕಲ್ ರಿಪೇರಿ ಮಾಡುವುದನ್ನು ಗ್ಯಾರೇಜ್ ಗಳಲ್ಲಿ ಸಹಾಯಕರಾಗಿ ಕೆಲಸಮಾಡುವುದನ್ನು ಕಾಣುತ್ತಿದ್ದೇವೆ.

3. **ಸೈಕಲ್ ರೀಕ್ಷಾ ಅಟೋ ಚಾಲಕರು :** ಮುಖ್ಯವಾಗಿ ಬಿಜಾಪುರ ನಗರದಲ್ಲಿ ಚಪ್ಪರ್‌ಬಂದ್ ಸಮುದಾಯದ ವಯಸ್ಕರು ಸೈಕಲ್ ರೀಕ್ಷಾ ಹೊಡೆಯುವುದನ್ನು ಕಾಣಬಹುದು. ಪ್ರಾಥಮಿಕ ಶಿಕ್ಷಣ ಪಡೆದ ಅನೇಕ ಯುವಕರು ಅಟೋ ಚಾಲಕರಾಗಿದ್ದಾರೆ. ಆಶ್ಚರ್ಯದ ಸಂಗತಿಯೇ ನೆಂದರೆ ಇವರ ಸಮುದಾಯದಲ್ಲಿ ಕನಿಷ್ಟ ಎಸ್.ಎಸ್.ಎಲ್.ಸಿಯಲ್ಲಿ ತೇರ್ಗಡೆಯಾದವರ ಸಂಖ್ಯೆ ಕೇವಲ 10 ರಿಂದ 20 ಮಾತ್ರ. ಮಹಿಳೆಯರ ಶಿಕ್ಷಣದ ಪರಿಸ್ಥಿತಿ ಚಿಂತಾಜನಕವಾಗಿದೆ. ಮೂಲತಃ ರೈಲ್ವೆ ಸ್ಟೇಷನ್ ಹಾಗೂ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿರುವ ಇವರು ಆರ್ಥಿಕವಾಗಿ ನಿಕೃಷ್ಟೀಕರಣಕ್ಕೆ ಒಳಗಾಗಿದ್ದಾರೆ. ಕರ್ನಾಟಕ ರಾಜ್ಯದ ವಿವಿಧ ಹಿಂದುಳಿದ ಆಯೋಗಗಳು ಇವರನ್ನು ತೀರಾ ಹಿಂದುಳಿದವರೆಂದು ಘೋಷಿಸಿದೆ. ಹಿಂದುಳಿದ ವರ್ಗಗಳ ಆಯೋಗದ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಮುಸಲ್ಮಾನರು ಹಿಂದುಳಿದವರು. ಆದರೆ ಹಿಂದುಳಿಯುವಿಕೆಯ ಪ್ರಮಾಣ ಮುಸಲ್ಮಾನರ ಒಳಪಂಗಡಗಳಲ್ಲಿ ಸಮಾನವಾಗಿಲ್ಲ. ಈ ಹಿನ್ನೆಲೆಯಲ್ಲಿ ಹಿಂದುಳಿದ ಆಯೋಗಗಳು ಉದಾಹರಣೆಗೆ ಚಿನ್ನಪ್ಪ ರೆಡ್ಡಿ ಆಯೋಗ ಮುಸಲ್ಮಾನರನ್ನು ಮೂರು ವರ್ಗಗಳಾಗಿ

ವಿಂಗಡಿಸಿದೆ. ಪ್ರವರ್ಗ–1 ತೀರಾ ಹಿಂದುಳಿದವರು (Most Backward) ಪ್ರವರ್ಗ–2 ಹೆಚ್ಚು ಹಿಂದುಳಿದವರು (More Backward) ಮತ್ತು ಪ್ರವರ್ಗ–3 ಹಿಂದುಳಿದವರು. ಚಪ್ಪರ್‌ಬಂದ್, ದರ್ವೇಶ್, ನದಾಫ್, ಪಿಂಜಾರ್, ನಾಲ್ಬಂದ್, ಬಾಗವನ್ ಮುಂತಾದ ಮುಸ್ಲಿಂ ಪಂಗಡಗಳನ್ನು ಪ್ರವರ್ಗ–1 ರಲ್ಲಿಯೂ ಶೇಖ್, ಸೈಯದ್, ಮುಘಲ್, ಪಠಾನ್, ಮೇಮನ್ಸ್ ಪ್ರವರ್ಗ–2 ರಲ್ಲಿಯೂ ತಿಳಿಸಲಾಗಿದೆ. 1994ರಲ್ಲಿ ಹಿಂದುಳಿದ ವರ್ಗದ ಪಟ್ಟಿಯನ್ನು ಪರಿಷ್ಕರಿಸಲಾಗಿ ಪ್ರವರ್ಗ–2 ರನ್ನು ಎರಡು ರೀತಿಯಾಗಿ ವರ್ಗೀಕರಿಸಿ ಪ್ರವರ್ಗ–2 ರಲ್ಲಿದ್ದ ಮುಸ್ಲಿಂರನ್ನು ಪ್ರವರ್ಗ–2 (ಬಿ) ಎಂದು ಸೇರಿಸಲಾಯಿತು. Most Backward ಗುಂಪು ಪ್ರವರ್ಗ–1 ರಲ್ಲಿಯೇ ಮುಂದುವರೆಸಲಾಯಿತು. ಮೇಲ್ಕಾಣಿಸಿದ ತೀರಾ ಹಿಂದುಳಿದ ಮುಸ್ಲಿಂ ವರ್ಗಗಳು ಪ್ರವರ್ಗ–1 ರಲ್ಲಿಯೇ ಸೇರಿರುವುದರಿಂದ ಇವರು ಪ್ರವರ್ಗ–1 ರಲ್ಲಿರುವ ಇತರ ಕೊಂಚ ಮಟ್ಟದ ಪ್ರಭಾವಿ ಜಾತಿಗಳ ಪ್ರಭಾವದಿಂದ ಅಂಚಿಗೆ ಸೇರಿರುವುದನ್ನು ಕಾಣಬಹುದು.

**ಪರಿಹಾರೋಪಾಯಗಳು:**

ಕರ್ನಾಟಕ ರಾಜ್ಯದಲ್ಲಿ ಚಪ್ಪರ್‌ಬಂದ್ ಸಮುದಾಯದ ಸ್ಥಿತಿಗತಿಗಳನ್ನು ಅರಿಯಲು ಈ ಸಮುದಾಯದವರು ವಾಸವಾಗಿರುವ ಪ್ರದೇಶಗಳಲ್ಲಿ ಸಂಚರಿಸಿ ಆಳವಾಗಿ ಅಧ್ಯಯನ ನಡೆಸಿದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕೆಲವು ಪರಿಹಾರೋಪಾಯ ಗಳನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು ಅನಿವಾರ್ಯವಾಗಿದೆ.

1. ಈ ಸಮುದಾಯದ ಶಾಶ್ವತ ಅಭಿವೃದ್ಧಿಗಾಗಿ ನಿರಂತರವಾಗಿ ಯೋಜನೆಗಳ ಅನುಷ್ಠಾನಕ್ಕಾಗಿ ಈ ಸಮುದಾಯಕ್ಕಾಗಿ ಆರ್ಥಿಕ ನೆರವು, ಅನುದಾನ ಮೊದಲಾದ ಯೋಜನೆಗಳನ್ನು ನಿರಂತರವಾಗಿ ಜಾರಿಗೊಳಿಸಬಹುದಾಗಿದೆ.

2. ಈ ಸಮುದಾಯದ ಎಸ್.ಎಸ್.ಎಲ್.ಸಿ ಪಾಸಾದ ಯುವಕರಿಗೆ ಎಲೆಕ್ಟ್ರಿಕಲ್, ಎಲೆಕ್ಟ್ರಾನಿಕ್ಸ್ ಹಾಗೂ ಅಟೋ ಮೊಬೈಲ್ ಸಂಬಂಧಿಸಿದ ಸಣ್ಣ ಉದ್ಯಮ ಸ್ಥಾಪಿಸಲು ಅಥವಾ ಬಿಡಿ ಭಾಗಗಳ ಅಂಗಡಿಗಳನ್ನು ನಡೆಸಲು ಹಣಕಾಸಿನ ನೆರವು ನೀಡುವುದು.

3. ಕಟ್ಟಡ ನಿರ್ಮಾಣ ಸಂಬಂಧಿತ ಕಟ್ಟಡ ನಿರ್ಮಾಣ ಸಾಮಗ್ರಿ ಮಾರಾಟ ಮಳಿಗೆ ಇಟ್ಟಿಗೆ, ಹಂಚು ತಯಾರಿಕೆ ಟೈಲ್ಸ್ ಮತ್ತು ಬಣ್ಣಗಳ ಮಾರಾಟ ವೃತ್ತಿ ಆರಂಭಿಸಲು ಸಬ್ಸಿಡಿ ಸಹಿತ ಸಾಲ ಸೌಲಭ್ಯ ನೀಡುವುದು.

4. ರೆಡಿಮೇಡ್ ಬಟ್ಟೆ ಅಂಗಡಿ ಆರಂಭಿಸಲು, ಸಿದ್ಧ ಉಡುಪು ತಯಾರಿಕಾ ಕೇಂದ್ರ ನಡೆಸಲು ಹಣಕಾಸಿನ ನೆರವು ನೀಡುವುದು.

5. ಮೊಟ್ಟೆ ಕೋಳಿ ಮತ್ತು ಮಾಂಸದ ಕೋಳಿ ಸಾಕಾಣಿಕೆಗೆ ಆರ್ಥಿಕ ನೆರವು ನೀಡುವುದು.

6. ವರ್ಕ್‌ಶಾಪ್ ಮತ್ತು ಗ್ಯಾರೇಜ್ ಸ್ಥಾಪನೆಗೆ ಹಣಕಾಸಿನ ನೆರವು ನೀಡುವುದು.

7. ಈ ಸಮುದಾಯದವರು ಶೈಕ್ಷಣಿಕವಾಗಿ ಅತಿ ಹಿಂದುಳಿದಿರುವುದರಿಂದ, ಅವರ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ ಓದುವ ಮಕ್ಕಳಿಗೆ ಪ್ರೋತ್ಸಾಹ ಧನವನ್ನು ಸ್ಕಾಲರ್‌ಶಿಪ್‌ಗಳನ್ನು ನೀಡುವುದು.

8. ಚಪ್ಪರ್‌ಬಂದ್ ಮಕ್ಕಳಿಗೆ ಹಾಸ್ಟೆಲ್ ಸೌಲಭ್ಯ ಹಾಗೂ ಮಕ್ಕಳಿಗೆ ವಿಶೇಷ ಶಿಕ್ಷಣ ವ್ಯವಸ್ಥೆ ಮಾಡುವುದು.

9. ಶಾಲಾ, ಕಾಲೇಜು ಹಾಗೂ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳಲು ಅನುವಾಗುವಂತೆ ಈ ಸಮಾಜದ ರಾಜ್ಯಮಟ್ಟದ ನೊಂದಾಯಿತ ಸಂಘಕ್ಕೆ ಆರ್ಥಿಕ ಅನುದಾನ ನೀಡುವುದು ಅಥವಾ ದೀರ್ಘಾವಧಿ ಬಡ್ಡಿರಹಿತ ಸಾಲ ನೀಡುವುದು.

ಮೇಲ್ಕಾಣಿಸಿದ ಪರಿಹಾರೋಪಾಯಗಳನ್ನು ಚಪ್ಪರ್‌ಬಂದ್ ಸಮುದಾಯಕ್ಕಾಗಿ ನೀಡುವ ವಿಶೇಷ ಪ್ಯಾಕೇಜ್ ಎಂದು ಪರಿಗಣಿಸಬೇಕೆಂದು ಈ ಮೂಲಕ ವಿನಂತಿಸಲಾಗಿದೆ.

# ಚಪ್ಪರ್‌ಬಂದ್ ಭಾಷೆಯ ಪದಕೋಶ

## ಚಪ್ಪರ್‌ಬಂದ್ ಭಾಷೆಯ ಪದಗಳು, ಅವುಗಳ ಆಂಗ್ಲ ಮತ್ತು ಕನ್ನಡ ಅರ್ಥ

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Earth | ಭೂಮಿ | ಜಮೀನ್ |
| Ash | ಬೂದಿ | ರಾಖ್ |
| Cave | ಗುಹೆ | ಗವಿ |
| Clay | ಜೇಡಿ ಮಣ್ಣು | ಜಿಗಟ ಮಾಠಿ |
| Cold | ತಣ್ಣನೆ | ಥಂಡಿ |
| Darkness | ಕತ್ತಲು | ಹಿಂದಾರಾ |
| Desert | ಮರುಭೂಮಿ | ರೇತ-ಜಮೀನ್ |
| Earthquake | ಭೂಕಂಪ | ಬೂಕಂಪ |
| Echo | ಪ್ರತಿಧ್ವನಿ | ಅವಾಜವಾಪಸ್ ಅರು |
| Ember | ಬೆಂಬೂದಿ | ಉಡೆಹಹಿಸಿ ರಾಕ್ |
| Fire | ಬೆಂಕಿ | ಆಗ್ |
| Flame | ಜ್ವಾಲೆ | ಭಾಪ್ |
| Flood | ನೆರೆ | ಬಾಡ |
| Forest | ಅರಣ್ಯ/ಕಾಡು | ಜಂಗಲ್ |
| Ground | ನೆಲ | ಜಮೀನ್ |
| Heat | ತಾಪ/ಬಿಸಿ | ಗರಮ್ |
| Hill | ಬೆಟ್ಟ | ಡೊಂಗರ್ |
| Mountain (Mountain, Specific Termscliff, Pass, Peak, Etc) | ಪರ್ವತ | ಬಡಾ ಡೊಂಗರ್ |
| Mud | ಮಣ್ಣು | ಮಾಠಿ |
| Nature | ಪ್ರಕೃತಿ | ಖುದರತ್ |
| Pebble | ಬೆಣಚುಕಲ್ಲು | ಚೂಪ್ ಪತ್ತಾರ್ |
| Road | ರಸ್ತೆ | ಪೆಂಡಾ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Rock | ಬಂಡೆ | ಬಡಾ ಫತ್ತಾರ್ |
| Sand | ಮರಳು | ರೇತ್ |
| Shade | ನೆರಳು | ಛಾಂವ್ |
| Slope | ಇಳಿಜಾರು | ಉತ್ತರಿರ |
| Stone | ಕಲ್ಲು | ಫತ್ತಾರ್ |
| Valley | ಕಣಿವೆ | ಖಣಿ |
| Weather | ಹವಾಮಾನ | ಹವಾಪಾನಿ |
| Wood | ಮರ | ಜಾಡ್ |
| World | ಪ್ರಪಂಚ | ಜಾಡ್ ದುನಿಯಾ |
| Water Bodies | ಜಲಚರಗಳು | ಬುರಕ್ |
| Brook | ತೊರೆ | ಬುರುಗ್ |
| High Tide | ದೊಡ್ಡ ಅಲೆ (ಎತ್ತರವಾದ ಉಬ್ಬರ) | ಬಡಾ ಲೂಟ |
| Lake | ಸರೋವರ | ತಲಾಬ್ |
| Low Tide | ಸಣ್ಣ ಅಲೆ (ಕೆಳಮಟ್ಟದ ಉಬ್ಬರ) | ಚೊಟ ಲೂಟ್ |
| Pond | ಕೊಳ | ಹೊಂಡ್ |
| River | ನದಿ | ನದಿ |
| Stream | ಹಳ್ಳ | ನಾರಾ |
| Water | ನೀರು/ಜಲ | ಪಾನಿ |
| Wave | ಅಲೆ | ಲೊಟ |
| Air | ಗಾಳಿ | ಬತಾಸ್ |
| Dew | ಹಿಮ/ಮಂಜಿನ ಹನಿ | ಬರಫ್‌ಕಾ ಪಾನಿ |
| Dust | ಧೂಳು | ಧೂಲ್ |
| Ice | ಮಂಜುಗಡ್ಡೆ | ಬರಫ್ ಕಾ ಗೋಲಾ |
| Storm | ಬಿರುಗಾಳಿ | ಬಡಾ ಬತಾಸ್ |
| Wind | ಗಾಳಿ/ಮಾರಿತ | ಬತಾಸ್ |
| Sky | ಆಕಾಶ | ಆಸ್ಮಾನ್ |
| Cloud | ಮೋಡ | ಮೋಡ್, ಬಾದಲ್ |
| Lightning | ಮಿಂಚು | ಚಮುಕ್ |
| Moon | ಚಂದ್ರ | ಚಾಂದ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Crescet moon | ಅರ್ಧ ಚಂದ್ರ | ಆಧಾ ಚಾಂದ್ |
| Full moon | ಪೂರ್ಣ ಚಂದ್ರ | ಪುರಾ ಚಾಂದ್ |
| New moon | ಅಮಾವಾಯೆ | ಅಮಾಸ |
| Rain | ಮಳೆ | ಬರಸಾತ್ |
| Star | ನಕ್ಷತ್ರ/ತಾರೆ | ಚೇಕಿತಾರ್ |
| Sun | ಸೂರ್ಯ/ರವಿ | ಸೂರಜ್ |
| Sunshine/Light | ಬಿಸಿಲು/ಸೂರ್ಯನ ಬೆಳಕು | ಧೂಪ್ |
| Thundre | ಗುಡುಗು | ಬಿಜಲಿ |
| Baby | ಮಗು/ಕೂಸು | ಲಡಕಾ |
| Bachelor | ಅವಿವಾಹಿತೆ | ರಂಡೊಲಾ |
| Boy | ಹುಡುಗ/ಬಾಲಕ | ಲಂಡವಾ |
| Bride | ವಧು | ದುಲ್ಹಾನ್ |
| Bridegroom | ವರ | ದುಲ್ಹಾ |
| Borther (Elder, yonger) | ಅಣ್ಣ/ತಮ್ಮ/ಸಹೋದರ | ದಾದಾ/ಬಾಯಿ |
| Borther's wife | ಸಹೋದರನ ಹೆಂಡತಿ/ಅತ್ತಿಗೆ | ಬಾಜಿ/ಭಾಬಿ |
| Widow | ವಿಧವೆ | ರಾಂಡಮುಂಡಾ |
| Windower | ವಿಧುರ | ರಂಡೊಲಾ |
| Wife | ಹೆಂಡತಿ/ಪತ್ನಿ/ಮಡದಿ | ಮೇರರಿ |
| Wife's borther (elder,younger) | ಹೆಂಡತಿಯ ಸಹೋದರ/ ಭಾವ/ಮೈದುನ | ಸಾಲಾ |
| Wife's (elder/younger sister's husband | ಹೆಂಡತಿಯ- ಸಹೋದರಿಯ ಗಂಡ, | ಶಢ್ಕ |
| Woman | ಮಹಿಳೆ | ಔರತ್ |
| Borther's son | ಸಹೋದರನ ಮಗ | ಭಾಹಿಕಾ ಲಂಡವಾ |
| Borther's daughter | ಸಹೋದರನ ಮಗಳು | ಬೈನಕಾ ಲೊಂಡ್ಯಾ |
| Child | ಮಗು | ಲಡಕಾ |
| Childhood | ಬಾಲ್ಯ | ಲರಕನ |
| Daughter | ಮಗಳು | ಲೊಂಡಿಯಾ |
| Daughter-in-low | ಸೊಸೆ | ಬೊರಿಯಾ |
| Daughter-in-low's father | ಸೊಸೆಯ ತಂದೆ/ಮಾವ | ಸುಸರ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Daughter-in-low's mother | ಸೊಸೆಯ ತಾಯಿ/ಅತ್ತೆ | ಸಾಸ್ |
| Daughter's son | ಮಗಳ ಮಗ/ಮೊಮ್ಮಗ | ಬಾತಿ |
| Daughter's son's Daugh | ಮಗಳ ಮಗನ ಮಗಳು | ನಾತಿ |
| Daughter's Daughter | ಮಗಳ ಮಗನ ಮಗಿ/ | |
| | ಮರಿ ಮೊಮ್ಮಗ | ನಾತ |
| Daughter's son's son | ಮಗಳ ಮಗಳು/ | |
| | ಮೊಮ್ಮಗಳು | ನತನಿ |
| Eunuch | ನಪುಂಸಕ | ಹಿಜಾಡಾ |
| Father | ತಂದೆ | ಬಾಪು |
| Father-in-low | ಮಾವ | ಸುನತ |
| Father's borther- | ತಂದೆಯ ಸಹೊದರ/ | |
| (elder,younger) | ದೊಡ್ಡಪ್ಪ/ಚಿಕ್ಕಪ್ಪ | ಕಾಕು, ಬಡಾ ಬಾಪು |
| Father's borther's son | ತಂದೆಯ ಸಹೋದರನ ಮಗ | ಕಾಕುಶ, ಲಂಡನಾ |
| Father's sister- | ತಂದೆಯ ಸಹೋದರಿ/ | |
| (elder/yonger) | ಸೋದರ ಅತ್ತೆ | ಘುಪ್ಪು |
| Father's sister's son | ತಂದೆಯ ಸಹೋದರಿಯ/ | |
| | ಮಗ/ಸಹೋದರ ಅಳಿಯ | ಭಾಯಿ |
| Father's mother | ತಂದೆಯ ತಾಯಿ/ಅಜ್ಜಿ | ಆಜಿ |
| Father's father | ತಂದೆಯ ತಂದೆ/ತಾತ | ಆಜು |
| Family | ಕುಟುಂಬ | ಘರಾನಾ |
| Father's borther's- | ತಂದೆಯ ಸಹೋದರನ– | |
| daughter | ಮಗಳು | ಕಾಕುಶಲೊಂಡಾಲ |
| Father's borther's wife | ತಂದೆಯ ಸಹೋದರನ ಹೆಂಡತಿ | ಕಾಕಕಿ |
| Father's sister's daughter | ತಂದೆಯ ಸಹೋದರಿಯ/ | |
| | ಮಗಳು/ಸೋದರ ಸೊಸೆ | ಬೈನ |
| Father's mother | ತಂದೆಯ ತಾಯಿ/ ಅಜ್ಜಿ | ಅಜಿ |
| Ant | ಇರುವೆ | ಚಿವಂಟಿ |
| Bat | ಬಾವಲಿ | ಕನ್ ಕಪಾಡಿ |
| Beak | ಕೊಕ್ಕು | ಅಂದಾಬುಗಲಾ |
| Bear | ಕರಡಿ | ಬೇಡಿ |
| Crow | ಕಾಗೆ | ಕಾವ್ವ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Crane | ಕೊಕ್ಕರೆ | ಬುಗಲ್ |
| Cuckoo | ಕೋಗಿಲೆ | ಕೊಯಿಲ್ |
| Myna | ಮೈನಾ | ಶಾರು |
| Sparrow | ಗುಬ್ಬಚ್ಚಿ | ಚುಡಿ |
| Owl | ಗೂಬೆ | ಗುಗ್ಗು |
| Pigeon | ಪಾರಿವಾಳ | ಪಾರೋಳ್ |
| Peacock | ನವಿಲು | ಮೋರ್ |
| Duck | ಬಾತುಕೋಳಿ | ಬದಕ್ |
| Hen, Cock | ಕೋಳಿ, ಹುಂಜ | ಮುರಗಿ ಮುರಗಾ |
| Hawk | ಗಿಡುಗ | ಪತಂಗ |
| Eagle | ಹದ್ದು | ಚೀಲ್ |
| Vulture | ರಣಹದ್ದು | ಡಂಗಿಚಿಲ್ |
| Fish | ಮೀನು | ಮುಚ್ಚಿ, ಮಛಲಿ |
| Fox | ನರಿ | ನರಿ |
| Honey Bee | ಜೇನುನೊಣ | ಛತ್ತಾರಮಾರ |
| Horse | ಕುದರೆ | ಘೋಡಾ |
| Jackal | ಗುಳ್ಳೆನರಿ | ನರಿ |
| Lion | ಸಿಂಹ | ಸಿಂಹಾ |
| Louse | ಹೇನು | ಜಿಲಿ |
| Mithun | ಮಿಥುನ್ | ಮಗರಮಚ್ |
| Buffalo (male/female) | ಎಮ್ಮೆ/ಕೋಣ | ಭಯಿಸ್ |
| Bug | ತಿಗಣೆ | ಖಟಮಲ್ |
| Bull | ಎತ್ತು | ಬೈಲ್ |
| Butterfly | ಚಿಟ್ಟೆ | ಚಾತರಪಟಿ |
| Camel | ಒಂಟೆ | ಊಂಟ್ |
| Cat | ಬೆಕ್ಕು | ಬಿಲ್ಲಿ |
| Cattle | ದನ | ಬೈಲ್ |
| Claw | ಪ್ರಾಣಿಯ ಉಗುರು/ಪಂಜ | ಪಂಜಾ, ನಕ್ |
| Cockroach | ಜಿರಳೆ | ಬೆಂಗುರ |
| Cow | ಹಸು | ಗಾಯಿ |
| Deer | ಜಿಂಕೆ | ಹರನಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Dog | ನಾಯಿ | ಕುತ್ತಾ |
| Donkey | ಕತ್ತೆ | ಗದಾ |
| Earthworm | ಮಣ್ಣುಹುಳು/ ಎರೆಹುಳು | ಮಾಟಿಕ ಕಿಡಾ |
| Egg | ಮೊಟ್ಟೆ | ಆಂಡಾ |
| Elephant (male/Female) | ಆನೆ (ಗಂಡಾನೆ, ಹೆಣ್ಣಾನೆ) | ಹಾತಿ |
| Feather | ಗರಿ | ಫರ್ |
| Fly | ನೊಣ | ಮಾಕಿ |
| Goat (male/Female) | ಮೇಕೆ/ಗೋತ | ಬಕರ |
| Horn | ಕೊಂಬು | ಸಿಂಗ್ |
| Insect | ಕ್ರಿಮಿ | ಕಿಡಾ |
| Leech | ಜಿಗಣೆ | ಝುರಿ |
| Lizard | ಹಲ್ಲಿ | ಚಿಂಪ್‌ಕಲಿ |
| Mare | ಕುದುರೆ ಜಾತಿಯ ಹೆಣ್ಣು ಪ್ರಾಣಿ | ಘೋಡಿ |
| Monkey | ಮಂಗ/ಕೋತಿ | ಮಂಗ್ಯಾ |
| Moth | ಚಿಟ್ಟೆ | ಚಾತರಟಿ |
| Nest | ಗೂಡು | ಚಿಡಿಕಾ ಘರ್ |
| Pony | ಸಣ್ಣ ಕುದುರೆ | ಬಟ್ಟಾ ಘೋಡಾ |
| Rabbit | ಮೊಲ | ಮಲಾ |
| Rhinoceros | ಖಡ್ಗಮೃಗ | ಘೆಂಡಾ |
| Sheep | ಕುರಿ | ಮೆಂಡಾ |
| Sanke | ಹಾವು | ಸಾಪ್ |
| Mongoose | ಮುಂಗುಸಿ | ಮುಂಗಲಿ |
| Mosquito | ಸೊಳ್ಳೆ | ಮಚ್ಛರ್ |
| Mouse | ಇಲಿ | ಮುಸಾ |
| Pig | ಹಂದಿ | ಸುವರ್ |
| Puppy | ನಾಯಿಮರಿ | ಕನಪಿಲ್ಲಾ |
| Rat | ಇಲಿ | ಚುವ್ವಾ |
| Scorpion | ಚೇಳು | ಬಿಚ್ಚು |
| Snail | ಬಸವನ ಹುಳು | ಸೊರಕಾ ಕಿಡಾ |
| Spider | ಜೇಡ | ಮಕಡಿ |
| Tail | ಬಾಲ | ಪುಚ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Toad | ಕಪ್ಪೆ | ಮೆಂಡಕ್ |
| Trunk (of elephant) | (ಆನೆ) ಸೊಂಡಿಲು | ಹಾತಿ ಕಿ ಸೊಂಡಾ |
| Venom/poison | ವಿಷ | ಜಹರ್ |
| Worm | ಹುಳು | ಕಿಡಾ |
| Squirrel | ಅಳಿಲು | ಇಣಚಿ |
| Tiger | ಹುಲಿ | ಬಾಗ್ |
| Tortoise | ಆಮೆ | ಕಚುವ |
| Tusk | (ಆನೆ) ದಂತ | ಹಾತಿಕಾ ದಾತ |
| Wing | ರೆಕ್ಕೆ | ಫಂಕಾ |
| Yak | ಚಮರೀಮೃಗ | ಕೊಣಾ |
| Alive | ಜೀವಂತ | ಜೀತಾ |
| Back (of body) | ಬೆನ್ನು | ಪೀಠ್ |
| Belch | ತೇಗು | ದಮ್ |
| Belly | ಹೊಟ್ಟೆ | ಪೇಠ್ |
| Body | ಶರೀರ/ ದೇಹ | ಅಂಗ್ |
| Breath | ಉಸಿರು | ಸಾಂಸ್ |
| Chest | ಎದ್ದೆ | ಛಾತಿ |
| Dead Body | ಮೃತ ಶರೀರ | ಮುರದ್ |
| Dwarf (male,Female) | ಕುಳ್ಳ/ಕುಳ್ಳಿ | ಗಿಡ್ಡಾ/ಗಿಡ್ಡಿ |
| Elbow | ಮೊಣಕೈ | ಗುಟನ್ |
| Eyelid | ಕಣ್ಣು ರೆಪ್ಪೆ | ಆಕ್ ಫಲಕ್ |
| Ankle | ಕಣಕಾಲು | ಗುಡುಗಾ |
| Beard | ಗಡ್ಡ | ದಾಡಿ |
| Birth | ಹುಟ್ಟು/ಜನನ | ಪೈದಾ |
| Blood | ರಕ್ತ | ಖೂನ್ |
| Bone | ಮೂಳೆ | ಹಾಡ್ |
| Cheek | ಕೆನ್ನೆ | ಗಾಲ್ |
| Chin | ಗದ್ದ | ದಾಡಿ |
| Death | ಸಾವು/ಮರಣ | ಮರಗೈ |
| Ear | ಕಿವಿ | ಕಾನ್ |
| Eye | ಕಣ್ಣು | ಆಕ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Face | ಮುಖ | ಮು |
| Thumb | ಹೆಬ್ಬೆರಳು | ಬಡಿಬೊಟ್ |
| Little Finger | ಕಿರು ಬೆರಳು | ಕಾನಿಬೊಟ್ |
| Ring Finger | ಉಂಗುರದ ಬೆರಳು | ಉಂಡಿಗೆ ಬೊಟ್ |
| Fist | ಮಿಷ್ಟಿ | ಮುಟ್ಟಿ |
| Hair | ಕೂದಲು | ಬಾಲ್ |
| Head | ತಲೆ | ಸರ್ |
| Heart | ಹೃದಯ | ದಿಲ್ |
| Hip | ಪೃಷ್ಠ | ಕಮರ್ |
| Jaw | ದವಡೆ | ದಾಡ್ |
| Knee | ಮೊಣಕಾಲು | ಗುಡಗಾ |
| Life | ಜೀವ | ಜಿಂದಗಿ |
| Liver | ಯಕೃತ್ತು | ಕಲೀಜಾ |
| Moustache | ಮೀಸೆ | ಮುಚ್ಚಾ |
| Muscle | ಮಾಂಸಖಂಡ/ಸ್ನಾಯು | ರಟ್ಟಾ |
| Nose | ಮೂಗು | ನಾಕ |
| Rib | ಪಕ್ಕೆಲುಬು | ಪತಲಿ |
| Shoulder | ಭುಜ | ಕಾಂದಾ |
| Skin | ಚರ್ಮ | ಚಮಡಾ |
| Habd (keft, ruggt) | ಕೈ, ಎಡಗೈ, ಬಲಗೈ | ಹಾತ್ |
| Health | ಆರೋಗ್ಯ/ಸ್ವಾಸ್ಥ್ಯ | ಆರಾಮ |
| Hell | ಹಿಮ್ಮಡಿ | ಏಡಿ |
| Insanity | ಹುಚ್ಚು | ಧೊಂಡಿ |
| Joint | ಕೀಲು | ಕೀಲ |
| Leg | ಕಾಲು | ಪೌಂವ್ |
| Lip (Upper Lip, | ತುಟಿ, ಮೇಲ್ತುಟಿ, | |
| Lower Lip) | ಕೆಳತುಟಿ | ಸೊಂಡಾ |
| Lung | ಶ್ವಾಸಕೋಶ | ಫಕಡಿ |
| Mouth | ಬಾಯಿ | ಮು |
| Neck | ಕುತ್ತಿಗೆ | ನಯಯಿಟಟಿ |
| Faim (of hand) | ಅಂಗೈ | ಧತರಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Saliva | ಲಾಲಾರಸ | ಧುಕ |
| Skeleton | ಅಸ್ಥಿಪಂಜರ | ಹಾಡಕಾ ಡಾಚಾ |
| Skull | ತಲೆಬುರಡೆ | ಡೌಗಿ |
| Spine | ಬೆನ್ನುಮೂಳೆ | ಫಿಠಕಾ ಹಾಡ |
| Stomach | ಹೊಟ್ಟೆ | ಪೇಟಾ |
| stool/shit | ಮಲ | ಗೂ |
| Sweat | ಬೆವರು | ಪಸೀನಾ |
| Tears | ಕಣ್ಣೀರು | ಆಸು |
| Thigh | ತೊಡೆ | ಜಾಂಗ್ |
| Toe | ಪಾದ | ತರವಾ |
| Tongue | ನಾಲಿಗೆ | ಜಿದ್ |
| tooth-front tooth, | ಮುಂದಿನ ಹಲ್ಲು, | ದಾತ, |
| molar tooth | ದವಡೆ ಹಲ್ಲು | ಸುಮೆಕೆ ದಾತ, ದಾಡ |
| Urine | ಮೂತ್ರ | ಮೂತ್ |
| Vein | ರಕ್ತನಾಳ | ರಗ್ |
| Waist | ಸೊಂಟ | ಕಮರ್ |
| Wrist | ಮಣಿಕಟ್ಟು | ಪಂಜಾ |
| Small Pox | ಸಿಡುಬು | ಗಣಜಲಿ |
| Sneeze | ಸೀನು | ಛೀಕ್ |
| Swelling | ಊತ | ಪುಲಗ್ಯೆ |
| Treatment | ಚಿಕಿತ್ಸೆ | ಇಲಾಜ್ |
| Tumor | ಗಡ್ಡೆ | ಗಡ್ಡಾ |
| Vomit | ವಾಂತಿ . | ಉಲಟಿ |
| Asafetida | ಇಂಗು | ಇಂಗ್ |
| Barley | ಬಾರ್ಲಿ | ಸಾಬಕ್ ಬಾರ್ಲಿ |
| Beef | ದನದ ಮಾಂಸ | ಹೇರಾ |
| Butter | ಬೆಣ್ಣೆ | ನೇನು |
| Buttermilk | ಮಜ್ಜಿಗೆ | ಮಹಿ |
| Coal | ಇದ್ದಿಲು | ಕೊಲಸಾ |
| Coconut Scraper | ತುರಿಮಣೆ | ಕಬಟಾ |
| Coffee | ಕಾಫಿ | ಕಾಪಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Cook (Male, Famale) | ಅಡುಗೆಯ/ಅಡುಗೆಯವಳು | ಪಕ್ಕಾಯಿಕ,ಪಕೊನರಿ |
| Cooked Rice | ಬೇಯಿಸಿದ ಅನ್ನ | ಪಕ್ಕಾಯಿಸ್ |
| Curd | ಮೊಸರು | ದಯಿ |
| Curry (veg, meat) | ಸಾರು/ಸಾಂಬಾರ್ (ಸಸ್ಯಾಹಾರಿ, ಮಂಸಾಹಾರಿ) | ಸಾಲಾ |
| Dhenki (husk) | ಬೂಸ/ಹೊಟ್ಟು | ಬೂಸಾ |
| Dried Fish | ಒಣ ಮೀನು | ಸುಕ್ಕಾಮಿಚ್ಚಿ |
| Prawn | ಸೀಗಡಿ | ಸಸಲ |
| Pomfret | ಪಾಂಪ್ರೆಟ್ | ಪಾಪಲೇಟ್ |
| Kou | ಕೋ | ಗೊಜಳಿ |
| Flesh | ಮಾಂಸ | ಹೇರಾ |
| Flour | ಹಿಟ್ಟು | ಆಟಾ |
| Cobbler | ಚಪ್ಪಲಿ ಹೊಲೆಯುವವನು/ ಮೋಚಿ | ಚಪ್ಪಲ ಸಿನಾರ |
| Grocer | ಕಿರಾಣಿ ವ್ಯಾಪಾರಿ | ದುಖಾನವಾಲ |
| Hunter | ಬೇಟೆಗಾರ | ಶಿಕಾರ್ |
| Mason | ಗಾರೆ ಕೆಲಸಗಾರ | ಗೌಂಡಿಕಾಮ್ |
| Milkman | ಗೌಳಿಗ | ದೂದವಾಲಾ |
| Moneylender | ಸಾಲದಾತ | ರೀನದೇನಾರ |
| Cashier | ನಗದು ಗುಮಾಸ್ತ/ಮಧ್ಯವರ್ತಿ | ಪೇಸಾ ದೆನಾನಾ |
| Clerk | ಗುಮಾಸ್ತ/ಗುಮಾಸ್ತೆ | ಕಾರಕೂನ್ |
| Goldsmith | ಅಕ್ಕಸಾಲಿ | ಸುನಾರ್ |
| Hammer | ಸುತ್ತಿಗೆ | ಹಥೋಡಿ |
| Labourer | ಕಾರ್ಮಿಕ | ಆಳ್ |
| Midwife | ಸೂಲಗಿತ್ತಿ ಬ್ಯಾನ | ಕರನಾರಿ |
| Money | ಹಣ | ಪೈಸಾ |
| Newspaper | ವರ್ತಮಾನ ಪತ್ರಿಕೆ | ಖಬರ್‌ದೆನಾರ |
| Nurse | ದಾದಿ | ನರ್ಸ್ |
| Pan Seller | ಬೀಡ ಮಾರಾಟಗಾರ | ಪಾನ್‌ವಾಲಾ |
| Potter | ಕುಂಬಾರ | ಹಾಂಡಿ |
| Thread | ದಾರ | ಧಾಗಾ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Wire | ತಂತಿ | ತಂತಿ |
| Postman | ಅಂಚೆಯವ | ಪೋಸ್ಟವಾಲಾ |
| Tailor | ದರ್ಜಿ | ಧರ್ಜಿ |
| Washer-man | ಅಗಸ | ಧೋಬಿ |
| Lemom | ನಿಂಬೆ | ಲಿಂಬು |
| Orange | ಕಿತ್ತಳೆ | ಮೊಸಂಬಿ |
| Pine apple | ಅನಾನಸ್ | ಅನಾನಸ್ |
| Garden | ತೋಟ | ಬಗೀಚಾ |
| Ginger | ಶುಂಠಿ | ಅದರಕ್ |
| Bitter Gourd | ಹಾಗಲಕಾಯಿ | ಕರೇಲಾ |
| Ridge Gourd | ಸೋರೆಕಾಯಿ | ಲಂಬಾಕದ್ದು |
| White Gourd | ಬೀಳಿ ಸೋರೆಕಾಯಿ | ಉಜಕಾಕದ್ದು |
| Groundnut | ನೆಲಗಡಲೆ | ಶೆಂಗಾ |
| Lady's finger | ಬೆಂಡೆಕಾಯಿ | ಬೆಂಡಿ |
| Leaf | ಎಲೆ | ಪತ್ತಾ |
| Mustard | ಸಾಸಿವೆ | ರಾಯಿ |
| Paddy | ಭತ್ತ | ಭತ್ತಾ |
| Plant | ಸಳ | ದಾನಾ |
| Plant | ಸಸಿ | ಜಾಡ್ |
| Pomegranate | ದಾಳಿಂಬೆ | ಅನಾರ |
| Raddish | ಮೂಲಂಗಿ | ಮೂಲಂಗಿ |
| Root | ಬೇರು | ಬೇರ |
| Seed | ಬೀಜ | ಬೀಂಜ್ |
| Mango | ಮಾವು | ಆಮ್ |
| Papaya | ಪರಂಗಿ | ಪಪ್ಪಾಯಿ |
| Sugarcane | ಕಬ್ಬು | ಹುಕ |
| Garlic | ಬೆಳ್ಳುಳಿ | ನಸುನ |
| Gourd a ash Gourd | (ಗಡುಸಾದ ಸಿಪ್ಪೆಯ-<br>ತರಕಾರಿ)/ಬೂದುಕುಂಬಳ | ಕದ್ದು |
| Bottle Gourd | ಹೀರೆಕಾಯಿ | ತೂರಾಯಿ |
| Snake Gourd | ಪಡವಲಕಾಯಿ | ಚಿಲಿತೂರಾಯಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Grass | ಹುಲ್ಲು | ಘಾಸ್ |
| Hay | ಒಣ ಹುಲ್ಲು | ಸುಕ್ಕಾ ಘಾಸ್ |
| Land | ಭೂಮಿ | ಜಮಿನ್ |
| Maize (corn) | ಜೋಳ (ಕಾಳು) | ದಾನಾ |
| Onion | ಈರುಳ್ಳಿ | ಪ್ಯಾಜ್ |
| Pea | ಬಟಾಣಿ | ವಟನಾ |
| Pipal | ಆಲ | ಅದರಕ್ |
| Plough | ನೇಗಿಲು | ಮಡಕಿ |
| Potato | ಆಲೂಗಡ್ಡೆ | ಆಲೂ |
| Rice | ಅಕ್ಕಿ | ಚಾವರ |
| Saw | ಗರಗಸ | ಗರಗಸ |
| Queen | ರಾಣಿ | ರಾಣಿ |
| Town | ಪಟ್ಟಣ | ಬಡಾಗಾವಂ |
| War | ಯುದ್ಧ/ಸಮರ | ಲಾಯಾಯಯಿ |
| Bomb | ಸ್ಫೋಟಕ | ಬಾಂಬ |
| Bow | ಬಿಲ್ಲು | ಬಿಲ್ಲ |
| Club | ದೊಣ್ಣೆ | ಗೊಬೆ |
| Dfeat | ಸೋಲು/ಅಪಜಯ | |
| Enemy | ಶತ್ರು | ದುಸ್ಮನ್ |
| Gun | ಬಂದೂಕು | ಬಂದೂಕ್ |
| Plot, conspiracy | ಸಂಚು/ರಹಸ್ಯ ಕಾರ್ಯಾಚರಣೆ | ಗುಪ್ತದಲ್ |
| State | ರಾಜ್ಯ | ಮುಲ್ಕ್ |
| Village | ಗ್ರಾಮ/ಹಳ್ಳಿ | ಖೇಡಾ |
| Arrow | ಬಾಣ | ತೀರ |
| Border | ಗಡಿರೇಖೆ | ಹದ್ದ |
| Bullet | ಗುಂಡು | ಗೋಲಿ |
| Dagger | ಬಾಕು | ಚೂರಿ |
| Fort | ಕೋಟೆ | ಕಿಲ್ಲಾ |
| Pirate | ಕಡಲುಗಳ್ಳ | ದರಿಯಾಮೆ ಚೊರಿಕರ್ |
| Seige | ಮುತ್ತಿಗೆ | ಘೇರಾಲೋಳ್ |
| Spear | ಭರ್ಜಿ | ಭರ್ಚಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Threat | ಬೆದರಿಕೆ | ಡರಾಪಯಿ |
| War | ಯುದ್ಧ/ಸಮರ | ಜಂಗ್,ಲಡಾಯಿ |
| Seige | ಮುತ್ತಿಗೆ | ಘೇರಾಲೋಳ್ |
| Spear | ಭರ್ಜಿ | ಭರ್ಚಿ |
| Threat | ಬೆದರಿಕೆ | ಡರಾಪಯಿ |
| War | ಯುದ್ಧ/ಸಮರ | ಜಂಗ್,ಲಡಾಯಿ |
| Security | ಭದ್ರತೆ | ಧೇಖಬಾಲ್ |
| Soldier | ಸೈನಿಕ | ಸಿಫಾಯಿ |
| Sword | | ಕತ್ತಿ ಹತಾಗ, ಹತಿಯರ್ |
| Victory | ಜಯ | ಜಿತಗಾ |
| Weapon | ಆಯುಧ | ಹತಿಯಾರ್ |
| Accused | ಆಪಾದಿತ | ಗುನ್ಹೆಗಾರ್ |
| Agriiment | ಒಪ್ಪಂದ | ಕಾರರ್ |
| Bail | ಜಾಮೀನು | ಜಾಮೀನ್ |
| Court | ನ್ಯಾಯಲಯ | ಕೋರ್ಟ |
| Handcuffs | ಕೈಕೋಳ | ಬೇಡಿ |
| Innocent | ನಿರಪರಾಧಿ | ಗುನ್ಹೆಗಾರ್ |
| Judgment | ತೀರ್ಪು | ಫೈಸಲಾ |
| Case | ಪ್ರಕರಣ | ದೇಸ್ |
| Divorce | ವಿಚ್ಚೇದನ | ತಲಾಕ |
| Imprisonment | ಭಂದನ | ಬಿತ್ತರಮೊಲಿನ |
| Judge | ನ್ಯಾಯಮೀರ್ತಿ | ಜಡ್ಜ್ |
| Lack-up | ಲಾಕಪ್ | ಬಿತ್ತರಮೊಲಿನ |
| Village council- | | |
| (Panchayath) | ಗ್ರಾಮಪಂಚಾಯಿತಿ | ಜಮಾತ್ |
| Property | ಆಸ್ತಿ | ಆಸ್ತಿ |
| Prisoner | ಖೈದಿ | ಖೈದಿ |
| Tax | ತೆರಿಗೆ/ಕರ | ಹಪ್ತ, ಫರತಟ್ಟಿ |
| Thief | ಕಳ್ಳ | ಚೋಟ್ಟ |
| Penalty | ಧಂಡ | ದಂಡ |
| Prison | ಸೇರೆವಾಸ/ಜೈಲು | ಸಜಾಬೇಗಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Punishment | ಶಿಕ್ಷೆ | ಸಜಾ |
| Theft | ಕಳ್ಳತನ | ಚೊರಿ |
| Witness | ಸಾಕ್ಷಿ | ಸಾಕ್ಷಿ |
| Bell | ಘಂಟೆ | ಘಂಟಿ |
| Demon | ರಾಕ್ಷಸ | ಭೂತ್ |
| Festival | ಹಬ್ಬ | ಈದ್ |
| God | ದೇವರು | ಅಲ್ಲಾ |
| Heaven | ಸ್ವರ್ಗ | ಜನ್ನತ್ |
| Idol | ಮೂರ್ತಿ | ಮೂತಿ |
| Temple | ದೇವಸ್ಥಾನ | ಗುಡಿ |
| Conch | ಶಂಖ | ಬೂಂಗಾ |
| Fast | ಉಪವಾಸ | ರೋಜಾ |
| Garland | ಹುಮಾಲೆ | ಪೂಲವಾನಿ |
| Goddess | ದೇವತೆ/ದೇವಿ | ಮಾತಾ |
| Holy Place | ಪವಿತ್ರ ಸ್ಥಳ | ಪಾಕ್‌ಜಾಗಾ |
| Incense stick | ಅಗರಬತ್ತಿ/ಊದುಕಡ್ಡಿ | ಉದಬತ್ತಿ |
| Worship | ಪೂಜೆ | ಪೂಜಾ |
| Ball | ಚೆಂಡು | ಚಂಡು |
| Chess | ಚದುರಂಗ | ಖೇಲ್,ಕಿಲಾನಕಾ |
| Book | ಪುಸ್ತಕ | ಕಿತಾಬ್ |
| Collge | ಕಾಲೇಜು | ಕಾಲೆಜ್ |
| Examination | ಪರೀಕ್ಷೆ | ಪರಿಕ್ಷಾ |
| Ink | ಶಾಯಿ | ಮಸಿ |
| Language | ಭಾಷೆ | ಬಾತ |
| Letter | ಅಕ್ಷರ/ಪತ್ರ | ಕಾಗದ್ |
| Paper | ಕಾಗದ | ಹಾಳಿ |
| School bag | ಸ್ಕೂಲ್ ಬ್ಯಾಗ್ | ಪಾಠಿಚಿಲಾ |
| Teacher | ಶಿಕ್ಷಕ | ಮಾಸ್ತರ್ |
| Chalk | ಶಿಮೇಸುಣ್ಣ | ಖಡ |
| Education | ಶಿಕ್ಷಣ | ಶಾಲಿ |
| Illiterate | ಅನಕ್ಷರಸ್ಥ | ಅನಪಾಡ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Inkpot | ಶಾಯಿಕುಡಿಕೆ | ಮಸಿಕಿ ಬಾಟಲಿ |
| Literate | ಅಕ್ಷರಸ್ಥ | ಸಿಖಾಪಾಡ್ |
| Notebook | ನೋಟುಪುಸ್ತಕ/ ಕಿರು ಪುಸ್ತಕ | ನೋಟ್ ಬುಕ್ |
| School | ಶಾಲೆ | ಶಾಲಿ |
| Slate | ಕಪ್ಪು ಹಲಗೆ | ಪಾಠಿ |
| Affection | ಪ್ರೀತಿ | ಪ್ಯಾರ್ |
| Courage | ಧೈರ್ಯ | ದಿಮ್ಮಕ್ |
| Dear | ಪ್ರೀತಿಯ/ನಲ್ಮೆಯ | ಮಾಹಬೂಬ್ |
| Grief | ವ್ಯಸನ | ಆದಿ |
| Happiness | ಸಂತೋಷ್ | ಖೂಷಿ |
| Hunger | ಹಸಿವು | ಬುಕಾ |
| Jealousy | ಅಸೂಯೆ | ದಾವಾ |
| Mimory | ಜ್ಞಾಪಕ/ನೆನಪು | ಯಾದ್ |
| Praise | ಮೆಚ್ಚುಗೆ | ಪಸಂದ್ |
| Respect | ಗೌರವ | ಇಜ್ಜತ್ |
| Sorrow | ದುಃಖ | ದುಃಖಿ |
| Sympathy | ಕರುಣೆ | ಪಸತಾನಾ |
| Truth | ಸತ್ಯ | ಖರಿ |
| Virtue | ಸದ್ಗುಣ | ಬಡಾದಿಲ್ |
| Anger | ಕೋಪ | ಗುಸಾ |
| Danger | ಅಪಾಯ | ಖತರಾ |
| Doubt | ಅನುಮಾನ | ಶಕ್ |
| Habit | ಅಭ್ಯಾಸ/ಹವ್ಯಾಸ | ಆದತ್ |
| Hatred | ದ್ವೇಷ | ದುಷ್ಮಾನಿ |
| Insult | ಅಮಹೇಳನ/ಅವಮಾನ | ಮಪಗಿರಿ |
| Love | ಪ್ರೇಮ | ಪ್ಯಾರ |
| Pain | ನೊವು | ದರ್ಧ |
| Pride | ಗೌರವ | ಫಕರ್ |
| Shame | ಅವಮಾನ | ಬೆಇಜ್ಜತ್ |
| Strength | ಶಕ್ತಿ | ತಾಕತ್ |
| Temper | ಕೋಪ | ಗುಸ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Vice | ಸುರಾಚಾರ/ದುರ್ಗುನ | ಖರಾಬ |
| Weakness | ದೌರ್ಬಲ್ಯ | ಕಮಜೂರ್ |
| Government | ಸರ್ಕಾರ | ಸರಕಾ |
| Boundary | ಗಡಿರೇಖೆ | ಹದ್ದ |
| Country | ದೇಶ | ಮುಲಕ್ |
| District | ಜಿಲ್ಲೆ | ಜಿಲ್ಲಾ |
| King | ರಾಜ | ರಾಜಾ |
| Minister | ಮಂತ್ರಿ | ಮಂತ್ರಿ |
| Assembky | ಸಭೆ | ಜಮಾತ |
| City | ನಗರ | ಗಾಂವ್ |
| Crown | ಕಿರೀಟ | ತಾಜ್ |
| Flag | ಬಾವುಟ | ಝುಂಡಾ |
| Kingdom | ರಾಜ್ಯ | ಗಾಂವ್ |
| Nation | ರಾಷ್ಟ್ರ | ದೇಶ್ |
| Aluminum | ಅಲ್ಯೂಮಿನಿಯಂ | ಜರ್ಮನ್ |
| Brass | ಹಿತ್ತಾಳೆ | ಪಿತ್ತಲ್ |
| Bronze | ಕಂಚು | ತಾಂಬಾ |
| Coin | ನಾಣ್ಯ | ಪೈಸಾ |
| Copper | ತಾಮ್ರ | ತಾಂಬಾ |
| Coral | ಹವಳ | ಮೋತಿ |
| Diamond | ವಜ್ರ | ಹೀರಾ |
| Emerald | ಪಚ್ಚೆ | ಪಚ್ಚ |
| Gem | ಹರಳು | ಕಂಕರ್ |
| Glass | ಗಾಜು | ಕಾಂಚ್ |
| Gold | ಚಿನ್ನ | ಸೋನಾ |
| Iron | ಕಬ್ಬಿಣ | ಲವ್ವಾ |
| Acting | ನಟನೆ | ನಾಟಕ |
| Audience | ಪ್ರೇಕ್ಷಕರು | ಮೊಖಿನ |
| Cymbals | ತಾಳ | ತಾಳ್ |
| Dancer | ನೃತ್ಯಗಾರ/ನೃತ್ಯಗಾತಿ | ನಾಚನಾರ್/ನಾಚನಾರಿ |
| Drum | ಡೋಲು | ಡೊಲ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Clarion | ಕಹಳೆ | ಬಜಾಯಿಕ |
| Dance | ನೃತ್ಯ | ನಾಚ್ |
| Drama | ನಾಟಕ | ನಾಟಕ್ |
| Flute | ಕೊಳಲು | ಕೊಳಲ |
| Music | ಸಂಗೀತ | ಗೀದ |
| Puppet Show | ಸೂತ್ರದ ಗೊಂಬೆಯಾಟ | ಖೇಲ್ |
| Scene (Drama) | ದೃಶ್ಯ (ನಾಟಕ) | ನಾಟಕ |
| Sitar | ಸಿತಾರ್ ವಾದ್ಯ | ಸಿತಾರ |
| Stage | ರಂಗಭೂಮಿ | ಮಂಡವಾ |
| Tune | ರಾಗ | ರಾಗ್ |
| Lullaby | ಜೋಗುಳ | ಗೀತ್ |
| Player | ವಾಕದ/ವಾದಕಿ | ಜಬ್ಬನಾದ |
| Sarangi | ಸಾರಂಗಿ | ಸಾರಂಗ ಮಂಗಿ |
| Singer | ಹಾಡುಗಾರ/ಹಾಡುಗಾರ್ತಿ | ಗಾಯಕ್ |
| Song (Folk, Modern) | ಹಾಡು (ಜಾನಪದ/ಆಧುನಿಕ) | ಗಿಧ್ |
| Tambura | ತಂಬೂರಿ | ತಂಬೂರಿ |
| Village show (yatra) | ಗ್ರಾಮೀಣ ಪ್ರದರ್ಶನ | ಖೇಡಾ |
| Honey | ಜೇನುತುಪ್ಪ | ಚತ್ತಾಕಾರಸ್ |
| Jaggery | ಬೆಲ್ಲ | ಗತಡ |
| Jar (for storing water) | ನೀರು ತುಂಬುವಪಾತ್ರೆ | ಹಾಂಡಾ |
| Kichen | ಅಡುಗೆ | ಪಕಾನಘರ್ |
| Knife | ಚಾಕು | ಚಾಕೂ |
| Lid | ಮುಚ್ಚುಳ | ಕೋಟು,ಕವಚ |
| Matchstick | ಬೆಂಕಿಕಡ್ಡಿ | ಕಾಡಿಪೆಟಿ |
| Meat | ಮಾಂಸ | ಹೇರಾ |
| Milk | ಹಾಲು | ದೂದ |
| Mortar | ಗಾರೆ | ಮಾಲ |
| Oil | ಎಣ್ಣೆ | ತೇಲ |
| Oven (Tan Door) | ಒಲೆ | |
| Paddy | ಬತ್ತ | ದಾನ್ |
| Pan | ಅಗಲವಾದ ಪಾತ್ರೆ | ಬಾಣಲ್ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Paan box/bag | ತಾಂಬೂಲದ ಪೆಟ್ಟಿಗೆ | ಚೀಲ |
| Papad | ಹಪ್ಪಳ | ಪಾಪಡ್ |
| Pestle | ಒನಕೆ | ಮುಸಲ್ |
| Pickle | ಉಪ್ಪಿನಕಾಯಿ | ಅಚಾರ್ |
| Plate (metal) | ತಟ್ಟೆ (ಲೋಹ) | ಬಾಂಡ್ |
| Pot | ಮಡಿಕೆ | ಹಾಂಡಿ |
| Rollin Board (for Chapati) | ಚಪಾತಿ | ಮಣೆ |
| Rollin Board (for Chapati) | ಚಪಾತಿ | ಲಟ್ಟಣಿಗೆ |
| Salt | ಉಪ್ಪು | ನಮಕ್ |
| Scissors | ಕತ್ತರಿ | ಕೈಚಿ |
| Wooden/metal swat | ಮರದ/ಲೋಹದ ಪೀಠ | ಕುರ್ಚಿ |
| Smoke | ಹೊಗೆ | ದುಹಾ |
| Spice | ಸಾಂಬಾರ ಪದಾರ್ಥ | ತೀಜಾ |
| Spoon | ಚಮಚ | ಚಮಚಾ |
| Steam | ಹಬೆ | ಭಾಪ್ |
| Strainer | ಜರಡಿ | ಚನ್ನಿ |
| Anklet | ಕಾಲ್ಕಡಗ | ಹಾಲ್‌ಗಡಗಾ |
| Bangle | ಬಳೆ | ಚುಡಿಯಾ |
| Blouse | ರವಿಕೆ | ಪೊಲಕಾ |
| Button | ಗುಂಡಿ | ಗುಂಡಿ |
| Cap | ಟೋಪಿ,ಟೋಪಿಗೆ | ಟಟೋಪಪಿ |
| Cloth | ಬಟ್ಟೆ | ವಣ್ಣಾ |
| Comb | ಬಾಚಣಿಗೆ, ಹಣಿಗೆ | ಕಂಗಿ |
| Dress (male & Female) | ಉಡುಪು (ಪುರುಷ/ಮಹಿಳೆ) | ವಣ್ಣಾ |
| Ear-ring | ಕಿವಿಯೋಲೆ | ಕಾನ್‌ಮೇಕಾ ರಿಂಗ್ |
| Garland | ಹಾರ | ಪೂಲಕಾ ಹಾರ್ |
| Loin Cloth | ಕಾಸೆ/ಲಂಗೋಟಿ | ಲಂಗೊಟಿ |
| Mirror | ಕನ್ನಡಿ | ಐನಾಕ್ |
| Necklace | ಕಂಠೀಹಾರ | ನಕಲೇಸ |
| Needle | ಸೂಜಿ | ಸೂಯಿ |
| Nose-ring | ಮೂಗುತಿ | ನಾಕಮೇಕಾ ಬೂಗಡಿ |

| English words | ಕನ್ನಡ ಪದಗಳು | ಚಪ್ಪರ್‌ಬಂದ್ ಪದಗಳು |
|---|---|---|
| Ornaments | ಅಭರಣಗಳು | ಗೈನಾ |
| Rain hat (male of leaves) | ಟೋಪಿ | ಟೋಪಿ |
| Ring | ಉಂಗುರ | ಹುಂಟಿ |
| Sandalwood | ಶ್ರೀಗಂಧ | ಸಂದಲಕಿ ಖಾಟಿ |
| Sari | ಸೀರೆ | ದಂಡಹೂ |
| Shawl | ಶಾಲು | ಖತರಾ |
| Shoe | ಶೂ/ಪಾದರಕ್ಷೆ | ಚಪ್ಪಲ್ |
| Soap | ಸಾಬೂನು | ಸಾಬೂನ್ |
| Socks | ಸಾಬೂನು | ಸಾಬೂನ್ |
| Stick | ಕೋಲು | ಬಡಗಿ |

## ಸಂಬಂಧ ವಾಚಕ ಪದಗಳು

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Boy | ಲೋಂಡ್ವಾ | ಹುಡುಗ |
| Girl | ಲೋಂಡಿಯಾ | ಹುಡುಗಿ |
| Father | ಬಾಪು, ಆಬಾ, ಬಾಬಾ | ತಂದೆ, ಅಪ್ಪ |
| Mother | ಮಾಯಿ, ಅಮ್ಮ | ತಾಯಿ, ಅಮ್ಮ |
| Grand father | ಆಝೂ | ಅಜ್ಜ (ತಂದೆಯ ತಂದೆ) |
| Grand mother | ಆಝಿ | ಅಜ್ಜಿ (ತಂದೆಯ ತಾಯಿ) |
| Grand father | ನಾನ | ಅಜ್ಜ (ತಾಯಿಯ ತಂದೆ) |
| Grand mother | ನಾನಿ | ಅಜ್ಜಿ (ತಾಯಿಯ ತಾಯಿ) |
| Husband | ಮುನ್ನಸ | ಪತಿ, ಗಂಡ |
| Wife | ಮ್ಹೆರಿ | ಪತ್ನಿ, ಹೆಂಡತಿ |
| Son | ಪೋತ್ | ಮಗ |
| Daughter | ಧೀ | ಮಗಳು |
| Grand son | ನಾಥೀ | ಮೊಮ್ಮಗ |
| Grand daughter | ನಾಥನಿ | ಮೊಮ್ಮಗಳು |
| Aunty | ಫುಪ್ಪು | ಸೋದರತ್ತೆ |
| Uncle | ಫುಪ್ಪ | ಸೋದರ ಮಾವ |
| Elder brother | ಜತೋಡೆ | ಹಿರಿಯ ಅಣ್ಣ |

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Women | ಬುಥಾನಿ | ಹೆಣ್ಣು |
| Brother | ದಾದಾ | ಅಣ್ಣ |
| Sister in law | ಬಾಜಿ | ಅತ್ತಿಗೆ |
| Sister | ಬೈನ್ | ತಂಗಿ |
| Younger brother | ಭಾಯಿ | ತಮ್ಮ |
| Mother in law | ಸಾಸ್ | ಅತ್ತೆ |
| Father in law | ಸಸುರಾ | ಮಾವ |
| Baby | ಲರಕ | ಮಗು |

## ಮನುಷ್ಯನ ಅಂಗಾಂಗಕ್ಕೆ ಸಂಬಂಧಿಸಿದ ಪದಗಳು

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Head | ಮುಂಡ | ತಲೆ |
| Lips | ಸುಂಡಾ | ತುಟಿ |
| Lap | ಜಾಂಗ | ತೊಡೆ |
| Arm | ರುಟ್ಟಾ | ತೋಳು |
| Gaw | ದಾಡ್ | ದವಡೆ |
| Nerv | ನಸ್ | ನರ |
| Toungue | ಜೀಬ್ | ನಾಲಿಗೆ |
| Mouth | ಮು | ಬಾಯಿ |
| Back | ಪೀಟ್ | ಬೆನ್ನು |
| Finger | ಬೊಟ್ | ಬೆರಳು |
| Shoulder | ಕಾಂದಾ | ಭುಜ |
| Chest | ಛಾತಿ | ಎದೆ |
| Eye | ಆಂಕ್ | ಕಣ್ಣು |
| Forehead | ತಪಾರ್ | ಹಣೆ |
| Hand | ಹಾತ್ | ಕೈ |
| Nail | ನುಕ್ಕ | ಉಗುರು |
| Feet | ತರವಾ | ಪಾದ |
| Leg | ಗೊಡ | ಕಾಲು |
| Ear | ಕಾನ್ | ಕಿವಿ |
| Hair | ಬಾಲ್ | ಕೂದಲು |

| | | |
|---|---|---|
| Chick | ಗಾಲ್ | ಕೆನ್ನೆ |
| Skin | ಚಮಡಾ | ಚರ್ಮ |
| Knee | ಗುಡಗಾ | ಮಂಡಿ |
| | ಮುಚ್ಚಾ | ಮೀಸೆ |
| Nose | ನಾಕ್ | ಮೂಗು |
| Brain | ಭೇಜಾ | ಮೆದುಳು |
| Blood | ಖೂನ್ | ರಕ್ತ |
| Teeth | ದಾತ್ | ಹಲ್ಲು |
| Heart | ದಿಲ್ | ಹೃದಯ |

### ಆಹಾರಕ್ಕೆ ಸಂಬಂಧಿಸಿದ ಪದಗಳು

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Meat | ರಯಂಕ/ಹೇರ | ಮಾಂಸ |
| Wine | ಕರ್ಚ/ಕರೇಹ | ಸರಾಯಿ |
| Bread | ಟಪಿ | ಬ್ರೆಡ್ |
| Turmic | ಹರದ್ | ಅರಿಶಿಣ |
| Rice | ಚಾವಲ್ | ಅನ್ನ |
| Corn | ದಾಲ್ | ಸಾಂಬಾರು |
| Sweet | ಮಿಟ್ಟಾ | ಸಿಹಿ |
| Ghee | ಘೀ | ತುಪ್ಪ |
| Bread | ರೂಟಿ | ರೊಟ್ಟಿ |

### ಉಡುಪಿಗೆ ಸಂಬಂಧಿಸಿದ ಪದಗಳು

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Shirt | ಅತಗೈ | ಅಂಗಿ |
| Saree | ದಂಡಿಯಾ | ಸೀರೆ |
| Blouse | ಝುಂಡರ | ಕುಪ್ಪಸ |
| Dhoti | ಧೂತಿ | ಪಂಚೆ |
| Bangle | ಚೂರಿಯಾಂ | ಬಳೆ |

## ವಾರಗಳು

| English weeks | ಚಪ್ಪರ್‌ಬಂದ್ ವಾರಗಳು | ಕನ್ನಡ ವಾರಗಳು |
|---|---|---|
| Monday | ಸೊಮ್ಮಾರ್ | ಸೋಮವಾರ |
| Tuesday | ಮಂಗಲ್ | ಮಂಗಳವಾರ |
| Wednesday | ಬುಧ್‌ವಾರ್ | ಬುಧವಾರ |
| Thursday | ಚಿಪೆ | ಗುರುವಾರ |
| Friday | ಜುಮ್ಮಾ | ಶುಕ್ರವಾರ |
| Sataurday | ಸಂಚರ | ಶನಿವಾರ |
| Sunday | ಐತರ | ಭಾನುವಾರ |

## ಸಾಮಾನ್ಯ ವಾಕ್ಯಗಳು

| English words | ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|---|
| Had food? | ಖಾನಾ ಬೆಗಾ ಗಾ? | ಊಟ ಆಯಿತ? |
| How are you? | ಕೆನಸಾ ಹೈ? | ಹೇಗಿದ್ದೀರ? |
| What is your name? | ತೂರಾ ನಾಮ್ ತಾ? | ನಿಮ್ಮ ಹೇಸರೇನು? |
| How old are you? | ತೂರಿ ಉಮರ್ ಕತೆತ? | ನಿಮ್ಮ ವಯಸೆಷ್ಟು? |
| which is your village? | ತೂರಾ ಗಾಂವ್ ಕೌನ್ ಸಾ? | ನಿಮ್ಮ ಊರು ಯಾವುದು? |
| God bless you? | ತುಮಕೋ ಆಚ್ಚೆ ಹೊಂದೆ | ನಿಮಗೆ ಒಳ್ಳೆಯದಾಗಲಿ |

## ಚಪ್ಪರ್‌ಬಂದ್ ಸಮುದಾಯದ ವೃತ್ತಿ ಪದಕೋಶ

### ನಾಣ್ಯ ಮಾಡುವುದಕ್ಕೆ ಸಂಬಂಧಿಸಿದ ಪದಗಳು

| ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|
| ಖಾಮ್ | ಅಚ್ಚು |
| ದುಮ್ಡ | ಬಂಗಾರ |
| ಥೈರಿ | ಅಸಲಿ ನಾಣ್ಯ |
| ಚಿಮಟಿ | ಅಚ್ಚು ಹಾಕಲು ಬಳಸುವ ಮಣ್ಣು |
| ಆಗು | ಸುಳ್ಳು ರೂಪಾಯಿ |
| ರಾಂಗ | ಸೀಸ |
| ಕಾಯಿನ | ತವರ |
| ಥೈರಾ | ಚಿಲ್ಲರೆ/ತಾಮ್ರದ ನಾಣ್ಯ |
| ನರೋಟಿ | ಸವುಟು |
| ರಪಟಣಿ | ನಾಣ್ಯಗಳ ಸುತ್ತು ಗೆರೆ ಹಾಕುವ ಚೂಪಾದ ಚಾಕು |

### ಗುಪ್ತ ಭಾಷೆಗೆ ಸಂಬಂಧಿಸಿದ ಪದಗಳು

| ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|
| ಖಾಗ್ಡ | ಗುಂಪಿನ ನಾಯಕ |
| ಭೊಂದರ | ನಕಲಿ ನಾಣ್ಯ ಚಲಾವಣೆ ಮಾಡುವವನು |
| ಹಂಡಿವಾಲ | ಗುಂಪಿಗೆ ಸಹಾಯ ಮಾಡುವ ಹುಡುಗ |
| ಗುಟಾರಾ | ಸಾಲ ನೀಡುವ ಶ್ರೀಮಂತ ಚಪ್ಪರ್‌ಬಂದ್ |
| ಭಾತು | ಚಪ್ಪರ್‌ಬಂದ್ |
| ಕಜಾವ | ಅಪರಿಚಿತ |
| ಬೈಗೀ | ಮಾರುವೇಷ |
| ಗಿಮಾಲೊ | ಬಚ್ಚಿಡು |
| ತಬಬೊ | ಓಡಿ ಹೋಗು |
| ಜೋಡಿ ಆವತೀ ಹೈ | ಸಂಗಡಿಗರು ಬರುತ್ತಿದ್ದಾರೆ |
| ತೆಕೋಲಿನ/ ಧರಲೀಸಯಿ | ಸೆರೆಯಾದರು |
| ನಕ್ಕೊದೇವ್ | ಕೊಡಬೇಡಿ |

| | |
|---|---|
| ಡೊಂಕ | ಮನೆ |

| ಚಪ್ಪರ್‌ಬಂದ್ ಪದಗಳು | ಕನ್ನಡ ಅರ್ಥ |
|---|---|
| ರೆಂಡ | ರಸ್ತೆ/ದಾರಿ |
| ಪಾನ | ರಸ್ತೆಯ ಮೇಲೆ ಮಾಡಿದ ಚಿಹ್ನೆ ಮತ್ತು ಗುರುತುಗಳು |
| ನನ | ಹಳ್ಳಿ |
| ನಾವಡಿ | ಪೋಲಿಸ್ ಸ್ಟೇಷನ್ |
| ಫಾರ್ಸಿ | ಗುಪ್ತ ಭಾಷೆ |
| ಕುತ್ತಾ ಖಪರಾಲಾ | ಸಿಪಾಯಿ |
| ಘೊಟರಿ | ಪ್ರಯಾಣ ಮಾಡುತ್ತಿರುವ ತಂಡ |
| ಘೋಟೀ | ಪ್ರಯಾಣ |
| ಚಿಬಡಾ | ಅಮಲದಾರ |
| ಖಾಮ ಭುರಲೋ | ಸುಳ್ಳು ನಾಣ್ಯ ಮಾಡು |
| ನೈರ | ಕೂಡು ಸ್ಥಳ |
| ತೊವಾಗಯಾ | ಪೋಲಿಸರ ಕೈಗೆ ಸಿಗಲಿಲ್ಲ |
| ಖಪರಾಲಾ ಆಂಕೆ ಹೇರಗಯಾ | ಪೋಲಿಸರ ಕಣ್ಣು ನಮ್ಮ ಮೇಲಿದೆ |
| ಕೊನಸಾ ಬಿ ಬೋಲ್‌ಮತ್ | ಏನೂ ಹೇಳಬೇಡ |
| ಜಿನೀ ಬೋಲೆ | ಮಾತಾಡಿ ಹೊರಗೆ ಹಾಕಬೇಡ |
| ನೈರ ಬುದ್ದಿ | ಕೂಡು ಸ್ಥಳಕ್ಕೆ ಹೋಗು |
| ಚಿಬಡಾ ಆಯಾ ಹೈ, ತುಮರೀ ತುಮರೀ ಜಾಗಾ ಹುಶಾರ್ ರಹೋ | ಪೋಲಿಸ್ ಅಮಲದಾರ ಬಂದಿದ್ದಾನೆ, ತಮ್ಮ ತಮ್ಮ ಜಾಗದಲ್ಲಿ ಜಾಗ್ರತೆಯಿಂದ ಇರಿ |

## ಪರಾಮರ್ಶನ ಗ್ರಂಥಗಳು

ಅಮಚವಾಡಿ ಅರಸು, *ಆಫ್ರಿಕದ ಧರ್ಮ ಮತ್ತು ಸಂಸ್ಕೃತಿ* (ಬೆಂಗಳೂರು: ಕನ್ನಡ ಅಲೆಮಾರಿಗಳ ಸ್ಥಿತಿಗತಿ (ಹಂಪಿ: ಕನ್ನಡ ವಿಶ್ವವಿದ್ಯಾಲಯ: ೨೦೦೫)

ಭೈರಪ್ಪ ಕೆ, *ಪಾಶ್ಚಿಮಾತ್ಯ ಹಾಗೂ ಭಾರತೀಯ ಸಾಮಾಜಿಕ ಚಿಂತನೆ* (ಬೆಂಗಳೂರು: ಸಪ್ನ ಬುಕ್‌ಹೌಸ್: ೨೦೦೬)

ಬೋರಲಿಂಗಯ್ಯ ಹಿ ಚಿ, *ವಿಸ್ಮೃತಿ ಮತ್ತು ಸಂಸ್ಕೃತಿ* (ಬೆಂಗಳೂರು: ಸಿವಿಜಿ ಪಬ್ಲಿಕೇಷನ್ಸ್: ೨೦೦೧)

ಚಂದ್ರಪೂಜಾರಿ ಎಂ, *ಸಮಾಜ ಸಂಶೋಧನೆ* (ಹಂಪಿ: ಪ್ರಸಾರಂಗ: ಕನ್ನಡವಿಶ್ವವಿದ್ಯಾಲಯ: ೨೦೧೧)

ಚಂದ್ರಪೂಜಾರಿ ಎಂ, *ಸಮಾಜ ಏಕೆ? ಹೇಗೆ?* (ಹಂಪಿ: ಪ್ರಸಾರಂಗ: ಕನ್ನಡವಿಶ್ವವಿದ್ಯಾಲಯ: ೨೦೧೧)

ದೊಡ್ಡಮನಿ ಲೋಕರಾಜ, *ಸಿಂಧೋಳ್ಳ ಸಮುದಾಯ* (ಕೂಡ್ಲಿಗಿ: ಲಿಂಗರಾಜ ಅಕ್ಷಯ ಪ್ರಕಾಶನ: ೨೦೧೧)

ದ್ವಾರಕಾನಾಥ್ ಸಿ ಎಸ್, *ಸಂಕುಲ-ಹಿಂದುಳಿದ ವರ್ಗಗಳ ಆಯೋಗದ ತೆರೆದ ವರದಿಯ ಆಯ್ದ ಭಾಗಗಳು* (ಬೆಂಗಳೂರು: ಅವಿರತ ಪುಸ್ತಕ: ೨೦೧೨)

ಗಂಗಾನಾಯಕ್ ಕೆ ಎನ್ (ಪ್ರಸಂ), *ಸಮಾಜಶಾಸ್ತ್ರ* (ಮೈಸೂರು: ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿಶ್ವವಿದ್ಯಾನಿಲಯ: ೨೦೧೨)

ಗಂಗಾಧರ ದೈವಜ್ಞ, *ಬುಡಕಟ್ಟು ಸಮಾಜ-ಹುಟ್ಟು-ಸಾವಿನ ನಡುವೆ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೧೫)

ಕುಮುದಾ ಬಿ ಸುಶೀಲಪ್ಪ, *ಹಕ್ಕಿಪಿಕ್ಕಿ* (ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ: ೨೦೦೮)

ಮಲ್ಲಿಕಾರ್ಜುನ ಬಿ ಮಾನ್ಪಡೆ, *ತಂತಿಬೇಲಿಯೊಳಗಿನ ಜಗತ್ತು* (ಶಿವಮೊಗ್ಗ: ಗೀತಾಂಜಲಿ ಪುಸ್ತಕ ಪ್ರಕಾಶನ: ೨೦೧೪)

ಮೇತ್ರಿ ಕೆ ಎಂ, *ಅಲಕ್ಷಿತರ ಸಮಾಜಶಾಸ್ತ್ರ ಎಂ.ಎ. ಪ್ರಥಮ ಕೋರ್ಸ್-೪* (ಹಂಪಿ: ದೂರಶಿಕ್ಷಣ ನಿರ್ದೇಶನಾಲಯ: ಕನ್ನಡ ವಿಶ್ವವಿದ್ಯಾಲಯ: ೨೦೧೦)

ಮೇತ್ರಿ ಕೆ ಎಂ, *ಬುಡಕಟ್ಟು ಕುಲ ಕಸಬುಗಳು* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೧೨)

ಮೋಹನ್ ಜಿ ಎನ್ (ಅನು), *ಬರ ಅಂದ್ರೆ ಎಲ್ಲರಿಗೂ ಇಷ್ಟ* (ಬೆಂಗಳೂರು: ಅಭಿನವ: ೨೦೧೨)

ಮೋಹನ್ ಕೃಷ್ಣ ರೈ ಕೆ (ಸಂ), *ಸಮಾಜ ಅಧ್ಯಯನ-ಸಮಾಜ ವಿಜ್ಞಾನಗಳ ಸಂಶೋಧನ ಪತ್ರಿಕೆ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೧೫)

ನಂಜುಮ್ಮಣ್ಣಿ ಎಂ, *ಸಮಾಜಶಾಸ್ತ್ರ ಪರಿಚಯ, ಭಾಗ-೧* (ಮೈಸೂರು: ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿಶ್ವವಿದ್ಯಾನಿಲಯ: ೧೯೭೪)

ಪ್ರಭಾಕರ ಎ ಎಸ್, *ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೦)

ಪ್ರಭಾಕರ ಎ ಎಸ್, *ಬುಡಕಟ್ಟು ಅಭಿವೃದ್ಧಿ ಮೀಮಾಂಸೆ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೪)

ಪ್ರಭಾಕರ ಎ ಎಸ್ (ಸಂ), *ಆದಿವಾಸಿ ಆಖ್ಯಾನ* (ಹೊಸಪೇಟೆ: ಸಿದ್ಧಾರ್ಥ ಪ್ರಕಾಶನ: ೨೦೦೬)

ಫಕೀರ್ ಮುಹಮ್ಮದ್ ಕಟ್ಪಾಡಿ, *ಸೂಫಿಸಂತರು* (ಬೆಂಗಳೂರು: ಅಂಕಿತ ಪುಸ್ತಕ: ೨೦೧೦)

ರಹಮತ್ ತರೀಕೆರೆ, *ಕರ್ನಾಟಕದ ಸೂಫಿಗಳು* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೧)

ರಾಜಪ್ಪ ದಳವಾಯಿ, *ಹಕ್ಕಿ ಪಿಕ್ಕಿಯರ ಸಂಸ್ಕೃತಿ* (ಬೆಂಗಳೂರು: ಕನ್ನಡ ಸಾಹಿತ್ಯ ಅಕಾಡೆಮಿ: ೧೯೯೩)

ಶಂಕರ್ ರಾವ್ ಚ ನ, *ಸಾಮಾನ್ಯ ಸಮಾಜಶಾಸ್ತ್ರ* (ಮಂಗಳೂರು: ಜೈ ಭಾರತ ಪ್ರಕಾಶನ: ೨೦೧೦)

ಶ್ರೀನಿವಾಸ ಎಲ್ (ಸಂ), *ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮುದಾಯಗಳು* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೧೦)

ತಾರಿಹಳ್ಳಿ ಹನುಮಂತಪ್ಪ (ಸಂ), *ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೧೨)

ವೆಂಕಟಸುಬ್ಬಯ್ಯ ಜಿ (ಸಂ), *ಕನ್ನಡ-ಕನ್ನಡ-ಇಂಗ್ಲೀಷ್ ನಿಘಂಟು* (ಬೆಂಗಳೂರು: ಐ ಬಿ ಎಚ್ ಪ್ರಕಾಶನ: ೨೦೧೨)

*ವಿಜಾಪುರ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೨-೨೦೧೩* (ವಿಜಯಪುರ: ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ: ೨೦೧೩)

ವೆಂಕಟೇಶ್ ಎಚ್ ಎಲ್ (ಸಂ), *ಭಾರತೀಯ ಸಮಾಜ ಎಂ ಎ ಪ್ರಥಮ ಕೋರ್ಸ್-೨* (ಹಂಪಿ: ದೂರಶಿಕ್ಷಣ ನಿರ್ದೇಶನಾಲಯ: ಕನ್ನಡ ವಿಶ್ವವಿದ್ಯಾಲಯ: ೨೦೧೦)

**ನಿಯತಕಾಲಿಕೆಗಳು**

ಬೋರಲಿಂಗಯ್ಯ ಹಿ ಚಿ, ಪ್ರಭಾಕರ ಎ ಎಸ್ (ಸಂ), *ಬುಡಕಟ್ಟು ಅಧ್ಯಯನ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೪)

ಬೋರಲಿಂಗಯ್ಯ ಹಿ ಚಿ, ಪ್ರಭಾಕರ ಎ ಎಸ್ (ಸಂ), *ಬುಡಕಟ್ಟು ಅಧ್ಯಯನ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೭)

ಕೇಶವನ್ ಪ್ರಸಾದ್ ಕೆ ಮರಟ್ಟಿ (ಸಂ), *ಬುಡಕಟ್ಟು ಅಧ್ಯಯನ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೯)

ಮೇತ್ರಿ ಕೆ ಎಂ, ಚಲುವರಾಜು (ಸಂ), *ಬುಡಕಟ್ಟು ಅಧ್ಯಯನ* (ಹಂಪಿ: ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ೨೦೦೭)

**ಗೆಝೇಟಿಯರ್‌ಗಳು**

ಸೂರ್ಯನಾಥ ಯು ಕಾಮತ್ (ಸಂ), *ಕರ್ನಾಟಕ ರಾಜ್ಯ ಗೆಝೇಟಿಯರ್ ಧಾರವಾಡ ಜಿಲ್ಲೆ* (ಬೆಂಗಳೂರು: ಕರ್ನಾಟಕ ರಾಜ್ಯ ಸರ್ಕಾರ: ೧೯೮೪)

ವೆಂಕಟರಂಗೋ ಕಟ್ಟಿ, *ಗ್ಯಾಝೆಟೀಯರು, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು* (ಹೊಸದೆಹಲಿ: ಏಶಿಯನ್ ಎಜುಕೇಶನಲ್ ಸರ್ವೀಸ್: ೧೯೮೪)

**ಪತ್ರಿಕಾ ವರದಿಗಳು**

ಪ್ರಭಾಕ್ ಕೆ ವಿ, ನೋಟು ಭಾವಿಸಿದ ಚಪ್ಪರ್‌ಬಂದ್ ಬದುಕಿಗಿಲ್ಲ ಸುಖದ ಛಾಪು (ಕನ್ನಡ ಪ್ರಭ ೩೦ ಜುಲೈ ೨೦೧೩ ಪು.೭)

**English**

Anuja, Krishna, *Including the Nomadic and 'Denotified' Tribes in the 12th Five year plan* (Pune: ECONET: 2011)

Arvind Sugur, Patil M A, *English – English-Kannada Royal Dictionary* (Dharwad: Chaitanya Prakashan: 2014)

*Babur-Nama* (Memories of Babur), Translated from the original Turkish text of 'Zahiru'd-din Muhmmad Babur Padshah Ghozi' by Annette Susannah Beverage (Delhi: low price publications: 2014)

Behura N K, Nilakantha Panigrahi, *Tribals and The Indian Constitution* (Jaipur: Rawat Publications: 2006)

Bradley K Hawkish, *Asian Religions* (New Yard: pears or Longman: 2004)

Caral R Ember, Melvin Ember, Peter N Peregrine, *Anthropology* (Delhi: Pearson: 2012)

Channa S M (Ed), *Encyclopaedia of Indian Tribes and castes* (New Delhi: Cosmo Publications; 2004) vol-4

Deepak Kumar Behera, *Contemporary Society Tribal Studies* (New Delhi: Concept Publishing Company: 2014)

Edgar Thurston, *Castes and Tribes of Southern India* (New Delhi: Asian Educational Services: 2001) vol-2

Enthoven R E, *The Tribes and castes of Bombay* (New Delhi: Asian Educational Services: 1990) vol-1

Gayer G W, *Lectures on some criminal Tribes of India and Religious Mendicants* (www.Genreal-Book.net)

Gayer G W, *Some Criminals Tribes of India* (Nagpur: Govt. Press: 1906)

Gunthorpe E J, *Notes on Criminal Tribes* (Bombay: Times of India Steam Press: 1882)

Huddar M G, "Anthropo-Criminological study of chapparband of Bijapur and Dharwad Districts of Karnataka" (Dharwad: Unpublished PhD Thesis Submitted to Karnataka university: 1995)

John Scott, Gordon Marshall (Ed), *Oxford Dictionary of Sociology* (New York: Oxford University Press: 2009)

Joseph Lopreato, Lawrence E Hazelrigg , *Class, Conflict and Mobility* (Jaipur: Rawat Publications : 2005)

Kennedy M, *Criminal Classes in the Bombay Presidency* (Bombay: Govt. Central Press: 1908)

Kothari C R, Gaurav Garg, *Research Methodology* (New Delhi: New Age International Publishers: 2014)

Krishnarwami O R, Ranganatham M, *Methodology of Research in Social Sciences* (Mumbai: Himalaya Publishing House: 2005)

Lawmann's, *Scheduled Castes and Scheduled Tribes Laws* (New Delhi: Kamal Publishers: 2014)

Malli Gandhi, *Denitrified Tribes: Dimensions of Change* (New Delhi: Kanishka Publisher Distributions: 2008)

Malli Gandhi, *Development of Denitrified Tribes: policy and Practice* (Delhi: Sarup & Sons: 2006)

Meena Radhakrishna, *Dishonoured by History –'Criminal Tribes' and British Colonial Policy* (New Delhi: Orient Black swan: 2015)

Nadeem Hasnain, *Indian Anthropology* (Delhi: Palaka Prakashan: 2011)

Nadeem Hasnain, *Tribal India* (Delhi: Palaka Prakashan: 2011)

Ram Ahuja, *Criminology* (Jaipur: Rawat Publications: 2014)

Ram Ahuja, *Research Methods* (Jaipur: Rawat Publications: 2014)

Ram Ahuja, *Social Problems in India* (Jaipur: Rawat Publications: 2014)

Richard Maxwell Eaton, *The Sufis of Bijapur 1300-1700* (New Jersey: Princeton university press: 1978)

Rudolf C Heredia, *Denotified and Nomadic Tribes: The Challenge of Free and Equal Citizenship* (Pune: Occasional Paper Series: Dept. of Sociology University of Pune: 2007)

Sharma K L (Ed), *Caste and Class in India* (Jaipur: Rawat Publications: 2005)

Shashi S S, Varma P S, *A Socio-History of Ex-Criminal Communities OBCs* (New Delhi: Sandeep Prakashan: 1991)

Simhadri Y C, *Denotified Tribes* (New Delhi: Classical Publishing co.: 1991)

Singh K S (Ed), *People of India- Karnataka Series* (New Delhi: Affiliated East-west press: 2003) vol-XXVI

Subba Rao M, *Understanding – Denotified and Nomadic Tribes* (Hyderabad: actionaid: 2013)

Vinay Kumar Nulkar, M K Muthumani, *Scheduled Caste and Scheduled Tribes In India* (New Delhi: Common Wealth Publishers: 2014)

Vinayak Shriram Irpate, *Sociology of Tribal Society* (New Delhi: Agri-Bio vet Press: 2014)

William J Goode, Paul K Hatt, *Methods in Social Research* (Delhi: Surjeet Publications: 2006)

**Reports**

Annual Report on the working of the Criminal Tribes Act in the Bombay Presidency (Bombay: Govt. Central Press 1934, 1936, 1937, 1938)

Draft list of Denotified, Nomadic and Semi-Nomadic Tribes of India (NewDelhi: Govt.of India: National Commission for Denotified, Nomadic and Semi-Nomadic Tribes: Ministry of social justice & empowerment)

EDUCATIONAL STATUS OF DNTs IN KARNATAKA: ATTAINMENTS AND CHALLENGES CFINAL REPORT), KARNATAKA FEDERATION OF NOMADIC, SEMI NOMADIC AND DE-NOTIFIED TRIBES CR), BENGALURU, AUGUST 2014

Report of National Commission For Denotified, Nomadic and Semi-nomadic Tribes (Govt. Of India: Ministry of social Justice and Empowerment: June 2008)

Report of XII plan working Group on "empowerment of the other Backward Classes (OBCs), EBCs and Nomadic, Semi-nomadic and Denotified Tribes" (Govt of India: Ministry of Social Justice and Empowerment October, 2011)

The Criminal Tribes Act Enquiry Committee Report -1949-50 (Delhi: Govt. of India Press)

The Gazette of India- 1928 (New Delhi: Govt. Of India press: 2007)

**Articles**

Sabiha Naz, Chapparband: A Marginalaised Muslim Community (Chalukya Journal of Social Sciences Vol 1: Gulbarga: Kalyan Literary and Educational Trust: 2014)

Sabiha Naz, Craft-Coins of Chapparband: A Denotified Community of Karnataka (Chalukya Journal of Social Sciences Vol 2: Gulbarga: Kalyan Literary and Educational Trust: 2014)

Sabiha Naz, The Historical Background of Chapparband De-notified Tribe (Printing Area Vol 6: Maharashtra: Harshawardhan Publication Pvt.Ltd.: Aug 2017)

**Journals**

Jalajakshi (Ed), Chalukya Journal of Social Sciences (Gulbarga: Kalyan Literary and Educational Trust: 2014) Vol 1 & 2

Jalajakshi (Ed), Chalukya Journal of Social Sciences (Gulbarga: Kalyan Literary and Educational Trust: 2016) Vol IV

Bapu G. Gholap (Ed), Printing Area- International Multilingual Research Journal (Maharashtra: Harshawardhan Publication Pvt. Ltd.: Aug 2017) Vol 6

**Websites**

https://kn.wikipedia.org/w/index.php?title=ಧಾರವಾಡ&oldid=530930

https://kn.wikipedia.org/w/index.php?title=ಗದಗ&oldid=583652

https://kn.wikipedia.org/w/index.php?title=ಬಾಗಲಕೋಟೆ&oldid=531030

https://kn.wikipedia.org/w/index.php?title=ವಿಜಯಪುರ&oldid=591180

https://en.wikipedia.org/w/index.php?title=Hubli&oldid=751372292

https://kn.wikipedia.org/w/index.php?title=ದಾವಣಗೆರೆ&oldid=731206



೧. ಫಕೀರ



೨. ಬ್ರಿಟಿಷರ ಕಾಲಾದ ಬಡಿಗರ ಕಾರ್ಖಾನೆಯ ಫಲಕ- ಗದಗ ಸೆಟ್ಲ್‌ಮೆಂಟ್



೩. ಗದಗ ಸೆಟ್ಲ್‌ಮೆಂಟ್



೪. ಮಾಹಿತಿ ನೀಡುತ್ತಿರುವ ವಯೋವೃದ್ಧರು- ಗದಗ ಸೆಟ್ಲ್‌ಮೆಂಟ್







೬.೧ ಚಪ್ಪರ್‌ಬಂದ್ ಕಾಲೋನಿ-ಧಾರವಾಡ



೭ ಜಾನಪದ ಕಲಾ ತಂಡ-ಗದಗ ಸೆಟ್ಲ್‌ಮೆಂಟ್



೮.೧. ಮಾಹಿತಿ ನೀಡುತ್ತಿರುವ ಚಪ್ಪರ್‌ಬಂದ್ ಸಮುದಾಯದವರು- ವಿಜಯಪುರ ಸೆಟ್ಲ್‌ಮೆಂಟ್



೮.೨. ಮಾಹಿತಿ ನೀಡುತ್ತಿರುವ ಚಪ್ಪರ್‌ಬಂದ್ ಸಮುದಾಯದವರು- ವಿಜಯಪುರ ಸೆಟ್ಲ್‌ಮೆಂಟ್



೮.೩. ಮಾಹಿತಿ ನೀಡುತ್ತಿರುವ ಚಪ್ಪರ್‌ಬಂದ್ ಸಮುದಾಯದವರು- ವಿಜಯಪುರ ಸೆಟ್ಲ್‌ಮೆಂಟ್



೯ ಮಾಹಿತಿ ನೀಡುತ್ತಿರುವ ಚಪ್ಪರ್‌ಬಂದ್



೧೦. ಚಪ್ಪರ್‌ಬಂದ್ ಸಮುದಾಯದ ಜಾತಿ ಪ್ರಮಾಣ ಪತ್ರ

೧೧. ಚಪ್ಪರ್‌ಬಂದ್ ಸಮುದಾಯದ ನಿಖಾ ನಾಮಾ(ಮದುವೆ ಪ್ರಮಾಣ ಪತ್ರ)



೧೨.೧. ಚಪ್ಪರ್‌ಬಂದ್ ಸಮುದಾಯದವರು ಪೂಜಿಸುವ ನಶಾಮಾತಾ ವಿಗ್ರಹಗಳು



೧೨.೨. ಚಪ್ಪರ್‌ಬಂದ್ ಸಮುದಾಯದವರು ಪೂಜಿಸುವ ನಶಾಮಾತಾ ವಿಗ್ರಹಗಳು



೧೨.೩. ಚಪ್ಪರ್‌ಬಂದ್ ಸಮುದಾಯದವರು ಪೂಜಿಸುವ ನಶಾಮಾತಾ ವಿಗ್ರಹಗಳು



೧೩.೧. ಶರ್‌ಗತ್ ಆಚರಣೆ



೧೩.೨ ಶರ್‌ಗತ್ ಆಚರಣೆ



೧೪. ಬಳೆ ಶಾಸ್ತ್ರ









೧೫.೧. ಬೀಗರನ್ನು ಎದುರುಗೊಳ್ಳುವ ಮತ್ತು ಡಾಲಿ ಶಾಸ್ತ್ರ









೧೫.೨.. ಬೀಗರನ್ನು ಎದುರುಗೊಳ್ಳುವ ಮತ್ತು ಡಾಲಿ ಶಾಸ್ತ್ರ



೧೫.೩. ಬೀಗರನ್ನು ಎದುರುಗೊಳ್ಳುವ ಮತ್ತು
ಡಾಲಿ ಶಾಸ್ತ್ರ



೧೬. ಚಾಕಿ ಪೂಜಾ










೧೭.೧, ೧೭.೨ ಅರಿಶಿಣ ಶಾಸ್ತ್ರ



೧೮. ಡೋಲಕ್ ಬಾರಿಸುತ್ತಾ ಮದುವೆಯಲ್ಲಿ
ಹಾಡುಗಳನ್ನು ಹಾಡುತ್ತಿರುವುದು



೧೯. ಮದುವೆಯ ದಾಖಾಲಾತಿ ಪುಸ್ತಕದಲ್ಲಿ
ಮದುಮಗನ ಸಹಿ ಪಡೆಯುತ್ತಿರುವುದು





೨೦.೧, ೨೦.೨ ತಮ್ಮ ಸಮುದಾಯವನ್ನು
ಎಸ್ ಟಿ ಪಟ್ಟಿಯಲ್ಲಿ ಸೇರಿಸುವಂತೆ
ಹೋರಾಟ ಮಾಡುತ್ತಿರುವುದು

ಚಪ್ಪರಬಂದ ಸಮಾಜ ಪರಿಶಿಷ್ಟ ಪಂಗಡದಲ್ಲಿ ಸೇರ್ಪಡೆಯಾಗೆ ಒತ್ತಾಯ



ಕರ್ನಾಟಕ ರಾಜ್ಯ ಚಪ್ಪರಬಂದ ಸಮಾಜ ಸಮಿತಿ (ರಿ)

ಸೋಟು ಛಾಪಿಸಿದ ಚಪ್ಪರ್‌ಬಂದ್ ಬದುಕಿಗಿಲ್ಲ ಸುಪಿದ ಛಾಪು

ಮುನೇಶ್ವರ ಪೂಜೆ ನಡೆಸುವ

೨೧.೧, ೨೧.೨ ಪತ್ರಿಕಾ ವರದಿಗಳು



೨೨. ಇವರು ತಯಾರಿಸುತ್ತಿದ್ದ ನಕಲಿ ನಾಣ್ಯಗಳು



೨೩. ಮಹಿಳೆಯರು ಕೌದಿ



೨೪. ಜಾತ್ರೆಗಳಲ್ಲಿ ಉಯ್ಯಾಲೆ ಆಡಿಸುತ್ತಿರುವುದು



೨೫. ಬಡಗಿ ಕೆಲಸ ಮಾಡುತ್ತಿರುವುದು



೨೬.೧, ದರ್ಗಾ ಕಟ್ಟೆ




೨೬.೨ ದರ್ಗಾ ಕಟ್ಟೆ

